# ಮಧ್ಯಕಾಲೀನ ಕರ್ನಾಟಕದಲ್ಲಿ ಕುಶಲಕರ್ಮಿಗಳು ಒಂದು ಸಾಮಾಜಿಕ ಮತ್ತು ಚಾರಿತ್ರಿಕ ಅಧ್ಯಯನ

ಪಿಎಚ್.ಡಿ., ಪದವಿಗಾಗಿ ಕುವೆಂಪು ವಿಶ್ವವಿದ್ಯಾನಿಲಯಕ್ಕೆ
ಸಲ್ಲಿಸಿದ ಮಹಾಪ್ರಬಂಧ


ಸಂಶೋಧಕರು

**ಸಿದ್ದಲಿಂಗಮ್ಮ, ಬಿ.ಜಿ.**
ಇತಿಹಾಸ ಮತ್ತು ಪ್ರಾಕ್ತನಶಾಸ್ತ್ರ ವಿಭಾಗ
ಕುವೆಂಪು ವಿಶ್ವವಿದ್ಯಾನಿಲಯ

ಮಾರ್ಗದರ್ಶಕರು

**ಡಾ. ರಾಜಾರಾಮ ಹೆಗಡೆ**
ಪ್ರವಾಚಕರು
ಇತಿಹಾಸ ಮತ್ತು ಪ್ರಾಕ್ತನಶಾಸ್ತ್ರ ವಿಭಾಗ
ಕುವೆಂಪು ವಿಶ್ವವಿದ್ಯಾನಿಲಯ



ಇತಿಹಾಸ ಮತ್ತು ಪ್ರಾಕ್ತನಶಾಸ್ತ್ರ ವಿಭಾಗ, ಕುವೆಂಪು ವಿಶ್ವವಿದ್ಯಾನಿಲಯ
ಜ್ಞಾನ ಸಹ್ಯಾದ್ರಿ, ಶಂಕರಘಟ್ಟ - 577 451
ಶಿವಮೊಗ್ಗ ಜಿಲ್ಲೆ

2007

# ಕುವೆಂಪು ವಿಶ್ವವಿದ್ಯಾನಿಲಯ

**ಸಿದ್ದಲಿಂಗಮ್ಮ ಬಿ.ಜಿ.**
*ಸಂಶೋಧಕರು*

*ಇ/ಮ ಈಶ್ವರಪ್ಪ ಜಿ.*
*ಸಹಾಯಕ ರಾಜ್ಯ ಸಂಘಟನಾಯುಕ್ತರು*
*ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್*
*ಕೊಂಡಜ್ಜಿ ಪೋಸ್ಟ್*
*ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆ*
*ಸಂಚಾರಿ : 9845225659*

---

## ಅಭ್ಯರ್ಥಿಯ ಪ್ರಮಾಣ ಪತ್ರ

**ಡಾ. ರಾಜಾರಾಮ ಹೆಗಡೆ**, ಪ್ರವಾಚಕರು, ಇತಿಹಾಸ ಮತ್ತು ಪ್ರಾಕ್ತನಶಾಸ್ತ್ರ ವಿಭಾಗ, ಕುವೆಂಪು ವಿಶ್ವವಿದ್ಯಾನಿಲಯ ಇವರ ಮಾರ್ಗದರ್ಶನದಲ್ಲಿ **"ಮಧ್ಯಕಾಲೀನ ಕರ್ನಾಟಕದಲ್ಲಿ ಕುಶಲಕರ್ಮಿಗಳು ಒಂದು ಸಾಮಾಜಿಕ ಮತ್ತು ಚಾರಿತ್ರಿಕ ಅಧ್ಯಯನ"** ಎಂಬ ವಿಷಯದ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕುವೆಂಪು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದೇನೆ. ಈ ಸಂಶೋಧನ ಮಹಾಪ್ರಬಂಧದ ಯಾವುದೇ ವಿಷಯವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶಕ್ಕಾಗಿ ಅಥವಾ ಪದವಿಗಾಗಿ ಬಳಸಿಕೊಂಡಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 02/08/2007
ಸ್ಥಳ : ಜ್ಞಾನ ಸಹ್ಯಾದ್ರಿ

Siddalingamma BG
**(ಸಿದ್ದಲಿಂಗಮ್ಮ, ಬಿ.ಜಿ.)**

ಕುವೆಂಪು ವಿಶ್ವವಿದ್ಯಾನಿಲಯ

**ಡಾ. ರಾಜಾರಾಮ ಹೆಗಡೆ**
*ಪ್ರವಾಚಕರು ಮತ್ತು ಮಾರ್ಗದರ್ಶಕರು*

*ಇತಿಹಾಸ ಮತ್ತು ಪ್ರಾಕ್ತನಶಾಸ್ತ್ರ ವಿಭಾಗ*
*ಜ್ಞಾನ ಸಹ್ಯಾದ್ರಿ*
*ಶಂಕರಘಟ್ಟ - 577 451*
*ಶಿವಮೊಗ್ಗ ಜಿಲ್ಲೆ*
*ಸಂಚಾರಿ : 9448682997*

# ಮಾರ್ಗದರ್ಶಕರ ದೃಢೀಕರಣ ಪತ್ರ

**ಸಿದ್ದಲಿಂಗಮ್ಮ, ಬಿ.ಜಿ.** ಅವರು **"ಮಧ್ಯಕಾಲೀನ ಕರ್ನಾಟಕದಲ್ಲಿ ಕುಶಲಕರ್ಮಿಗಳು ಒಂದು ಸಾಮಾಜಿಕ ಮತ್ತು ಚಾರಿತ್ರಿಕ ಅಧ್ಯಯನ"** ಎಂಬ ವಿಷಯದ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಯ ಅವಶ್ಯಕತೆಗಾಗಿ ಕುವೆಂಪು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲೆಂದು ನನ್ನ ಸಲಹೆ ಹಾಗೂ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಮಹಾಪ್ರಬಂಧವು ಸಂಶೋಧಕರ ಸ್ವಂತ ಸಂಶೋಧನೆಯ ಮೂಲಕ ರೂಪುಗೊಂಡಿದೆ. ಈ ಮಹಾಪ್ರಬಂಧದ ವಿಷಯವನ್ನು, ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರೆ ಉದ್ದೇಶಕ್ಕಾಗಲಿ ಇವರು ಒಪ್ಪಿಸಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 02/08/2007
ಸ್ಥಳ : ಜ್ಞಾನ ಸಹ್ಯಾದ್ರಿ

Rajaram Hegde
**(ಡಾ. ರಾಜಾರಾಮ ಹೆಗಡೆ)**
.. Rajaram Hegde
. History And Archaeo.
VEMPU UNIVERSITY
NKARAGHATTA-577.
SHIMOGA

## ಎನಿತು ಜೀವರಿಗೆ ಎನಿತು ರೀತಿಯಲ್ಲಿ ಎನಿತು ನಾನು ಋಣಿಯೋ

ಪೂಜ್ಯ ವಿದ್ಯಾ ಗುರುಗಳು ಹಾಗೂ ನನ್ನ ಸಂಶೋಧನ ಮಾರ್ಗದರ್ಶಕರೂ ಆದ **ಡಾ. ರಾಜಾರಾಮ ಹೆಗಡೆಯವರು** ನನ್ನನ್ನು ಸಂಶೋಧನ ವಿದ್ಯಾರ್ಥಿಯಾಗಿ ತೆಗೆದುಕೊಂಡು ಸಂಶೋಧನ ಅಧ್ಯಯನದುದ್ದಕ್ಕೂ ತೋರಿದ ಅನನ್ಯ ಸಹಕಾರ, ಮೌಲ್ಯಯುತ ಮಾರ್ಗದರ್ಶನ, ಸಲಹೆ, ಸಹಕಾರ, ಪ್ರೀತಿ, ಕಳಕಳಿಗಳು ಅಪಾರ. ಅದಕ್ಕಾಗಿ ನಾನು ಅವರಿಗೆ ಮೊಟ್ಟ ಮೊದಲು ನನ್ನ ಪ್ರಾಂಜಲ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ಮತ್ತೊಬ್ಬ ಪ್ರೀತಿಯ ವಿದ್ಯಾ ಗುರುಗಳು ಹಾಗೂ ಪ್ರಸ್ತುತ ದೂರಶಿಕ್ಷಣದ ನಿರ್ದೇಶಕರೂ ಆದ ಪ್ರೊ. ಎಸ್.ಎ. ಬಾರಿ, ಅವರಿಗೂ ಕೂಡ ಗೌರವದಿಂದ ಕೃತಜ್ಞತೆ ಸಲ್ಲಿಸುವೆ.

ನನ್ನಲ್ಲಿ ವಾಂಛೆಯನ್ನು ಇಮ್ಮಡಿಗೊಳಿಸಿದ ಪೂಜ್ಯ ಗುರುವರ್ಯ ಪ್ರೊ. ಅ. ಸುಂದರ, ಅವರಿಗೂ ಕೃತಜ್ಞತೆ ಸಲ್ಲಿಸುತ್ತೇನೆ.

ನಮ್ಮ ವಿಶ್ವವಿದ್ಯಾನಿಲಯದ ಹಿಂದಿನ ಕುಲಸಚಿವರಾಗಿದ್ದ ಪ್ರವೀಣ ಚಂದ್ರ ಪಾಂಡೆ, IFS, ಇವರಿಗೂ ನಾನು ಕೃತಜ್ಞಳು. ಡಾ. ಚಿದಾನಂದ ಗೌಡ, ಪ್ರೊ. ಬಿ.ಎಸ್. ಶೇರಿಗಾರ, ಶ್ರೀ ಉದಯ ಕುಮಾರ್ ಇವರಿಗೂ ಕೂಡ ನನ್ನ ಕೃತಜ್ಞತೆಗಳು.

ವಿಭಾಗದ ಮುಖ್ಯಸ್ಥರಾದ ಡಾ. ಅನುರಾಧ ಪಟೇಲ್, ಉಪನ್ಯಾಸಕರುಗಳಾದ ಶ್ರೀಮತಿ ಸರ್ವಮಂಗಳ, ಜಿ., ಡಾ. ಶಿವಸ್ವಾಮಿ, ಇವರನ್ನು ಕೂಡ ಈ ಅವಧಿಯಲ್ಲಿ ನೆನೆಯುವೆ.

ನನ್ನ ಸಂಶೋಧನೆಗೆ ಶಿಷ್ಯ ವೇತನದ ಮೂಲಕ ಸಹಾಯ ನೀಡಿದ ಕುವೆಂಪು ವಿಶ್ವವಿದ್ಯಾನಿಲಯ, ಹಾಗೂ ಭಾರತೀಯ ಇತಿಹಾಸ ಅನುಸಂಧಾನ ಪರಿಷತ್, ನ್ಯೂಡೆಲ್ಲಿ (ICHR) ಇವರಿಗೂ ನಾನು ಕೃತಜ್ಞಳು.

ನನ್ನ ಈ ಸಂಶೋಧನೆಯ ಅವಧಿಯಲ್ಲಿ ಸಲಹೆ ಸೂಚನೆಗಳನ್ನು ಕೊಟ್ಟವರ ಸಂಖ್ಯೆ ಬಹು ದೊಡ್ಡದಿದೆ. ಅದರಲ್ಲೂ ಮುಖ್ಯವಾಗಿ ಪ್ರೊ. ಎಂ. ಚಿದಾನಂದಮೂರ್ತಿ, ಪ್ರೊ. ಡಿ.ಎಸ್. ಸೋಮಶೇಖರ್, ಡಾ. ಶ್ರೀನಿವಾಸ ಪಾಡಿಗಾರ್, ಡಾ. ಕೆ.ಎಸ್. ಕುಮಾರಸ್ವಾಮಿ, ಡಾ. ಜಗದೀಶ್, ಡಾ. ಅರುಣಿ, ಡಾ. ರು.ಮ. ಷಡಕ್ಷರಯ್ಯ, ಡಾ. ಡಿ.ವಿ. ಪರಮಶಿವಮೂರ್ತಿ, ಡಾ. ಬಿ. ರಾಜಶೇಖರಪ್ಪ ಡಾ. ದೇವರಕೊಂಡಾರೆಡ್ಡಿ, ಡಾ. ಟಿ.ಪಿ. ವಿಜಯ್, ಡಾ. ಭಟ್ಟ ಸೂರಿ, ಡಾ. ಲಕ್ಷ್ಮಣ್ ತೆಲಗಾವಿ, ಡಾ. ಹನುಮನಾಯಕ್, ಡಾ. ಎ.ಕೆ. ಶಾಸ್ತ್ರಿ ಡಾ. ಸೂರ್ಯನಾಥ್ ಕಾಮತ್, ಶ್ರೀ ರಾಮಮೂರ್ತಿ, ದಾವಣಗೆರೆ, ಡಾ. ಪ್ರಸನ್ನ ಕುಮಾರ್, ಸಹೋದರ ಡಾ. ಮಧು, (ದಾವಣಗೆರೆ), ಇವರಿಗೂ ನನ್ನ ಪ್ರೀತಿಯ ಕೃತಜ್ಞತೆಗಳು.

ಪರೋಕ್ಷವಾಗಿ ಸಹಕರಿಸಿದ ಡಾ. ಐ.ಕೆ. ಪತ್ತಾರ್, ಡಾ. ಕೆ.ಆರ್. ಬಸವರಾಜು, ಡಾ. ರವಿಕೋರಿ ಶೆಟ್ಟರ್, ಡಾ. ಹೆಚ್.ಎಸ್. ಗೋಪಾಲ ರಾವ್, ಡಾ. ಎಂ.ಜಿ. ನಾಗರಾಜ್, ಡಾ. ಎಂ.ಎಸ್. ನಾಗರಾಜ್, ಡಾ. ವಸಂತಲಕ್ಷ್ಮಿ, ಡಾ. ಚೆನ್ನಕ್ಕಪಾವಟೆ, ಡಾ. ಹನುಮಾಕ್ಷಿಗೋಗಿ, ಡಾ. ಜ್ಯೋತ್ಸ್ನಾ ಕಾಮತ್, ಡಾ. ಕರುಣಾ, ಡಾ. ಎಸ್. ಚಂದ್ರಶೇಖರ್, ಶ್ರೀ ಜಯದೇವಪ್ಪ ಜೈನಕೇರಿ, ಮೊದಲಾದವರಿಗೂ ನನ್ನ ಆತ್ಮೀಯ ಕೃತಜ್ಞತೆಗಳು.

ನಮ್ಮ ವಿಶ್ವವಿದ್ಯಾನಿಲಯದ ಡಾ. ಉಮಾ ಹೆಗಡೆ, ಪ್ರೊ. ಜೆ.ಎಸ್. ಸದಾನಂದ, ಪ್ರೊ. ರಾಜೇಂದ್ರ ಚೆನ್ನಿ, ಪ್ರೊ. ಅಬ್ದುಲ್ ರೆಹಮಾನ್, ಡಾ. ಕೇಶವ ಶರ್ಮ, ಪ್ರೊ. ಮಹಾದೇವಯ್ಯ, ಪ್ರೊ. ತೀ.ನಂ. ಶಂಕರನಾರಾಯಣ, ಡಾ. ಕುಮಾರ ಚಲ್ಯ, ಡಾ. ರೇಚಲ್ ಬಾರಿ, ಡಾ. ವಸಂತ ಪೈ, ಡಾ. ರಂಗರಾಜ ವನದುರ್ಗ ಇವರಿಗೂ ಕೂಡ ನಾನು ಕೃತಜ್ಞಳು.

ಪಿತೃ ವಾತ್ಸಲ್ಯ ನೀಡಿದ ಬಸವಣ್ಣ ಎಸ್., ಅಮ್ಮ ಮಂಜುಳ ಹಾಗೂ ಅವಿನಾಶ್, ಅಶ್ವಿನಿ, ಇವರೆಲ್ಲರನ್ನೂ ಪ್ರೀತಿಯಿಂದ ನೆನೆಯುವೆ.

ಸಂಶೋಧನ ವಿಷಯದ ವಿಷಯ ಸಂಗ್ರಹಣೆಗಾಗಿ ಭೇಟಿ ನೀಡಿದ ಬೆಂಗಳೂರಿನ ICHR ಗ್ರಂಥಾಲಯ, ಮಿಥಿಕ್ ಸೊಸೈಟಿ, ಬಸವ ಸದನ, ವಿ.ವಿ. ಗ್ರಂಥಾಲಯ, ಮೈಸೂರಿನ ಓರಿಯಂಟಲ್ ಗ್ರಂಥಾಲಯ, ಶಾಸನಶಾಸ್ತ್ರ ಗ್ರಂಥಾಲಯ, ವಿ.ವಿ. ಗ್ರಂಥಾಲಯ ಹಾಗೂ ASI ಗ್ರಂಥಾಲಯ, ಧಾರವಾಡದ ವಿ.ವಿ. ಗ್ರಂಥಾಲಯ ಹಾಗೂ KRI ಗ್ರಂಥಾಲಯ, ಗುಲ್ಬರ್ಗಾ ವಿ.ವಿ. ಗ್ರಂಥಾಲಯ, ಹಂಪಿಯ ವಿ.ವಿ. ಗ್ರಂಥಾಲಯಗಳು ಹಾಗೂ ಮಂಗಳೂರು ವಿ.ವಿ. ಗ್ರಂಥಾಲಯ, ಈ ಎಲ್ಲಾ ಗ್ರಂಥಾಲಯಗಳ ಗ್ರಂಥಪಾಲಕರು ಹಾಗೂ ಸಿಬ್ಬಂದಿ ವರ್ಗ ನನ್ನ ಮೇಲೆ ತೋರಿದ ಪ್ರೀತಿಯನ್ನು ಮನಸಾರೆ ನೆನೆಯುವೆ. ನಮ್ಮ ವಿ.ವಿ.ಯ (ಕುವೆಂಪು) ಗ್ರಂಥಪಾಲಕರಾದ ಡಾ. ರಾಮಕೃಷ್ಣೇಗೌಡ, ಶ್ರೀಮತಿ ತಹಸೀನ್ ಜಹನ್ ಮತ್ತು ಶ್ರೀ ವಾಲ್ಮೀಕಿ, ಶ್ರೀ ತುಕಾರಾಂ, ಶ್ರೀ ಬಸಪ್ಪಬೋವಿ ಹಾಗೂ ಸಿಬ್ಬಂದಿಯ ಎಲ್ಲರಿಗೂ ನನ್ನ ಪ್ರೀತಿಯ ನಮನಗಳು.

ತಮ್ಮ ಪ್ರಾಣದಷ್ಟು ಪ್ರೀತಿಸಿ ಸದಾ ನನ್ನ ಶ್ರೇಯಸ್ಸು ಬಯಸುವ ಪ್ರೀತಿಯ ಅಮ್ಮ, ಅಪ್ಪಾಜಿ, ಒಲವಿನ ಅಕ್ಕಂದಿರಾದ ಶಶಿಕಲ, ಲಲಿತ, ಅಕ್ಕರೆಯ ಅಣ್ಣಂದಿರಾದ ಕೊಟ್ರೇಶ್, ಹನುಮಂತ ಗೌಡ, ಬಸವನ ಗೌಡ, ತಮ್ಮಂದಿರಾದ ಮುದ್ದಿನ ಬಾಬು ಹಾಗೂ ಚಂದು (ಪಾಟೀಲ್), ಮಾಮ ವಿಜಯ ಕುಮಾರ್, ಅಜ್ಜಿ ಮುದ್ದಿನ ಮಕ್ಕಳಾದ ದಿವ್ಯ, ದರ್ಶನ್, ಅತ್ತೆ ಮಾಮಂದಿರು, ಚಿಕ್ಕಪ್ಪಂದಿರು ಹಾಗೂ ನನ್ನ ಇತರೆ ಬಂಧುಗಳನ್ನು ಮನಸಾರೆ ನೆನೆಯುವೆ.

ನನ್ನ ಪ್ರಾಥಮಿಕ ಹಂತದ ಗುರುಗಳಾದ ಶ್ರೀ ಶಂಕರಯ್ಯ, ಶ್ರೀಮತಿ ಕಮಲಮ್ಮ, ಶ್ರೀಮತಿ ರುದ್ರಮ್ಮ, ಶ್ರೀಮತಿ ಉಷಾ, ಶ್ರೀ ಶೇಖರಪ್ಪ ಶ್ರೀ ಸಿದ್ದಪ್ಪ, ಪ್ರೌಢಶಾಲಾ ಹಂತದ ಗುರುಗಳಾದ ಪ್ರೀತಿಯ ಶ್ರೀ ಜೆ.ಎಚ್. ಪೂಜಾರ್, ಶ್ರೀ ತಿಮ್ಮಣ್ಣ, ಶ್ರೀಮತಿ ಶಕುಂತಲ, ಶ್ರೀಮತಿ ರಾಜೇಶ್ವರಿ, ಶ್ರೀ ಭರಮಪ್ಪ, ಶ್ರೀ ನಾರಪ್ಪ ಶ್ರೀ ವಿವೇಕಾನಂದ ಸ್ವಾಮಿ, ಕಾಲೇಜು ಹಂತದ ಗುರುಗಳಾದ ಶ್ರೀದೊಡ್ಡಮನಿ, ಶ್ರೀ ಜಿ. ನಾರಾಯಣ, ಶ್ರೀ ವಿಶ್ವನಾಥ ಎಂ., ಶ್ರೀ ಜಿ.ಬಿ. ಚಂದ್ರಶೇಖರ್, ಶ್ರೀ ಬಸಯ್ಯ, ಶ್ರೀ ಸವಣೂರು, ಶ್ರೀಮತಿ ಪ್ರೇಮ, ಶ್ರೀ ಕರಿಸಿದ್ದಪ್ಪ ಹಾಗೂ ಶ್ರೀ ಹಿರೇಮಠ, ಶ್ರೀ ಸಿ.ಜೆ. ಶಿವಲಿಂಗಪ್ಪ ಶ್ರೀ ಮುರುಗೇಂದ್ರಪ್ಪ ಶ್ರೀ ಬಿ.ಪಿ. ಕುಮಾರ್, ಶ್ರೀಮತಿ ಬಸಮ್ಮ, ಶ್ರೀಮತಿ ಸುನಂದ, ಶ್ರೀ ಷಣ್ಮುಖಪ್ಪ ಶ್ರೀ ಪಾಟೀಲ್, ಶ್ರೀ ಕೃಷ್ಣಪ್ರಕಾಶ್, ಇವರಿಗೂ ನನ್ನ ಪ್ರೀತಿಯ ಕೃತಜ್ಞತೆಗಳು.

ನಾನು ಕ್ಷೇತ್ರಕಾರ್ಯಕ್ಕೆ ವಾಜಮಂಗಲ, ಚಟ್ಟನಹಳ್ಳಿ ಪಾಳ್ಯ, ಚಿಕ್ಕೇರೂರು ಮೊದಲಾದೆಡೆ ಹೋದಾಗ ಆ ಊರಿನ ಗ್ರಾಮಸ್ಥರು ನೀಡಿದ ಸಹಾಯವನ್ನು ಈ ಅವಧಿಯಲ್ಲಿ ನೆನೆಯುವೆ.

ಸಹೃದಯ ಸ್ನೇಹಿತ ಡಾ. ರವಿ, ಭದ್ರಾವತಿಯವರು ನನ್ನ ಸಂಶೋಧನೆಯ ಪ್ರತೀ ಹಂತದಲ್ಲೂ ನೆರವಾಗಿದ್ದಾರೆ. ತಮ್ಮಲ್ಲಿದ್ದ ಮೌಲಿಕ ಪುಸ್ತಕಗಳನ್ನು ನೀಡುವುದರ ಜೊತೆಗೆ ಚರ್ಚೆ ಮತ್ತು ಸಂವಾದಗಳ ಮೂಲಕ ಈ ಸಂಶೋಧನೆಗೆ ನೆರವಾಗಿದ್ದಾರೆ. ಅವರಿಗೂ ನಾನು ಕೃತಜ್ಞಳು.

ನನ್ನ ಮತ್ತೊಬ್ಬ ಪ್ರಾಂಜಲ ಮನಸ್ಸಿನ ಸ್ನೇಹಿತ ಐ.ಬಿ. ಬಿರಾದಾರ್, ನನ್ನ ಸಂಶೋಧನ ಅವಧಿಯ ಪ್ರತೀ ಹಂತದಲ್ಲೂ ನನಗೆ ಸಲಹೆ ಸಹಾಯ, ಸಹಕಾರ, ಪ್ರೋತ್ಸಾಹ ನೀಡಿದ್ದಾರೆ. ಇವರಿಗೂ ಕೂಡ ನನ್ನ ಆತ್ಮೀಯ ಕೃತಜ್ಞತೆಗಳು.

ನಿಷ್ಕಲ್ಮಶ ಮನಸ್ಸಿನ ಸ್ನೇಹಿತೆ ಕವಿತ (ಬಿ.ಆರ್.ಪಿ.), ಅಕ್ಕ ರಮಾ, ಅಪ್ಪಾಜಿ ಹಾಗೂ ಮನೆಯವರೆಲ್ಲರಿಗೂ ನಾನು ಕೃತಜ್ಞಳು.

ನಮ್ಮ ವಿಭಾಗದ ಡಾ. ಕುಬೇರಪ್ಪ ಡಾ. ಮಂಜುನಾಥ್, ಡಾ. ಪ್ರಭಾಕರ ರಾವ್, ರವಿಕುಮಾರ್, ಚಂದ್ರಮ್ಮ, ರಾಜಾರಾಮ್, ದೇವರಾಜ, ಲೋಕೇಶ್, ಮುರುಗನ್, ಶಿವರುದ್ರಪ್ಪ ಇವರನ್ನು ನೆನೆಯುವೆ. ನಿರಂಜನ್ (ಭದ್ರಾವತಿ), ಅನಿಲ್ (ತುಮಕೂರು), ಲೀಲಾ (ಅನಂತಪುರ್), ಸಂಗೀತ ಸುರಜ್ (ಹಳಿಯಾಳ್), ಬಾಬಣ್ಣ (ವಾಜಮಂಗಲ), ರಾಜೇಂದ್ರ, ರಮೇಶ್ (ಬುಳ್ಳಾಪುರ), ರಮೇಶ್ ಸಿ.ಎಸ್., ಸ್ವಯಂ ಪ್ರಭಾ ಇವರನ್ನು ಪ್ರೀತಿಯಿಂದ ನೆನೆಯುವೆ.

ನನ್ನ ಸ್ನೇಹಿತರುಗಳಾದ ಧಾರವಾಡದ ಚಂದ್ರಶೇಖರ್ ತಾಬೋಜಿ, ಜಯಮ್ಮ, ಜಯಶ್ರೀ, ವನಜಾಕ್ಷಿ, ಮೈಸೂರಿನ ಯೋಗೀಶ್, ನಾಗರಾಜ, ಗುಲ್ಬರ್ಗಾದ ಗಾಂಧೀಜಿ, ನಿರ್ಮಲಕರ, ಹಂಪಿಯ ಗಿರಿಜಾ, ಸುಮನ, ಲೋಹಿತ, ಮಂಗಳೂರಿನ ಸಂದೀಪ್ ಮತ್ತು ರೋಹಿತ್, ಮಧುಶ್ರೀ, ಅನುಶ್ರೀ, (ಶಿವಮೊಗ್ಗ), ಭಾರತಿ (ಶಿವಮೊಗ್ಗ), ರೇಣುಕ, ಸೌಮ್ಯ, ಲತ, ಶೀಲ, ಅಪರ್ಣ, ವಿಂಧ್ಯಾ, ನಾಗರತ್ನ ಗಿರಿಜಾ, ತ್ರಿವೇಣಿ, ಶೈಲಜ, ನಂದಿನಿ, ಶಶಿಕಲ, ಇಂದು, ಆಶಾ, ಶಿಲ್ಪ ಜ್ಯೋತಿ, ಸ್ನೇಹ, ಶಿಲ್ಪ ಪೂರ್ಣಿಮಾ, ಭಾರತಿ (ಶಂಕರಘಟ್ಟ), ಶಂಕರಮೂರ್ತಿ, ಕಲ್ಲೇಶ್, ಸಂತೋಷ್, ಶಿವಣ್ಣ ಮೃತ್ಯುಂಜಯ, ರಾಜಶೇಖರ್, ಮನೋಹರ್, ಲೋಕೇಶ್, ರಂಗಪ್ಪ ಹನುಮಂತಪ್ಪ ಬೋರಯ್ಯ, ಅಣ್ಣಯ್ಯ, ಮೈಲಾರಪ್ಪ ಮೊದಲಾದ ಸ್ನೇಹಿತರನ್ನು ಅಕ್ಕರೆಯಿಂದ ನೆನೆಯುವೆ ಹಾಗೂ ಶ್ರೀ ಬಸವೇಶ್, ಶ್ರೀಮತಿ ತಾರಾ ಮೇಡಂ, ಶ್ರೀ ವಿಜಯ್, ಶ್ರೀ ಮಂಜುನಾಥ, ಶ್ರೀ ಆಲಿ, ಶ್ರೀ ಕುಪ್ಪಸ್ವಾಮಿ ಇವರಿಗೂ ನಾನು ಕೃತಜ್ಞಳು.

ತುಂಬಾ ಸಹನೆ ಶ್ರದ್ಧೆಯಿಂದ ಅಚ್ಚುಕಟ್ಟಾಗಿ ಹಾಗೂ ಅಂದವಾಗಿ ಮುದ್ರಿಸಿಕೊಟ್ಟ ಆತ್ಮೀಯ ಸುಧಾ ಹಾಗೂ ದಿನೇಶ್, ಎಸ್.ಜಿ.ಎಸ. ಕಂಪ್ಯೂಟರ್ಸ್, ಇವರಿಗೂ ನಾನು ಋಣಿ ಹಾಗೂ ಕಾಶೀನಾಥ ಇವರಿಗೂ ನಾನು ಋಣಿ ಹಾಗೂ ಪ್ರತ್ಯಕ್ಷವಾಗಿ ಸಹಾಯ ನೀಡಿದ ಎಲ್ಲರಿಗೂ ನನ್ನ ಕೃತಜ್ಞತೆಗಳು.

- ಸಿದ್ಧಲಿಂಗಮ್ಮ ಬಿ.ಜಿ.

## KEY TO ABBREVIATIONS

| | | |
|---|---|---|
| ARIE | - | Annual Report of Indian Epigraphy |
| BKI | - | Bombay Karnatak Inscriptions |
| EC | - | Epigraphia Carnatica |
| EC(Old) | - | Epigraphia Carnatica (Rice B.L. Ed.) |
| EI | - | Epigraphia Indica |
| KI | - | Karnatak Inscriptions |
| IA | - | Indian Antiquary |
| ICHR | - | Indian Council of Historical Research |
| MAR | - | Mysore Archaelogical Report |
| QJMS | - | Quarterly Journal of the Mythic Society |
| SII | - | South Indian Inscriptions |
| ಕಸಾಪ | - | ಕನ್ನಡ ಸಾಹಿತ್ಯ ಪರಿಷತ್ತು |
| ಕಪುಪ್ರಾ | - | ಕನ್ನಡ ಪುಸ್ತಕ ಪ್ರಾಧಿಕಾರ |

## ತಾಲ್ಲೂಕಿನ ಹೆಸರುಗಳು

| | | |
|---|---|---|
| ಅಕ | - | ಅರಕಲಗೂಡು |
| ಅಕೆ | - | ಅರಸೀಕೆರೆ |
| ಕ | - | ಕಡೂರು |
| ಕುಗ | | ಕುಣಿಗಲ್ |
| ಕೃಪೇ | - | ಕೃಷ್ಣರಾಜಪೇಟೆ |
| ಕೋ | - | ಕೋಲಾರ |
| ಗು | - | ಗುಬ್ಬಿ |
| ಗುಪೇ | - | ಗುಂಡ್ಲುಪೇಟೆ |
| ಚಾನ | - | ಚಾಮರಾಜನಗರ |
| ಚಿಮ | - | ಚಿಕ್ಕಮಗಳೂರು |
| ಚಿಬು | - | ಚಿಕ್ಕಬುಳ್ಳಾಪುರ |
| ಚಿದು | - | ಚಿತ್ರದುರ್ಗ |
| ಚಿಪ | - | ಚೆನ್ನರಾಯಪಟ್ಟಣ |
| ಜಳೂ | - | ಜಗಳೂರು |
| ತಕೆ | - | ತರೀಕೆರೆ |
| ತಿನ | | ತಿರುಮಕೂಡಲನರಸೀಪುರ (ಟಿ. ನರಸೀಪುರ) |
| ದಾಗೆ | - | ದಾವಣಗೆರೆ |
| ನಾಮಂ | - | ನಾಗಮಂಗಲ |
| ನಂಗೂ | - | ನಂಜನಗೂಡು |
| ಪಾಪು | | ಪಾಂಡವಪುರ |
| ಬೇ | - | ಬೇಲೂರು |
| ಬೆಂ | - | ಬೆಂಗಳೂರು |
| ಮವ | - | ಮಳವಳ್ಳಿ |
| ಮೂಗೆ | - | ಮೂಡಗೆರೆ |
| ಮೈ | - | ಮೈಸೂರು |
| ಮಂ | - | ಮಂಡ್ಯ |
| ಶಿಪು | - | ಶಿಕಾರಿಪುರ |
| ಶ್ರಬೆ | - | ಶ್ರವಣಬೆಳಗೊಳ |
| ಶ್ರೀಪ | | ಶ್ರೀರಂಗಪಟ್ಟಣ |
| ಶಿಘ | | ಶಿಡ್ಲಘಟ್ಟ |
| ಸಾ | - | ಸಾಗರ |
| ಸೊ | - | ಸೊರಬ |
| ಹಾ | - | ಹಾಸನ |
| ಹುಸೂ | - | ಹುಣಸೂರು |
| ಹೊ | - | ಹೊನ್ನಾಳಿ |
| ಹೊಕೆ | | ಹೊಳಲ್ಕೆರೆ |

# ಪರಿವಿಡಿ

*ಅಧ್ಯಾಯ - 1*

# ಪ್ರಸ್ತಾವನೆ

1.1. ಅಧ್ಯಯನದ ಉದ್ದೇಶ

1.2. ಇದುವರೆಗಾದ ಅಧ್ಯಯನಗಳು

1.3. ಅಧ್ಯಯನದ ಅಗತ್ಯತೆ ಮತ್ತು ಮಹತ್ವ

1.4. ಸಂಶೋಧನೆ ಆಕರಗಳು

1.5. ಸಂಶೋಧನೆಯ ವಿಧಾನ ಮತ್ತು ಸ್ವರೂಪ

1.6. ಅಧ್ಯಯನದ ಮಿತಿಗಳು

ಯಾವ ಯಾವ ವೃತ್ತಿಗಳು ಕೌಶಲ್ಯವನ್ನು ಅವಲಂಬಿಸಿರುತ್ತವೆಯೋ ಅವುಗಳು ಕುಶಲ ವೃತ್ತಿಗಳು. ಕುಶಲಕರ್ಮ ಎಂಬ ಪದವನ್ನು ಸಾಮಾನ್ಯವಾಗಿ ಒಬ್ಬ ವ್ಯಕ್ತಿ ಒಂದು ನಿರ್ದಿಷ್ಟ ಕೆಲಸ ಅಥವಾ ವ್ಯಾಪಾರದಲ್ಲಿ ನಿಪುಣತೆಯನ್ನು ಪಡೆದಿರುವುದು ಎಂದು ತಿಳಿಯಬಹುದು. ಇಂಥಹ ಕುಶಲ ಕರ್ಮಗಳನ್ನು ಆಧರಿಸಿ ಜೀವಿಸುವ ಜನರನ್ನು ಕುಶಲಕರ್ಮಿಗಳು ಎನ್ನಬಹುದು. ಮನುಸ್ಮೃತಿಯಲ್ಲಿ ಪ್ರಾಸಂಗಿಕವಾಗಿ ಬಹುಸಂಖ್ಯೆಯಲ್ಲಿ ಕುಶಲ ಕರ್ಮಿಗಳ ಸಂಗ್ರಹಗಳ ಆಧಾರವನ್ನು ಕಾಣಬಹುದು. ಆ ಗ್ರಂಥದ 3 ಮತ್ತು 11ನೇ ಅಧ್ಯಾಯದ 16 ಚರಣಗಳಲ್ಲಿ ಉಲ್ಲೇಖವಾದ ಪದಗಳು Artisans, Craftsman, Mechanics, Practical Arts, Handicrafts, Mechanical Work etc. ಪ್ರಾಚೀನ ಕಾಲದಲ್ಲಿ ಕಾರುಕರ್ಮ (ಚಾರುಕರ್ಮ) ಎಂದು ಕರೆಯಲಾಗುತ್ತಿತ್ತು. ಈ ಕಾರುಕರ್ಮದಲ್ಲಿ ತೊಡಗಿಸಿಕೊಂಡವರನ್ನೆಲ್ಲಾ ಶಿಲ್ಪಿಗಳು ಎಂದು ಕರೆಯುತ್ತಿದ್ದರು. ಕಾರುಕಾರ್ಮಿಣಿ (Karukarmini), ಶಿಲ್ಪಾನಿ ವಿವಿಧಾನಿ (Shilpani Vividhani) ಎಂಬ ಶಬ್ದ ಪ್ರಯೋಗಗಳು ಆ ಕಾಲದಲ್ಲಿ ಬಹುಸಂಖ್ಯೆಯ ಕುಶಲಕರ್ಮಿಗಳು ತಾವು ಅನೇಕ ಕೌಶಲ್ಯ ಚತುರರು, ಶಿಲ್ಪಿಗಳು ಆಗಿದ್ದರೆಂದು ತಿಳಿಸುತ್ತವೆ. ಇವರಲ್ಲಿ ಕುಂಬಾರರು, ಕಮ್ಮಾರರು, ಬಡಗಿಗಳು, ಇತರೆ ಲೋಹ ಕರ್ಮಿಗಳು, ನೇಕಾರರು, ಮೇದಾರರು ಹಾಗೂ ಒಂದು ಕಾಲದಲ್ಲಿ ಜನರಿಗೆ ಅಗತ್ಯವಿರುವ ಎಲ್ಲಾ ರೀತಿಯ ಭೌತಿಕ ಪರಿಕರಗಳನ್ನು ಮಾಡುವವರು ಬರುತ್ತಾರೆ. ಅಂದರೆ ಒಂದು ಕಾಲದಲ್ಲಿ ಕೈಗಾರಿಕೋತ್ಪಾದನೆಯನ್ನು ಮಾಡುವ ಒಂದು ವರ್ಗ ಇವರಾಗಿದ್ದರು.

ಮನುವು ವಿವಿಧ ವೃತ್ತಿಪರರ ಕೆಲಸ ಕಾರ್ಯಗಳ ವಿಧಾನಗಳನ್ನು ಹಾಗೂ ಎಲ್ಲಾ ತರಹದ ವ್ಯಾಪಾರೀ ಸರಕುಗಳು ಮೊದಲಾದ ವಿಚಾರಗಳನ್ನು ಉಲ್ಲೇಖಿಸುತ್ತಾನೆ. ಮತ್ತೊಂದು ಪಠ್ಯ ಹೇಳುವಂತೆ ಅಸ್ತಿತ್ವದಲ್ಲಿದ್ದ ಹತ್ತು ರೂಢಿ ಅಥವಾ ಪದ್ಧತಿಯಲ್ಲಿ ಶಿಲ್ಪ ಅಥವಾ ಶಿಲ್ಪಕಲೆಯು ಒಂದಾಗಿತ್ತೆಂದು ಉಲ್ಲೇಖಿಸುತ್ತದೆ. ಇದರಿಂದ ಪ್ರಾಚೀನ ಕಾಲದಲ್ಲಿ ಸುಮಾರು 25 ವಿಧದ ಕುಶಲ ಕಲೆಗಳಿದ್ದವೆಂದು ಮನುವಿನಿಂದ ಸಂಗ್ರಹಿಸಬಹುದು. ಇಂತಹ ಕುಶಲಕರ್ಮಿಗಳನ್ನು ಎರಡು ದೊಡ್ಡ ವಿಭಾಗಗಳಲ್ಲಿ ಕಾಣಬಹುದು.

1) ಸಾಮಾನ್ಯ ಕುಶಲಕರ್ಮಿಗಳು (General Artisans)

2) ಲೋಹ ಕೆಲಸಗಾರರು (Metal Workers)

ಸಮಕಾಲೀನ ಬೌದ್ಧ, ಜೈನ ಹಾಗೂ ಶಾಸನದ ಆಧಾರಗಳನ್ನು ತೆಗೆದುಕೊಂಡರೆ ಮನು ಉಲ್ಲೇಖಿಸಿದ ಅನೇಕ ಕುಶಲಕರ್ಮಗಳನ್ನು ಇಲ್ಲಿಯೂ ಕಾಣಬಹುದು. ಬೌದ್ಧ ಗ್ರಂಥಗಳಾದ ಮಹಾವಾಸ್ತು ಹಾಗೂ ಮಿಲಿಂದಪನ್ಹ ಕ್ರಮವಾಗಿ 36 ಮತ್ತು 75 ವಿಧದ ಕೆಲಸಗಾರರನ್ನು ತಿಳಿಸುತ್ತವೆ.[1]

ಉನ್ನತ ಆರ್ಥಿಕ ಜೀವನದ ಆಧಾರದ ಮೇಲೆ ವಿವಿಧ ಕಲೆ ಮತ್ತು ಶಿಲ್ಪಗಳನ್ನು ಗುರುತಿಸಬಹುದು. ಬಲಿಷ್ಠವಾಗಿ ಸಂಘಟಿತವಾದ ಜನಸಂಖ್ಯೆಯನ್ನು ಪರಿಗಣಿಸಿ ಶಿಲ್ಪಿ (artisans = shilpi), ಕಲೆಗಾರ (craftsman = karuka) ಹಾಗೂ ಶಿಲ್ಪಕಾರ (Mechanics = Yanthra Pravarthaka) ಎಂದು ವಿಭಾಗಿಸಬಹುದು.

ಕೆಲವೊಂದು ಶಿಲ್ಪಿಗಳು ಹಾಗೂ ಕಾರುಕರು ಈ ಕೆಳಗಿನಂತಿವೆ.

1. ಹೇಮಕಾರ - (Worker in Gold, IX, 292), 2. ಮಣೀನಾಮಪವೇಧೇ - (Gem-driller or Borer, IX, 286), 3. ರಂಜಕ - (Dyer, IV, 216), 4. ಚೈಲ ನಿರ್ಣೇಜಕ - (Launder, IV, 216), 5. ಕರ್ಮಾರ - (Blacksmith, IV, 215), 6. ತ್ವಷ್ಟಿ - (Carpenter, X, 48), 7. ತೈಲಿಕ - (Oiler, III, 158), 8. ತುನ್ನವಾಯಾ - (Tailor, IV, 214), 9. ತುಂತುವಾಯಾ - (Weaver, VIII, 397), 10. ಭಾಂಡಿಕ - (Potter, VIII, 327, ಮೃನ್ಮಯಾ - ಭಾಂಡ), 11. ವೇಣುವೈದಲ ಭಾಂಡಾನಾಂ - (Workers in Cane and Bamboo, VIII, 327), 12. ಧನುಃ ಶರಾಣಾಂ ಕರ್ತಾ - (Makers of Bow and Arrow, III, 160) ಮತ್ತು 13. ಚರ್ಮಕಾರ - (Leather Worker, X, 36, 49). ಈ ಮೊದಲಾದ ಶಿಲ್ಪಿಗಳ ಅಥವಾ ಕಾರುಕರನ್ನು ಮನುವು ಹೆಸರಿಸುತ್ತಾನೆ.[2]

ಪ್ರಸ್ತುತ ಪ್ರೌಢ ಪ್ರಬಂಧವು ಇಂತಹ ವರ್ಗಗಳ ಕುರಿತು ಅಧ್ಯಯನವನ್ನು ಕೈಗೊಳ್ಳಲು ಉದ್ದೇಶಿಸಿದೆ. ಈ ವಿಷಯವನ್ನು ಮಧ್ಯಕಾಲದ ಕರ್ನಾಟಕ ಸಂದರ್ಭದಲ್ಲಿ ವಿವೇಚಿಸಲಾಗುವುದು. ಕಾಲವನ್ನು 10-14ನೇ ಶತಮಾನಕ್ಕೆ ಅನುಕೂಲತೆಗಾಗಿ ಸೀಮಿತಗೊಳಿಸಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಈ ಅವಧಿಯನ್ನು ತೆಗೆದುಕೊಳ್ಳಲು ಕಾರಣ ಸಾಕಷ್ಟು ಶಾಸನಗಳ ರಚನೆ ಇದೇ ಅವಧಿಯಲ್ಲಾಗಿದ್ದು, ಕುಶಲಕರ್ಮಿಗಳಿಗೆ ಸಂಬಂಧಿಸಿದಂತೆ ಸಾಕಷ್ಟು ವಿಷಯಗಳು

ಇದರಿಂದ ದೊರೆಯಬಹುದೆಂದು ಹಾಗೂ ಇದೇ ಅವಧಿಯಲ್ಲಾದ ವಚನ ಚಳುವಳಿಯೂ ಕೂಡಾ ಸಾಕಷ್ಟು ವಿಷಯಗಳನ್ನು ತಿಳಿಸಬಹುದೆಂಬ ಕಾರಣದಿಂದ ಈ ಅವಧಿಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

ಮಡಕೆ ಮಾಡುವವರು ಕುಂಭ-ಕಾರ (Kumba-kar), ಚಪ್ಪಲಿ ಮಾಡುವವರು ಚರ್ಮ-ಕಾರ (Charma-kar), ಕಲ್ಲು ಕೊರೆಯುವವ ತಕ್ಷಕ, ಭಾಸ್ಕರ (Takshak, Bhaskar), ಚಿತ್ರ ಬಿಡಿಸುವವ ಚಿತ್ರ-ಕಾರ (Chitra-kar), ವಾದ್ಯ ನುಡಿಸುವವ ಗೀತಕಾರ (Gita-kar) ಇತ್ಯಾದಿ ಹೀಗೆ ಕಾರುಕರ್ಮ, ಕುಶಲಕರ್ಮವೆಂದು ಇದರ ಐತಿಹಾಸಿಕತೆಯನ್ನು ಗುರುತಿಸಬಹುದಾಗಿದೆ.

ಅಂದರೆ ಒಂದು ಕಾಲದಲ್ಲಿ ಕೈಗಾರಿಕೋತ್ಪಾದನೆಯನ್ನು ಮಾಡುವುದು ಒಂದು ವರ್ಗ ಇವರಾಗಿದ್ದು ದೇಶದ ಅರ್ಥವ್ಯವಸ್ಥೆಯ ಬೆನ್ನೆಲುಬಾಗಿ ಕುಶಲ ಕರ್ಮವನ್ನು ಗುರುತಿಸಲಾಗಿತ್ತು. ತಾವೇ ಉತ್ಪಾದಿಸಿ ಮಾರಾಟ ಮಾಡುತ್ತಿದ್ದಂತಹ ವೃತ್ತಿಗಳಾದ ಕುಂಬಾರ, ಅಕ್ಕಸಾಲಿ, ಬಡಗಿಗಳು, ಕಮ್ಮಾರರು, ನೇಕಾರರು ಮೊದಲಾದವರನ್ನು ಇಲ್ಲಿ ಕಾಣಬಹುದು.

## 1.1. ಅಧ್ಯಯನದ ಉದ್ದೇಶ

ಪ್ರಸ್ತುತ ಪ್ರಬಂಧ ***ಮಧ್ಯಕಾಲೀನ ಕರ್ನಾಟಕದಲ್ಲಿ ಕುಶಲ ಕರ್ಮಿಗಳು ಒಂದು ಸಾಮಾಜಿಕ ಮತ್ತು ಚಾರಿತ್ರಿಕ ಅಧ್ಯಯನ*** ಎಂಬ ಶೀರ್ಷಿಕೆ ಹೊಂದಿದ್ದು, ಅಧ್ಯಯನದ ಉದ್ದೇಶಗಳು ಈ ಕೆಳಕಂಡಂತಿವೆ.

- ಒಂದು ಕಾಲದಲ್ಲಿ ಅರ್ಥವ್ಯವಸ್ಥೆಯ ಬೆನ್ನೆಲುಬೇ ಆಗಿದ್ದ ಎಲ್ಲಾ ಕುಶಲಕರ್ಮಿಗಳನ್ನು ಒಗ್ಗೂಡಿಸಿ ಅಧ್ಯಯನ ಕೈಗೊಳ್ಳುವುದು.
- ಎಲ್ಲಾ ಕುಶಲ ಕರ್ಮದ ತಾಂತ್ರಿಕತೆಯನ್ನು ಅಧ್ಯಯನ ಮಾಡುವುದು.
- ಮಧ್ಯಕಾಲೀನ ಕರ್ನಾಟಕದ ಕುಶಲಕರ್ಮಿಗಳ ಆರ್ಥಿಕ ಸ್ಥಾನಮಾನವನ್ನು ಶಾಸನಗಳು ಹಾಗೂ ಸಮಕಾಲೀನ ಸಾಹಿತ್ಯವನ್ನು ಹಿನ್ನೆಲೆಯಾಗಿಟ್ಟುಕೊಂಡು ಅಧ್ಯಯನ ಮಾಡಲಾಗುವುದು.
- ಮಧ್ಯಕಾಲೀನ ಕರ್ನಾಟಕದ ಕುಶಲ ಕರ್ಮಿಗಳ ಸಾಮಾಜಿಕ ಇತಿಹಾಸವನ್ನು ಶಾಸನಗಳು ಹಾಗೂ ಸಾಹಿತ್ಯವನ್ನು ಒಟ್ಟುಗೂಡಿಸಿ ಅಧ್ಯಯನ ಮಾಡುವುದು.

## 1.2. ಇದುವರೆಗಾದ ಅಧ್ಯಯನಗಳು

### ಕನ್ನಡ ಶಾಸನಗಳನ್ನು ಆಧರಿಸಿ ನಡೆಸಲಾದ ಅಧ್ಯಯನಗಳು

ಕನ್ನಡ ಮತ್ತು ಇಂಗ್ಲಿಷ್‌ನಲ್ಲಿ ಸುಪ್ರಸಿದ್ಧ ಶಾಸನ ಸಂಶೋಧಕರಾದ ಎಂ. ಚಿದಾನಂದಮೂರ್ತಿಯವರು ತಮ್ಮ ***ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*** ಪ್ರಬಂಧದಲ್ಲಿ ಕ್ರಿ.ಶ. 450 ರಿಂದ 1050ರ ವರೆಗಿನ ಶಾಸನಗಳನ್ನು ವಿಸ್ತøತವಾಗಿ ಗಮನಿಸಿ ಆ ಕಾಲದ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಚರ್ಚಿಸುವ ಸಂದರ್ಭದಲ್ಲಿ ಶಾಸನೋಕ್ತ ವೃತ್ತಿಗಳನ್ನು ಉಲ್ಲೇಖಿಸುತ್ತಾ, ನೇಕಾರರು, ಚಿಪ್ಪಿಗರು, ಕುಂಬಾರರು, ತೈಲಿಗರು, ಕಂಚುಗಾರರು, ಶಿಲ್ಪಿಗಳು, ಅಕ್ಕಸಾಲಿಗರ ಬಗ್ಗೆ ತಿಳಿಸುತ್ತಾರೆ. ಸಮಾಜದಲ್ಲಿ ಮಹತ್ವದ ಸ್ಥಾನವನ್ನು ಈ ಕುಶಲಕರ್ಮಿಗಳು ಹೊಂದಿದ್ದನ್ನು ಶಾಸನಾಧಾರಿತವಾಗಿ ಗುರುತಿಸುತ್ತಾರೆ.

ಬಿ.ಆರ್. ಹಿರೇಮಠ ರವರು ತಮ್ಮ ***ಶಾಸನಗಳಲ್ಲಿ ಕರ್ನಾಟಕದ ವರ್ತಕರು*** ಗ್ರಂಥದಲ್ಲಿ ಕ್ರಿ.ಶ. 450 ರಿಂದ ಕ್ರಿ.ಶ. 1565ರವರೆಗಿನ ಪ್ರಥಮ ಕನ್ನಡ ಶಾಸನವಾಗಿರುವ ಹಲ್ಮಿಡಿ ಶಾಸನದಿಂದ ವಿಜಯ ನಗರ ಸಾಮ್ರಾಜ್ಯದ ಪಥನದ ವರೆಗಿನ ಅವಧಿಯ ಶಾಸನಗಳನ್ನು ಗಮನಿಸಿ ವರ್ತಕರಲ್ಲಿ ವಿನಿಮಯ (ವ್ಯಾಪಾರಿ) ವೃತ್ತಿಯವರು, ಉತ್ಪಾದನಾ-ವಿನಿಮಯ ವೃತ್ತಿಯವರು ಎಂದು ಎರಡು ತೆರನಾಗಿದ್ದು, ಕರ್ನಾಟಕದ ವರ್ತಕರಲ್ಲಿ ವ್ಯಾಪಾರವನ್ನೇ ವೃತ್ತಿಯಾಗಿಸಿಕೊಂಡ ಸೆಟ್ಟಿ-ಬಣಂಜಿಗ, ಸೆಟ್ಟಿಗುತ್ತ, ನಕರ, ಮುಂಮುರಿದಂಡ, ವಡ್ಡ ವ್ಯವಹಾರಿ, ಗವರೆ, ಗಾತ್ರಿಗ, ಸೆಟ್ಟಿಕಾಱ, ಹಲರು, ಎಳಮೆ, ಸಾಲಿಕೆ ಬಲ್ಲಾಳುಗಳ ಬಗ್ಗೆ ಹಾಗೂ ಉತ್ಪಾದನೆ ಹಾಗೂ ಮಾರಾಟ ಕಾರ್ಯಗಳೆರಡನ್ನೂ ಮಾಡುವ ಕುಂಬಾರ, ಅಕ್ಕಸಾಲಿ, ಮಾದಿಗ, ಸಮಗಾರ, ಮೇದ ಮೊದಲಾದ ಉತ್ಪಾದಕ ವಿನಿಮಯ ವರ್ತಕರನ್ನು ಉಲ್ಲೇಖಿಸುತ್ತಾರೆ. ಅಲ್ಲದೆ ವರ್ತಕ ಸಂಘಗಳಾದ ಅಯ್ಯಾವೊಳೆ ಐನೂರ್ವರು, ತಂಬುಲಿಗ ಸಾಸಿರ್ವರು, ಹಂಜಮಾನಗಳು ವಿನಿಮಯ (ವರ್ತಕ) ಸಂಘಗಳಾಗಿಯೂ ತೆಲ್ಲಿಗರೈವತ್ತೊಕ್ಕಲು, ಮಾಲೆಗಾರ ನಾಲ್ವತ್ತೊಕ್ಕಲು, ತೋಟಿಗರೈನೂರ್ವರು, ಸಾಲೆ ಸಾಸಿರ್ವರು ಅಥವಾ ಸಮಯ ಸಾಸಿರ್ವರು, ಕಂಚಗಾರಗೊತ್ತಳಿಗಳು ಉತ್ಪಾದಕ ವಿನಿಮಯ ಸಂಘಗಳಾಗಿಯೂ ನಾಡಿನಲ್ಲಿ ನಡೆಸಿದ ವ್ಯಾಪಾರ ಚಟುವಟಿಕೆಗಳ ಅನೇಕ ಅಂಶಗಳನ್ನು ತಿಳಿಸುತ್ತಾರೆ.

ಎಂ.ಎಂ. ಕಲಬುರ್ಗಿಯವರು ವ್ಯಾಕರಣ, ಛಂದಸ್ಸು, ಹಳೆಗನ್ನಡ, ಶಾಸನ, ವಚನ, ಜನಪದ, ಸಂಸ್ಕøತಿ, ಇತಿಹಾಸ, ಗ್ರಂಥ ಸಂಪಾದನೆ ಮೊದಲಾದ ಕ್ಷೇತ್ರಗಳಲ್ಲಿ ಸಾಹಿತ್ಯ ಕೃಷಿ ಮಾಡಿದವರು. ಇವರ ಸಂಶೋಧನ ಪ್ರಬಂಧಗಳ

ಸಂಕಲನ ***ಮಾರ್ಗ*** ಸಂಪುಟಗಳಲ್ಲಿ ಪ್ರಕಟವಾಗಿವೆ (4 ಸಂಪುಟಗಳು ಪ್ರಕಟವಾಗಿವೆ). ***ಮಾರ್ಗ ಸಂಪುಟ-2***ರಲ್ಲಿ ಸುಮಾರು 50 ಲೇಖನಗಳು ಶಾಸನಕ್ಕೆ ಸಂಬಂಧಿಸಿದವು. ಅದರಲ್ಲಿನ ಶಾಸನ ಕವಿಗಳು, ಶಾಸನ ಲಿಪಿಕಾರರು ಹಾಗೂ ಶಾಸನ ರೂವಾರಿಗಳ ಕುರಿತಾಗಿರುವ ಇವರ ಲೇಖನಗಳು ಶಾಸನ ರಚಿಸಿದ, ಬರೆದ, ಕಡಿದ, ಕಂಡರಣೆ ಮಾಡಿದ, ಕೆತ್ತಿದ ಶಿಲ್ಪಿಗಳ ಕುರಿತಾಗಿದ್ದು, ಶಿಲ್ಪಿಯ ಶ್ರಮ ವಿಭಜನೆಯನ್ನು ನಮಗೆ ತಿಳಿಯಪಡಿಸುತ್ತವೆ. ಇವರ ಈ ಕಾರ್ಯ ತುಂಬಾ ಮೌಲ್ಯೀಕವಾದುದು.

ಎ. ಅಪ್ಪಾದೊರೈ ಅವರು ತಮ್ಮ *Economic Conditions in Southern India* (1000-1500 A.D.) ಗ್ರಂಥದಲ್ಲಿ ಮುಖ್ಯ ಕೈಗಾರಿಕೆಗಳಲ್ಲಿ ಒಂದು ವಿಧವಾಗಿ ಕರಕುಶಲ ಕಲೆಗಳನ್ನು ತೆಗೆದುಕೊಂಡು ಅದರಲ್ಲಿ ಲೋಹ ಕೈಗಾರಿಕೆ, ಬಟ್ಟೆ ಕೈಗಾರಿಕೆ, ಮರ ಕೆತ್ತನೆ, ಚರ್ಮದ ವಸ್ತುಗಳ ತಯಾರಿಕೆ, ಮಡಿಕೆ ತಯಾರಿಕೆ ಮೊದಲಾದವುಗಳನ್ನು ತುಂಬಾ ಸಂಕ್ಷಿಪ್ತವಾಗಿ ವಿವರಿಸುತ್ತಾರೆ.

ಎಸ್. ಶೆಟ್ಟರ್‌ರವರು ತಮ್ಮ *The Hoysala Temples* ಕೃತಿಯಲ್ಲಿ ಹೊಯ್ಸಳ ಕಾಲದ ದೇವಾಲಯಗಳ ಕುರಿತು ಅವುಗಳ ವಾಸ್ತುಶಿಲ್ಪ, ದೇವಾಲಯದ ರಚನಾ ಕ್ರಮ, ಅವುಗಳ ನಿರ್ಮಾತೃಗಳಾದ ಶಿಲ್ಪಿಗಳ ಕುರಿತು ಸೂಕ್ಷ್ಮವಾಗಿ ಅಧ್ಯಯನ ನಡೆಸಿದ್ದಾರೆ.

ಕೆಲ್ಲಿಸನ್ ಕೊಲ್ಲಿಯರ್ ರವರು ತಮ್ಮ *The Hoysala Artists : Their Identity and Styles* ಎಂಬ ಗ್ರಂಥದಲ್ಲಿ ಹೊಯ್ಸಳರ ಕಾಲದ ಶಿಲ್ಪಿಗಳ ಕುರಿತು ವಿಸ್ತೃತವಾಗಿ ಅಧ್ಯಯನ ನಡೆಸಿದ್ದಾರೆ. ಒಬ್ಬೊಬ್ಬ ಶಿಲ್ಪಿಯೂ ಪ್ರತ್ಯೇಕವಾಗಿ ಶಿಲ್ಪ ಶೈಲಿಯನ್ನು ಹೊಂದಿದ್ದು, ಅದನ್ನು 12, 13ನೇ ಶತಮಾನವೆಂದು ವಿಭಾಗಿಸಿಕೊಂಡು ಗುರುತಿಸುತ್ತಾರೆ.

ಎಸ್. ಗುರುರಾಜಾಚಾರ್‌ರವರು *Some Aspects of Economic and Social Life in Karnataka* (1000-1300 A.D.) ಗ್ರಂಥದಲ್ಲಿ ಕರ್ನಾಟಕದ ಕೆಲವು ಕೈಗಾರಿಕೆಗಳನ್ನು ಗುರುತಿಸುತ್ತಾ ಅವುಗಳಲ್ಲಿ ನೇಯ್ಗೆ, ಬೆಲ್ಲ ಹಾಗೂ ಸಕ್ಕರೆಯ ಉತ್ಪಾದನೆ, ಎಣ್ಣೆ ಉತ್ಪಾದನೆ, ಉಪ್ಪು ಉತ್ಪಾದನೆ, ಮರಗೆಲಸ, ಮಡಿಕೆ ತಯಾರಿಕೆ, ಬಳೆ ಮತ್ತು ಮಣಿಗಳ ತಯಾರಿಕೆ, ಚರ್ಮ ಕೆಲಸ, ಗಣಿ ಹಾಗೂ ಲೋಹದ ಕೆಲಸ, ಆಭರಣ ತಯಾರಿಕೆ ಮೊದಲಾದವುಗಳನ್ನು ಹೆಚ್ಚಾಗಿ ಶಾಸನಗಳ ಹಿನ್ನೆಲೆಯಲ್ಲಿ ಚರ್ಚಿಸುವ ಪ್ರಯತ್ನ ಮಾಡಿದ್ದಾರೆ.

ಜಿ.ಆರ್. ಕುಪ್ಪಸ್ವಾಮಿಯವರು ತಮ್ಮ *Economic Conditions in Karnataka* (973-1336 A.D.) ಗ್ರಂಥದಲ್ಲಿ ವ್ಯಾಪಾರಿ ಸಂಘಗಳು, ವೃತ್ತಿ ಶ್ರೇಣಿಗಳು ಹಾಗೂ ಮಧ್ಯಕಾಲದ ಕೈಗಾರಿಕಾ ಬೆಳವಣಿಗೆಯಲ್ಲಿ ಎಣ್ಣೆ ಉದ್ಯಮ, ಸಕ್ಕರೆ, ಅಡಕೆ, ಉಪ್ಪು, ಬೊಂಬು ತಯಾರಿಕೆ, ಲೋಹ ತಯಾರಿಕೆ, ಬಟ್ಟೆ ಉದ್ಯಮ, ಸುಗಂಧ ದ್ರವ್ಯ ತಯಾರಿಕೆ, ಚರ್ಮ ಉದ್ಯಮ ಮೊದಲಾದವುಗಳ ಕುರಿತು ಶಾಸನಗಳಲ್ಲಿ ಉಕ್ತವಾದ ವಿಚಾರಗಳನ್ನು ತುಂಬಾ ಸಂಕ್ಷಿಪ್ತವಾಗಿ ಚರ್ಚಿಸಿದ್ದಾರೆ.

ಆರ್.ಎನ್. ಮಿಶ್ರ ಅವರು ತಮ್ಮ *Ancient Artists and Art Activity* ಗ್ರಂಥದಲ್ಲಿ ಪ್ರಾಚೀನ ಕಾಲದ ಕಲೆಯ ಚಟುವಟಿಕೆಗಳು ಶಿಲ್ಪಿ, ಸೂತ್ರಧಾರ, ಸ್ಥಪತಿ ಮೊದಲಾದವರ ಕುರಿತು ಪ್ರಸ್ತಾಪಿಸುತ್ತಾರೆ.

ಆರ್.ಎನ್. ಸಾಲತೊರೆರವರು *Vijayanagar Art* ಗ್ರಂಥದಲ್ಲಿ ವಿಜಯನಗರ ಕಾಲದ ಕುಶಲಕರ್ಮಿಗಳು ಹಾಗೂ ಅವರ ನಿರ್ಣಯಗಳ ಕುರಿತು ಅಧ್ಯಾಯವೊಂದರಲ್ಲಿ ಚರ್ಚಿಸುತ್ತಾ ಪಾಂಚಾಳರಲ್ಲಿ ಒಬ್ಬರಾದ ಶಿಲ್ಪಿಗಳು ಮತ್ತು ಕಂಡರಣೆಕಾರರ ಕುರಿತು ಶಾಸನಗಳ ಹಿನ್ನೆಲೆಯಲ್ಲಿ ಉಲ್ಲೇಖಿಸುತ್ತಾರೆ.

**ಮಧ್ಯಕಾಲದ ಫ್ಯೂಡಲಿಸಂ ಹಿನ್ನೆಲೆಯಲ್ಲಿ ನಡೆಸಲಾದ ಅಧ್ಯಯನಗಳು**

ರಮೇಂದ್ರನಾಥ್ ನಂದಿಯವರು ತಮ್ಮ *State Formation Agrarian Growth and Social Change in Feudal South India* (C.A.D. 600-1200) ಗ್ರಂಥದಲ್ಲಿ ಮಾರುಕಟ್ಟೆ ಅರ್ಥವ್ಯವಸ್ಥೆ, ಕರಕುಶಲ ವ್ಯಾಪಾರೀ ವಸ್ತುಗಳ ಉತ್ಪಾದನೆಯನ್ನು ಕುರಿತು ವಿವರವಾಗಿ ತಿಳಿಸುತ್ತಾರೆ.

ಇವರು 10 ಮತ್ತು 11ನೇ ಶತಮಾನದ ಆರಂಭದ ಶಾಸನಗಳಲ್ಲಿ ಕುಶಲಕರ್ಮಿಗಳ ಕುಟುಂಬಗಳು ದೇವಾಲಯಗಳಿಗೆ ವರ್ಗಾಯಿತವಾದುದನ್ನು ತಿಳಿಸುತ್ತವೆ ಎಂದು ಉಲ್ಲೇಖಿಸುತ್ತಾರೆ. ಹಾಗೂ 11ನೇ ಶತಮಾನ ಮುಗಿಯುವ ಹೊತ್ತಿಗೆ ಎಣ್ಣೆ ಗಾಣಗಳು ಹಾಗೂ ಮಗ್ಗಗಳಿಂದ ಆಗುತ್ತಿದ್ದ ಉತ್ಪಾದನಾ ವಿಧಾನವು ಕಡಿಮೆಯಾಯಿತೆಂದು ಹೇಳುತ್ತಾರೆ.

ಅಲ್ಲದೆ 'ವೀರಶೈವ ಚಳುವಳಿಯ ಹುಟ್ಟು' ಲೇಖನದಲ್ಲೂ ಇವರು 11ನೇ ಶತಮಾನದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ವಿವಿಧ ವೃತ್ತಿಪರರ ಮೇಲೆ ಫ್ಯೂಡಲ್ ಮಧ್ಯವರ್ತಿಗಳು ಹಿಡಿತ ಸಾಧಿಸಿದ್ದು ಈ ವೃತ್ತಿಗಳು ಮತ್ತು ವೃತ್ತಿಪರರ ಮೇಲೆ ಒತ್ತಡ ಉಂಟಾಯಿತು ಎಂದಿದ್ದಾರೆ.

ಎಣ್ಣೆ ಕಾರ್ಖಾನೆಗಳನ್ನು ಬೇಕಾಬಿಟ್ಟಿಯಾಗಿ ಧಾರ್ಮಿಕ ಸಂಸ್ಥೆಗಳಿಗೆ ವರ್ಗಾಯಿಸಿದ್ದು, ಜಮೀನಿನ ಹಾಗೂ ಮುಖ್ಯ ವಸ್ತುಗಳ ಮೇಲೆ ಮಧ್ಯವರ್ತಿಗಳು ಹಿಡಿತ ಸಾಧಿಸಿದ್ದು, ಈ ಉದ್ದಿಮೆಯು ಕುಂಠಿತಗೊಳ್ಳಲು ಕಾರಣವಾಯಿತು ಎಂಬುದು ಇವರ ತರ್ಕ.

ಹನುಮ ನಾಯಕ್‌ರವರು *Artisanal and Trading Activities in Medieval Karnataka* **(A.D. 973-1336)** ಎಂಬ ತಮ್ಮ ಮಹಾ ಪ್ರಬಂಧದಲ್ಲಿ ಮಧ್ಯಕಾಲೀನ ಕರ್ನಾಟಕದ ಬಟ್ಟೆ ತಯಾರಿಕೆ, ಎಣ್ಣೆ ಉತ್ಪಾದನೆ, ಬೆಲ್ಲ ಉತ್ಪಾದನೆ, ಲೋಹದ (ಚಿನ್ನ, ಬೆಳ್ಳಿ, ತಾಮ್ರ, ಕಂಚು ಮತ್ತು ಕಬ್ಬಿಣ) ಕೆಲಸ, ಮಡಿಕೆ ತಯಾರಿಕೆ, ಮರಗೆಲಸ, ಚರ್ಮ ಹದಮಾಡುವುದು, ಉಪ್ಪು ತಯಾರಿಕೆ ಮುಂತಾದ ಕುಶಲಕರ್ಮಿಗಳ ವ್ಯಾಪಾರಿ ಚಟುವಟಿಕೆಗಳ ಕುರಿತಾಗಿಯೂ, ವ್ಯಾಪಾರಿ ಸಂಘಟನೆಗಳಾದ ಅಯ್ಯಾವೊಳೆ ಅಯ್ಯೂರ್ವರು, ನಾನಾದೇಸಿಗಳು, ಮುಮ್ಮರಿದಂಡಗಳು, ಉಭಯನಾನಾದೇಸಿಗಳು, ಮಹಾವಡ್ಡ ವ್ಯವಹಾರಿಗಳು, ದೇಸಿ, ಸೆಟ್ಟಿ ಮತ್ತು ಸೆಟ್ಟಿಗುತ್ತರು, ಗವರೆ, ಗಾತ್ರಿಗರು, ಹಂಜುಮಾನ್ ಮೊದಲಾದವುಗಳ ಬಗ್ಗೆ ಚರ್ಚಿಸುತ್ತಾರೆ. ಹಾಗೂ 11, 12, 13 ಮತ್ತು 14ನೇ ಶತಮಾನದಲ್ಲಿದ್ದ ಉತ್ಪಾದನೆ ವಿನಿಮಯ ಕೇಂದ್ರಗಳನ್ನು ಅಂಕಿ-ಅಂಶಗಳ ಮೂಲಕ ಉಲ್ಲೇಖಿಸಿ ನಮ್ಮ ಗಮನ ಸೆಳೆಯುತ್ತಾರೆ.

ಈ ವ್ಯಾಪಾರವು ಹೇಗೆ ನಗರೀಕರಣಕ್ಕೆ ದಾರಿಮಾಡಿಕೊಟ್ಟವು ಹಾಗೂ ಅವುಗಳಿಂದಾದ ಪರಿಣಾಮಗಳನ್ನು ಕೂಡ ಇವರು ತಮ್ಮ ಪ್ರಬಂಧದಲ್ಲಿ ಚರ್ಚಿಸಿದ್ದಾರೆ. ಪ್ರಬಂಧವನ್ನು ದಕ್ಷಿಣ ಕರ್ನಾಟಕದ 11 ರಿಂದ 14ನೇ ಶತಮಾನದ ಕನ್ನಡ ಶಾಸನಗಳನ್ನು ಆಧರಿಸಿ ಬರೆದಿದ್ದಾರೆ.

ಪ್ರಸ್ತುತ ಅಧ್ಯಯನಕ್ಕೆ ಮತ್ತೊಂದು ಬಗೆಯಲ್ಲಿ ಕೆಲ ಸೈದ್ಧಾಂತಿಕ ಚರ್ಚೆಗಳನ್ನು ಕೈಗೆತ್ತಿಕೊಂಡು ಚರ್ಚೆ ಮಾಡಿದವರೂ ಕೂಡ ಇದ್ದಾರೆ. ಅವರಲ್ಲಿ ಭಾರತದ ಮಟ್ಟದಲ್ಲಿ ವಿಜಯ ರಾಮಸ್ವಾಮಿಯವರು ಒಬ್ಬರು. ಇವರ *Some Enquiries into the Condition of Weavers in Medieval South India* ಎಂಬ ಲೇಖನವು ಮಧ್ಯಯುಗೀನ ದಕ್ಷಿಣ ಭಾರತದ ನೇಕಾರ ಸಮುದಾಯವೊಂದನ್ನು ಕುರಿತು ಮಾತ್ರ ಅಧ್ಯಯನ ನಡೆದಿರುವುದನ್ನು ತಿಳಿಸುತ್ತದೆ. ಕರ್ನಾಟಕ ಮತ್ತು ಆಂಧ್ರ ಪ್ರದೇಶಗಳಲ್ಲಿ ವಿಜಯನಗರ ಕಾಲದಲ್ಲಿ ಪ್ರಭಾವೀಯುತವಾದ

(dominated) ಎರಡು ನೇಕಾರ ಸಮುದಾಯಗಳೆಂದರೆ ದೇವಾಂಗ (Devangar) ಮತ್ತು ಸಾಳೆ (Sale), ಅಲ್ಪಸಂಖ್ಯಾತ (Minor) ನೇಕಾರ ಜಾತಿಗಳಾಗಿ ಜೇಡರ (Jedara), ಸೆನಿಯಾರ್ (Seniyar).

ಹೀಗೆ ನೇಕಾರ ಸಮುದಾಯದ ಕುರಿತು ಸಾಕಷ್ಟು ಸಮಗ್ರವಾಗಿ ಅಧ್ಯಯನ ಮಾಡುತ್ತದೆ.

ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ವಚನ ಸಾಹಿತ್ಯದಲ್ಲೂ ಕೂಡ ಅನೇಕ ವಿವರಗಳಿದ್ದು ಆ ವಿವರಗಳನ್ನು ಈ ಕೆಳಗಿನ ಪುಸ್ತಕಗಳಲ್ಲಿ ನಾವು ಕಾಣುತ್ತೇವೆ.

ಬಸವರಾಜ ಕಲ್ಗುಡಿಯವರು ತಮ್ಮ ***ಅನುಭಾವ, ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ*** ಎಂಬ ಗ್ರಂಥದಲ್ಲಿ ಮಧ್ಯಕಾಲೀನ ಸಾಹಿತ್ಯದಲ್ಲಿ ಅಭಿವ್ಯಕ್ತವಾಗಿರುವ ಸಂಸ್ಕೃತಿ, ಭಕ್ತಿ ಅನುಭಾವ ಮುಂತಾದವುಗಳನ್ನು ಅಂದು ಇಂದಿನ ತೌಲನಿಕ, ಚಾರಿತ್ರಿಕ ಪ್ರಜ್ಞೆಯೊಡನೆ ಮುಖಾಮುಖಿಯಾಗಿಸಿ ವಿವೇಚಿಸಿದ್ದಾರೆ. ಬಸವ, ಅಲ್ಲಮ ಮತ್ತು ಅಕ್ಕಮಹಾದೇವಿಯವರನ್ನು ಕುರಿತ ವಿಮರ್ಶೆಗಳು ಇಲ್ಲಿವೆ. ಭಕ್ತಿ ಅನುಭಾವವೆಂಬುದು ಐರೋಪ್ಯ ವ್ಯಾಖ್ಯೆಯಲ್ಲಿ 'ಮಿಸ್ಟಿಸಿಸಂ' ಎಂಬುದಾಗಿ ರೂಪುಗೊಂಡಿದೆ. ಅದಕ್ಕೆ ನಿಗೂಢವೆಂಬ, ಅಲೌಕಿಕವೆಂಬ ಅರ್ಥ ಮುಖ್ಯವಾಗಿ ಬಳಕೆಯಲ್ಲಿದೆ. ಇಲ್ಲಿಯೂ ಓರಿಯೆಂಟಲಿಸ್ಟ್ ವಿದ್ವಾಂಸರು ಇದೇ ವ್ಯಾಖ್ಯಾನವನ್ನಾಧರಿಸಿ ಹುಡುಕಾಟ ನಡೆಸಿದ್ದಾರೆ. ಆದರೆ ಅನುಭಾವದ ಅಭಿವ್ಯಕ್ತಿಯ ಮೂಲದಲ್ಲಿ ಸಂಸ್ಕೃತಿಯ ಸಮಸ್ಯೆಗಳೇ ಪ್ರಧಾನವಾದ ಭೂಮಿಕೆಯವುಗಳಾಗಿವೆ. ತಂಬೂರಿ ಹಿಡಿದು ಯಾವುದೋ ಲೋಕದಲ್ಲಿ ಕಣ್ಣು ನೆಟ್ಟು ಕುಳಿತದ್ದು ಅನುಭಾವವಲ್ಲ. ಬದುಕಿನ ಮೌಲ್ಯವನ್ನು ಕುರಿತ ಅನ್ವೇಷಣೆಯು ಇದಾಗಿದೆ. ಸಂಸ್ಕೃತಿಯಲ್ಲಿ ಬದುಕನ್ನು ಕುರಿತಂತೆ ಉಂಟಾದ ಸಮಸ್ಯೆಗಳ ಹುಡುಕಾಟ ಮತ್ತು ವ್ಯಕ್ತಿತ್ವದ ಸ್ಥಿತ್ಯಂತರದ ನೆಲೆಯಲ್ಲಿ ಬದುಕಿನ ಮೌಲ್ಯಾನ್ವೇಷಣೆ ಇದರ ಮುಖ್ಯ ಗುರಿಯಾಗಿರುತ್ತದೆ. ವಚನಕಾರರ ಅನುಭಾವದ ಹುಡುಕಾಟದಲ್ಲಿ ಇಂಥ ಸಾಂಸ್ಕೃತಿಕ ಕಾಳಜಿಯೇ ಪ್ರಧಾನವೆನ್ನುವುದನ್ನು ಗುರುತಿಸಲಾಗಿದೆ.

ಎಲ್. ಬಸವರಾಜು ಅವರು ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ***ಬಸವಣ್ಣನವರ ವಚನಗಳು, ಅಕ್ಕನ ವಚನಗಳು, ದೇವರ ದಾಸಿಮಯ್ಯನ ವಚನಗಳು, ಅಲ್ಲಮನ ವಚನಗಳು, ಅಲ್ಲಮನ ವಚನ ಚಂದ್ರಿಕೆ, ಶಿವದಾಸ ಗೀತಾಂಜಲಿ, ಶೂನ್ಯ ಸಂಪಾದನೆ*** ಮೊದಲಾದ ಗ್ರಂಥಗಳಲ್ಲಿ ಶುದ್ಧ ಪಾಠಗಳು ಮತ್ತು ಪಾಠಾಂತರಗಳು, ವಚನಗಳ ಬಿಡುನುಡಿಗಳನ್ನು ಪದರೂಪದಲ್ಲಿ ಕನ್ನಡಿಸಿದ್ದಾರೆ. ಕಠಿಣ ಪದಕೋಶ, ಬೆಡಗಿನ ಪದಕೋಶ, ಕ್ಲಿಷ್ಟ ಬೆಡಗಿನ ವಚನಗಳ

ಹೊಸಗನ್ನಡ ತಾತ್ಪರ್ಯಗಳು ಮೊದಲಾದವುಗಳು ವಚನಗಳನ್ನು ಸರಳವಾಗಿ ಅರ್ಥೈಸಿಕೊಳ್ಳಲು ನೆರವಾಗಿವೆ. ಈ ಹಿನ್ನೆಲೆಯಲ್ಲಿ ಇವರ ಕಾರ್ಯ ಸ್ತುತ್ಯಾರ್ಹವಾದುದು.

ಪಿ.ವಿ. ನಾರಾಯಣ ಅವರು ತಮ್ಮ ***ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ*** ಎಂಬ ಮಹಾಪ್ರಬಂಧದಲ್ಲಿ 12ನೇ ಶತಮಾನದ ಆರ್ಥಿಕ ವ್ಯವಸ್ಥೆಯನ್ನು ವಿವರಿಸುತ್ತಾ ಬಟ್ಟೆ ತಯಾರಿಕೆ, ಮಡಿಕೆಯ ತಯಾರಿಕೆ, ಗಾಣ, ಚರ್ಮದ ಕೆಲಸ, ಮರಗೆಲಸ, ಬಿದುರಿನ ಕೆಲಸ ಮೊದಲಾದವುಗಳನ್ನು ಪ್ರಸ್ತಾಪಿಸಿದ್ದಾರೆ.

ಕೆ.ಎಸ್. ಕುಮಾರಸ್ವಾಮಿಯವರು ತಮ್ಮ ***ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರಿಯರು*** ಎಂಬ ಕೃತಿಯಲ್ಲಿ ವಿಶ್ವಕರ್ಮ ಅಥವಾ ಪಾಂಚಾಲರೆಂದು ಕರೆದುಕೊಂಡ ಶಿಲಾಕರ್ಮಿ, ಅಕ್ಕಸಾಲಿ, ಕಮ್ಮಾರ, ಬಡಗಿ ಮತ್ತು ಕಂಚುಗಾರ ಎಂಬ ಐದು ಕಸಬುದಾರರನ್ನು ಅಧ್ಯಯನಕ್ಕೊಳಪಡಿಸಿಕೊಂಡು ಇದಕ್ಕೆ ಪ್ರಾದೇಶಿಕ ಮಿತಿಯನ್ನಾಗಲಿ, ಕಾಲದ ಮಿತಿಯನ್ನಾಗಲಿ ಹಾಕಿಕೊಳ್ಳದೆ ಬಹುಪಾಲು ಶಾಸನ ಸಂಪುಟಗಳನ್ನು ಆಕರಗಳಾಗಿ ತೆಗೆದುಕೊಂಡು ಸಂದರ್ಭೋಚಿತವಾಗಿ ಕೆಲವು ಕಾವ್ಯಗಳು, ಜಾನಪದ ಕಥೆಗಳು ಹಾಗೂ ಶಿಲ್ಪಶಾಸ್ತ್ರಗಳನ್ನು ಪೋಷಕವಾಗಿ ಸ್ವೀಕರಿಸಿ ಅವರ ವೃತ್ತಿ ಹಿನ್ನೆಲೆ, ಆರ್ಥಿಕ ಸ್ಥಿತಿಗತಿ, ಶೈಕ್ಷಣಿಕ ವಿಚಾರ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ಕುಶಲಕರ್ಮಿಗಳು ಕಾರ್ಯನಿರ್ವಹಿಸುತ್ತಿದ್ದ ಬಗೆ ಮೊದಲಾದ ವಿಚಾರಗಳನ್ನು ವಿವರವಾಗಿ ಅಧ್ಯಯನ ನಡೆಸಿದ್ದಾರೆ. ಇವರು ಐದು ವೃತ್ತಿಗಳನ್ನು ಬೇರೆ ಬೇರೆ ಹೆಸರುಗಳಲ್ಲಿ ಕರೆದುಕೊಂಡರೂ ಶಿಲ್ಪಿಗಳನ್ನೇ ಕೇಂದ್ರೀಕರಿಸಿ, ಕೆಲವು ಬಾರಿ ಶಿಲ್ಪಿಗಳೇ ಮರಗೆಲಸ, ಕಮ್ಮಾರಿಕೆ, ಅಕ್ಕಸಾಲಿ ಕೆಲಸ, ಕಂಚುಗಾರ ಕೆಲಸ ಮಾಡಿದ ಉದಾಹರಣೆಗಳು ನಮಗೆ ಶಾಸನಗಳಿಂದ ದೊರೆಯುವುದರಿಂದ ಈ ಐದೂ ವೃತ್ತಿಗಳು ಒಂದಕ್ಕೊಂದು ಹತ್ತಿರದ ಸಂಬಂಧವಿರುವುದರಿಂದ ಶಿಲ್ಪಿಗಳನ್ನೇ ಕೇಂದ್ರೀಕರಣ ಮಾಡಿಕೊಂಡು ವಿವರಣಾತ್ಮಕವಾಗಿ ಅಧ್ಯಯನ ನಡೆಸಿದಂತೆ ಕಂಡುಬರುತ್ತದೆ.

ನಾವಲಗಿ, ಸಿ.ಕೆ. ರವರು ತಮ್ಮ ***ವಚನ ಸಾಹಿತ್ಯದಲ್ಲಿ ಜಾನಪದ ಅಂಶಗಳು*** ಎಂಬ ಗ್ರಂಥದಲ್ಲಿ ಗ್ರಾಮೀಣ ಕಸುಬುಗಳು ಎಂಬ ಉಪ ಶೀರ್ಷಿಕೆಯಡಿ ಒಕ್ಕಲುತನ, ಕುರಿ ಸಾಕಾಣೆ, ನೇಕಾರಿಕೆ, ಸಿಂಪಿಗಾರಿಕೆ, ಕುಂಬಾರಿಕೆ, ಕಮ್ಮಾರಿಕೆ, ಅಗಸನ ಕಸುಬು, ಕ್ಷೌರದ ಕಸುಬು, ತಳವಾರಿಕೆ ಮೊದಲಾದ ವೃತ್ತಿಗಳನ್ನು ಇಲ್ಲಿ ವಚನಗಳ ಮೂಲಕ ಗುರುತಿಸುವ ಸ್ತುತ್ಯಾರ್ಹ ಕಾರ್ಯ ನಿರ್ವಹಿಸಿದ್ದಾರೆ.

ಇಷ್ಟಲ್ಲದೆ ಕೆಲವು ಬಿಡಿ ಲೇಖನಗಳು ಕೂಡ ಪ್ರಕಟವಾಗಿವೆ. ಇತಿಹಾಸ ದರ್ಶನ ಸಂಪುಟ 6ರಲ್ಲಿ ಪ್ರಕಟವಾಗಿರುವ ಆರ್. ಗೋಪಾಲ್‌ರವರ ***ಹೊಯ್ಸಳ ಕಾಲದ ಕೈಗಾರಿಕೆಗಳು***, ಕರ್ನಾಟಕ ಭಾರತೀಯ ಸಂಪುಟ 3, ಸಂಚಿಕೆ 3ರ ಆರ್.ಎನ್. ಗುರವ ರವರ ***ಎಂಟುಹಿಟ್ಟು*** ಹಾಗೂ ಸಂಪುಟ 10, ಸಂಚಿಕೆ 3ರ ***ಶಾಸನಗಳಲ್ಲಿ ಸಂಘಸಂಸ್ಥೆಗಳು*** ಎಂಬ ಲೇಖನಗಳು ಮಧ್ಯಕಾಲೀನ ಕರ್ನಾಟಕದಲ್ಲಿದ್ದ ಸಂಘ ಸಂಸ್ಥೆಗಳು ಹಾಗೂ ಆಯಗಾರಿಕೆಯ ಕುರಿತಾಗಿ ತಿಳಿಸುತ್ತವೆ. ಕರ್ನಾಟಕ ಭಾರತಿ ಸಂಪುಟ 6, ಸಂಚಿಕೆ 3ರ ಚೆನ್ನಕ್ಕ ಎಲಿಗಾರರ ***ಅಯ್ಯಾವಳೆ ಐನೂರ್ವರು*** ಲೇಖನವು ಸುಮಾರು 8ನೇ ಶತಮಾನದಿಂದ 16ನೇ ಶತಮಾನದ ಪಶ್ಚಿಮಾರ್ಧದವರೆಗಿದ್ದ ವ್ಯಾಪಾರಿಗಳ ಸಂಘವಾದ ಅಯ್ಯಾವೊಳೆ ಐನೂರ್ವರ ಬಗ್ಗೆ ಪ್ರಸ್ತಾಪಿಸಿಸುತ್ತಾರೆ. ಮಾನವಿಕ ಕರ್ಣಾಟಕ, ಸಂಪುಟ 4, ಸಂಚಿಕೆ 2ರ ಎಸ್. ಗುರುರಾಜಾಚಾರ್‌ರವರ ***ಕರ್ನಾಟಕದ ಕೆಲವು ಕೈಗಾರಿಕೆಗಳು*** (1600ರ ವರೆಗೆ) ಲೇಖನ. ಮಾನವಿಕ ಕರ್ಣಾಟಕ, ಸಂಪುಟ 6, ಸಂಚಿಕೆ 1ರ ***ಕರ್ಣಾಟಕದ ಕೆಲವು ಖ್ಯಾತ ವರ್ತಕರು***; ಕ್ರಿ.ಶ. 1300ರವರೆಗೆ ಲೇಖನ ಹಾಗೂ ಮಾನವಿಕ ಕರ್ಣಾಟಕ, ಸಂಪುಟ 4, ಸಂಚಿಕೆ 1ರ ***ಮಧ್ಯಕಾಲೀನ ಕರ್ನಾಟಕದ ವಿದೇಶೀ ವ್ಯಾಪಾರ*** ಲೇಖನಗಳು ಮಧ್ಯಕಾಲೀನ ಕರ್ನಾಟಕದ ಬಗ್ಗೆ ಬೆಳಕು ಚೆಲ್ಲಿವೆ. ವಿಜಯನಗರ ಅಧ್ಯಯನ ಸಂಪುಟ 3ರಲ್ಲಿ ಪ್ರಕಟವಾಗಿರುವ ಶ್ರೀನಿವಾಸ ವಿ. ಪಾಡಿಗಾರರವರ ***ಆನೆಗೊಂದಿ ತಾಮ್ರಪಟ ಶಾಸನ : ಒಂದು ಮರುನೋಟ*** ಎಂಬ ಲೇಖನವು ಕುಂಬಾರ ಕುಲದ ಹುಟ್ಟನ್ನು ಪೌರಾಣಿಕ ಹಿನ್ನೆಲೆಯಲ್ಲಿ ವಿವರಿಸುವುದು. ಮಾನವಿಕ ಕರ್ಣಾಟಕ ಸಂಪುಟ 3 ಸಂಚಿಕೆ 4ರಲ್ಲಿರುವ ಸ್ವರ್ಣಲತಾರವರ ***ಹೊಯ್ಸಳರ ಕಾಲದ ಕೆಲವು ಖ್ಯಾತ ರೂವಾರಿಗಳು*** ಎಂಬ ಇತ್ಯಾದಿ ಲೇಖನಗಳು ಮಧ್ಯಕಾಲೀನ ಕರ್ನಾಟಕದ ವರ್ತಕರು, ರೂವಾರಿಗಳು, ಸಂಘ ಸಂಸ್ಥೆಗಳು, ಕೈಗಾರಿಕೆಗಳ ಕುರಿತು ಪ್ರಸ್ತಾಪಿಸುತ್ತವೆ.

ಈ ಮೇಲೆ ತಿಳಿಸಿದ ನಿಬಂಧಗಳು, ಕೃತಿಗಳು ಹಾಗೂ ಲೇಖನಗಳು ಹೆಚ್ಚಾಗಿ ಕುಶಲಕರ್ಮಿಗಳ ಒಂದೊಂದೆ ಸಮುದಾಯಗಳು ಇಲ್ಲವೇ ಪಾಂಚಾಳರನ್ನು ಕುರಿತು ಹೆಚ್ಚಿನ ಅಧ್ಯಯನಗಳಿವೆ. ಇವರುಗಳು ತಮ್ಮ ಕೃತಿಗಳಲ್ಲಿ ಪ್ರಾಸಂಗಿಕವಾಗಿ ಗ್ರಾಮೀಣ ಕಸುಬುಗಳೆಂತಲೂ, ಕೈಗಾರಿಕೆಗಳು ಎಂಬ ಶೀರ್ಷಿಕೆಯಡಿಯಲ್ಲೊ ಕುಶಲಕರ್ಮದ ವಿಧಗಳನ್ನು ಪರಿಚಯಿಸುವ ಕೆಲಸವನ್ನು ಮಾಡಿವೆಯಾದರೂ ವಿಷಯದ ಕೊರತೆ ಇದೆ. ಇಂಥ ಚರ್ಚೆಗಳಲ್ಲಿ ಶಬ್ದಗಳ ಅರ್ಥದ ನಿರ್ಣಯ, ಆಯಾ ವೃತ್ತಿಯ ಸ್ವರೂಪ ಮುಂತಾದವುಗಳ ಕುರಿತು ಚರ್ಚೆಗಳು ಕೇಂದ್ರಿತವಾಗಿಯೇ ಹೊರತು ಇವರೆಲ್ಲರನ್ನು ಒಂದು ಸಾಮಾಜಿಕ, ಸಾಂಸ್ಕೃತಿಕ ಸಂದರ್ಭದಲ್ಲಿ ವಿವೇಚಿಸುವ ಪ್ರಯತ್ನಗಳು ಇಲ್ಲ. ಕುಶಲಕರ್ಮದ ಎಲ್ಲಾ ಪ್ರಕಾರಗಳನ್ನು ಒಗ್ಗೂಡಿಸುವ, ಅವರ ತಾಂತ್ರಿಕ ವಿವರಗಳು, ಅವರ ಆರ್ಥಿಕ ಸ್ಥಾನಮಾನ, ಸಾಮಾಜಿಕ

ವ್ಯವಸ್ಥೆಯನ್ನು ಸಮಗ್ರವಾಗಿ ವಿಶ್ಲೇಷಿಸುವ ಕುರಿತು ಇದೂವರೆಗಿನ ಅಧ್ಯಯನಗಳು ನಡೆದಿಲ್ಲ. ಹೀಗಾಗಿ ಕುಶಲಕರ್ಮದಲ್ಲಿ ತೊಡಗಿದ ನೇಕಾರರು, ಬಡಗಿಗಳು, ಕಮ್ಮಾರರು, ಕುಂಬಾರರು, ಅಕ್ಕಸಾಲಿಗರು, ಕಂಚುಗಾರರು, ತೆಲ್ಲಿಗರು, ಶಿಲ್ಪಿಗಳು, ಮಾಲೆಗಾರರು, ಮೇದಾರರು, ಚಮ್ಮಾರರ ಕುರಿತಾಗಿ ಅವರ ತಾಂತ್ರಿಕತೆ, ಅವರ ಉತ್ಪಾದನಾ ವಿಧಾನ, ಶಿಕ್ಷಣ ವ್ಯವಸ್ಥೆ, ಮಾರುಕಟ್ಟೆಯ ಸೌಲಭ್ಯ, ಹಣದ ವಿನಿಯೋಗ, ಬೆಲೆ ನಿಗದಿ ಮೊದಲಾದ ಆರ್ಥಿಕ ಅಂಶಗಳು ಹಾಗೂ ವರ್ಣ, ಜಾತಿ, ಮತ ಧರ್ಮ, ಸಂಘಟನೆ, ಸಾಮಾಜಿಕ ಸ್ಥಾನಮಾನ ಮೊದಲಾದ ಸಾಮಾಜಿಕ ಅಂಶಗಳನ್ನು ಗುರುತಿಸುವ ಅವಶ್ಯಕತೆಯನ್ನು ಮನಗಂಡು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## 1.3. ಅಧ್ಯಯನದ ಅಗತ್ಯತೆ ಮತ್ತು ಮಹತ್ವ

ಕರ್ನಾಟಕ ಕುಶಲಕರ್ಮಿಗಳನ್ನು ಕುರಿತು ಈ ಮೇಲೆ ನಡೆದಿರುವ ಅಧ್ಯಯನವನ್ನು ಅವಲೋಕಿಸಿದಾಗ

- ಈ ಎಲ್ಲಾ ಅಧ್ಯಯನಗಳಲ್ಲಿ ಎಲ್ಲಾ ಕುಶಲಕರ್ಮಗಳನ್ನು ಒಗ್ಗೂಡಿಸುವ ಹಾಗೂ ಅವರ ತಾಂತ್ರಿಕ ಶೈಕ್ಷಣಿಕ, ಆರ್ಥಿಕ, ಸಾಮಾಜಿಕ ಸ್ಥಾನಮಾನ ಇತ್ಯಾದಿ ಕುರಿತು ಇದೂವರೆಗಿನ ಅಧ್ಯಯನಗಳು ಪ್ರಧಾನವಾಗಿ ನಡೆದಿಲ್ಲದಿರುವುದು ತಿಳಿದುಬರುತ್ತದೆ.

- ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಇತಿಹಾಸ ಕುರಿತು ನಮಗೆ ಇನ್ನೂ ಸ್ಪಷ್ಟವಾದ ಚಿತ್ರಣ ಸಿಗುವಷ್ಟು ಸಂಶೋಧನೆಗಳು ಆಗಿಲ್ಲ. ಅದರಲ್ಲೂ ಈ ಸಾಮಾಜಿಕ ಇತಿಹಾಸವು ಶಾಸನಗಳಲ್ಲಿ ಉಲ್ಲೇಖಿತವಾಗುವ ಆಡಳಿತ ಅಧಿಕಾರಿಗಳ ವರ್ಗದಿಂದ ಆಚೆಗೆ ತನ್ನ ಪರಿಧಿಯನ್ನು ವಿಸ್ತರಿಸಿಲ್ಲ. ನಮ್ಮ ಈ ಅಧ್ಯಯನದಲ್ಲಿ ಕುಶಲಕರ್ಮಿಗಳ ಸಾಮಾಜಿಕ ಜೀವನ ಕುರಿತು ತಿಳಿಯಲು ವಚನಗಳು ಹಾಗೂ ಶಾಸನಗಳನ್ನು ತೆಗೆದುಕೊಳ್ಳಲಾಗಿದೆ. ಇದರಿಂದ ನಮಗೆ ಕೆಲವೊಂದು ವ್ಯತ್ಯಾಸಗಳು ಕಂಡುಬರುತ್ತವೆ. ವೀರಶೈವ ಚಳುವಳಿಯಲ್ಲಿ ಕುಶಲಕರ್ಮಿಗಳು ಮುಂತಾದವರು ಮುಂಚೂಣಿಯಲ್ಲಿದ್ದರೆಂದು ಆರ್.ಎನ್. ನಂದಿಯವರು ತಮ್ಮ ***ವೀರಶೈವ ಚಳುವಳಿಯ ಹುಟ್ಟು*** ಲೇಖನದಲ್ಲಿ ಉಲ್ಲೇಖಿಸುತ್ತಾರೆ. ಹೀಗೆ ವಚನಗಳನ್ನು ಒಂದು ರೀತಿಯಲ್ಲಿ ಸಾಮಾಜಿಕ ಚಳುವಳಿ ಎಂದು ಪರಿಗ್ರಹಿಸುವುದರಿಂದ ಮತ್ತು ಅದರಲ್ಲಿದ್ದ ಅನೇಕ ಕುಶಲಕರ್ಮಿಗಳನ್ನು ಆಧಾರವಾಗಿಟ್ಟುಕೊಂಡು ಇನ್ನೂ ಕೆಲವು ಇತಿಹಾಸಕಾರರು ವಾದಿಸಿದ್ದಾರೆ. ಆದರೆ ಮಧ್ಯಕಾಲದ ಕುಶಲಕರ್ಮಿಗಳ ಸಾಮಾಜಿಕ ಜೀವನವನ್ನು ಶಾಸನಗಳಲ್ಲಿ ನೋಡಿದಾಗ ಅದರಲ್ಲಿ ನಮಗೆ ಬೇರೆ ರೀತಿಯಲ್ಲೇ ಚಿತ್ರ ಕಂಡುಬರುತ್ತದೆ. ಪ್ರಸ್ತುತ ಪ್ರಬಂಧದಲ್ಲಿ

ಇವೆರಡೂ ಚಿತ್ರಗಳನ್ನು ಒಟ್ಟಿಗೇ ತರುವ ಪ್ರಯತ್ನ ಮಾಡಲಾಗಿದೆ ಮತ್ತು ಅದಕ್ಕೆ ಕೆಲವೊಂದು ವಿಶ್ಲೇಷಣೆಗಳನ್ನು ನೀಡಲಾಗಿದೆ.

- ನಮ್ಮ ಆರ್ಥಿಕ ಇತಿಹಾಸಗಳಲ್ಲೂ ಕೂಡ ವರ್ತಕರ ಕುರಿತು ಹಾಗೂ ವೃತ್ತಿ ಸಂಘಗಳ ಕುರಿತು ವಿದ್ವಾಂಸರು ಗಮನ ಕೊಟ್ಟಿದ್ದಾರೆಯೇ ಹೊರತು ಕುಶಲಕರ್ಮಿಗಳ ಕುರಿತು ಇನ್ನೂ ಕ್ರೂಢೀಕರಣದ ಕೊರತೆ ಇದೆ. ಈ ಕುಶಲಕರ್ಮಿಗಳು ಒಂದು ಕಾಲದಲ್ಲಿ ಕೈಗಾರಿಕೋತ್ಪಾದನೆಗಳನ್ನು ಮಾಡುವವರಾಗಿದ್ದರಿಂದ ನಗರಗಳ ಹಾಗೂ ಹಳ್ಳಿಗಳ ಆರ್ಥಿಕ ಜೀವನದಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸಿದ್ದರು. ಇವರಲ್ಲಿ ಹಲವರು ವೃತ್ತಿ ಸಂಘಗಳನ್ನು ಕಟ್ಟಿಕೊಂಡು ಮಧ್ಯಕಾಲೀನ ಜೀವನದಲ್ಲಿ ಪ್ರಾಮುಖ್ಯತೆಯನ್ನು ಪಡೆದಿದ್ದರು. ಇವರು ದಾನ ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಇಂಥ ಉಲ್ಲೇಖಗಳನ್ನು ಬಿಟ್ಟರೆ ಉಳಿದಂತೆ ಆಯಾ ವೃತ್ತಿಗಳಿಗೆ ಸಂಬಂಧಿಸಿದ ಅವುಗಳ ಸ್ವರೂಪ, ಸ್ಥಾನಮಾನ, ಏರಿಳಿತಗಳು, ಸಮಾಜದ ಇತರೆ ಸಮೂಹಗಳ ಜೊತೆ ಇವರ ಸಂಬಂಧ ಹಾಗೂ ಅಂದಿನ ಸಾಮಾಜಿಕ ಆರ್ಥಿಕ ಜೀವನದಲ್ಲಿ ಅವರ ಮಹತ್ವ ಇವುಗಳ ಕುರಿತು ಮಾಹಿತಿಯನ್ನು ಸಂಗ್ರಹಿಸುವುದಕ್ಕೆ ವಿಶೇಷವಾದ ಸಂಶೋಧನೆಯ ಅಗತ್ಯತೆಯನ್ನು ಮನಗಂಡು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## 1.4. ಸಂಶೋಧನೆ ಆಕರಗಳು

ಈ ಸಂಶೋಧನೆಯನ್ನು ಕೈಗೊಳ್ಳಲು ನಮಗೆ ಅಗತ್ಯವಿರುವ ಆಕರಗಳು ಸಾಕಷ್ಟು ಲಭ್ಯವಿದೆ. ಈ ಪ್ರೌಢ ಪ್ರಬಂಧದಲ್ಲಿ ಆಯ್ದುಕೊಂಡ ಕಾಲಾವಧಿಗೆ ಸಂಬಂಧಿಸಿದಂತೆ ನಮಗೆ ಕರ್ನಾಟಕದ ತುಂಬೆಲ್ಲಾ ಶಾಸನಗಳು ಸಿಗುತ್ತವೆ. ಕರ್ನಾಟಕದಲ್ಲಿ ಲಭ್ಯವಿರುವ ಶಾಸನಗಳು ಹಲವು ಶಾಸನ ಸಂಪುಟಗಳಲ್ಲಿ ಕ್ರೂಢೀಕರಿಸಲಾಗಿದೆ. ಈ ದಿಸೆಯಲ್ಲಿ ಎಪಿಗ್ರಾಫಿಯಾ ಕರ್ನಾಟಿಕ ಪರಿಷ್ಕೃತ ಸಂಪುಟಗಳಾದ

I (ಕೊಡಗು ಜಿಲ್ಲೆ), II (ಶ್ರವಣಬೆಳಗೊಳ), III (ಮೈಸೂರು ಜಿಲ್ಲೆ), IV (ಮೈಸೂರು ಜಿಲ್ಲೆ), V (ಮೈಸೂರು ಜಿಲ್ಲೆ), VI (ಮಂಡ್ಯ ಜಿಲ್ಲೆ), VII (ಮಂಡ್ಯ ಜಿಲ್ಲೆ), VIII (ಹಾಸನ ಜಿಲ್ಲೆ), IX (ಹಾಸನ ಜಿಲ್ಲೆ), X (ಹಾಸನ ಜಿಲ್ಲೆ), XI (ಚಿಕ್ಕಮಗಳೂರು ಜಿಲ್ಲೆ), XII (ಚಿಕ್ಕಮಗಳೂರು ಜಿಲ್ಲೆ), XIII (ಶಿವಮೊಗ್ಗ ಜಿಲ್ಲೆ) ಹಾಗೂ ಬಿ.ಎಲ್. ರೈಸ್ ಸಂಪಾದಿತ ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ II, V, VI, VII, VIII, X, XI, ಕನ್ನಡ ವಿ.ವಿ. ಶಾಸನ ಸಂಪುಟಗಳಾದ I (ಬಳ್ಳಾರಿ ಜಿಲ್ಲೆ), II (ಕೊಪ್ಪಳ ಜಿಲ್ಲೆ), VI (ಮಹಾರಾಷ್ಟ್ರದ ಕನ್ನಡ ಶಾಸನಗಳು),

VII (ರಾಯಚೂರು ಜಿಲ್ಲೆ), ಆರ್.ಎಸ್. ಪಂಚಮುಖಿ ಸಂಪಾದಿತ ಕರ್ನಾಟಕ ಇನ್ಸ್‌ಕ್ರಿಪ್ಷನ್ಸ್ ಸಂಪುಟ I, II, ಅಣ್ಣೀಗೆರೆ ಸಂಪಾದಿತ ಸಂಪುಟ IV ಹಾಗೂ ಬಿ.ಆರ್. ಗೋಪಾಲ್ ಸಂಪಾದಿತ V ಮತ್ತು VI ಸಂಪುಟಗಳು, ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್ ಸಂಪುಟ IX(i) (ii), XI(i) (ii), XV, XVIII, XX ಈ ಎಲ್ಲಾ ಸಂಪುಟಗಳಲ್ಲಿ ಕರ್ನಾಟಕಕ್ಕೆ ಸಂಬಂಧಿಸಿದ ಶಾಸನಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದ್ದು ಬೆಂಗಳೂರು, ಕೋಲಾರ, ತುಮಕೂರು, ಬೀದರ್, ಕೊಡಗು ಮತ್ತು ಗುಲ್ಬರ್ಗಾ ಜಿಲ್ಲೆಗಳನ್ನು ಹೊರತುಪಡಿಸಿ ಉಳಿದ ಜಿಲ್ಲೆಗಳಲ್ಲಿನ ಪ್ರಕಟಿತ ಶಾಸನಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹೀಗಿದ್ದೂ ಸಾಂದರ್ಭಿಕವಾಗಿ ಅಗತ್ಯವಿದ್ದಲ್ಲಿ ಈ ಜಿಲ್ಲೆಗಳ ಕೆಲವು ಶಾಸನಗಳ ಉಪಯೋಗವನ್ನು ಪಡೆದುಕೊಳ್ಳಲಾಗಿದೆ. ಈ ಶಾಸನಗಳಿಂದ ದೊರಕಿದ ಅಧ್ಯಯನಕ್ಕೆ ಅಗತ್ಯವಿದ್ದ ವಿಷಯಗಳನ್ನು ಮಾಹಿತಿ ಕಾರ್ಡುಗಳಲ್ಲಿ ಬರೆದುಕೊಂಡು ವಿಶ್ಲೇಷಿಸಲಾಗಿದೆ.

ನಮಗೆ ಕುಶಲಕರ್ಮಿಗಳಿಗೆ ಸಂಬಂಧಿಸಿದಂತೆ ಸಿಗುವ ಶಾಸನಗಳಲ್ಲಿ ತೆಲ್ಲಿಗರ ಕುರಿತಾಗಿ ಹೆಚ್ಚಿನ ಶಾಸನಗಳು ಲಭ್ಯವಾಗಿವೆ. ಉಳಿದ ಕುಶಲಕರ್ಮಿಗಳಿಗೆ ಸಂಬಂಧಿಸಿದಂತೆ ಕಡಿಮೆ ಶಾಸನಗಳಿವೆ. ಅಧ್ಯಯನಕ್ಕೆ ತೆಗೆದುಕೊಂಡ ಅವಧಿಯನ್ನು ಗಮನಿಸಿ ಅಭ್ಯಸಿಸಿದಾಗ ಸುಮಾರು 250ಕ್ಕೂ ಅಧಿಕ ಶಾಸನಗಳು ತೆಲ್ಲಿಗರಿಗೆ ಸಂಬಂಧಿಸಿವೆ. ಅವುಗಳಿಂದ ತೆಲ್ಲಿಗರ ಕುರಿತು ತುಂಬಾ ವಿವರಗಳು ದೊರಕಿದ್ದು ಅವುಗಳೆಲ್ಲವನ್ನು ಆಯಾಯ ಅಧ್ಯಾಯಗಳಲ್ಲೆ ವಿಶ್ಲೇಷಿಸಲಾಗಿದೆ. ಉಳಿದ ಕುಶಲಕರ್ಮಿಗಳಾದ ನೇಕಾರರು, ಬಡಗಿಗಳು, ಕುಂಬಾರರು, ಕಮ್ಮಾರರು, ಅಕ್ಕಸಾಲಿಗರು, ಕಂಚುಗಾರರ ಕುರಿತ ಶಾಸನಗಳು ಸುಮಾರು 100ರ ಒಳಗೆಯೇ ಇವೆ. ಅವಾದರೂ ನಮಗೆ ಹೆಚ್ಚಿನ ಮಾಹಿತಿಗಳನ್ನು ಕೊಟ್ಟಿಲ್ಲ. ಅಂತಹ ಸಂದರ್ಭದಲ್ಲಿ ಸಾಹಿತ್ಯಾಧಾರಗಳನ್ನು ತೆಗೆದುಕೊಂಡು ಚರ್ಚಿಸಲಾಗಿದೆ.

ಅಂದಿನ ಕಾಲದ ಸಾಹಿತ್ಯಾಧಾರಗಳಲ್ಲಿ ವಚನಗಳು ಅತ್ಯಂತ ಪ್ರಮುಖವಾಗಿವೆ. ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಿಸಿದ ಸಮಗ್ರ ವಚನ ಸಂಪುಟಗಳಲ್ಲಿನ ನೂರಾರು ವಚನಗಳು ನಮಗೆ ಆಕರಗಳಾಗಿವೆ. ವಚನಗಳು ಮಧ್ಯಕಾಲದ ಶೈವ ಮತದಲ್ಲಿ ಪ್ರಾಮುಖ್ಯತೆ ಗಳಿಸಿದ ವಿಭಿನ್ನ ವೃತ್ತಿಗಳ ಹಿನ್ನೆಲೆಯಿಂದ ಬಂದ ಶರಣರನ್ನು ಆಯಾ ವೃತ್ತಿಗಳ ಸ್ವರೂಪ, ಸ್ಥಾನಮಾನ, ತಾಂತ್ರಿಕತೆ, ರೂಢಿ-ಸಂಪ್ರದಾಯಗಳು ಮುಂತಾದವುಗಳನ್ನು ಕುರಿತು ಅಮೂಲ್ಯವಾದ ಮಾಹಿತಿಯನ್ನು ನೀಡುತ್ತವೆ. ಇವಲ್ಲದೆ ಈ ಕಾಲದ ಸಾಹಿತ್ಯ ಗ್ರಂಥಗಳಾದ ಶಿವಕೋಟ್ಯಾಚಾರ್ಯನ ವಡ್ಡಾರಾಧನೆ, ನಯಸೇನನ ಧರ್ಮಾಮೃತ, ಪಂಪನ ಆದಿಪುರಾಣ, ರನ್ನನ ಗದಾಯುದ್ಧ, ಹರಿಹರನ ರಗಳೆಗಳು, ಬ್ರಹ್ಮಶಿವನ ಸಮಯ ಪರೀಕ್ಷೆ

ಮೊದಲಾದ ಕೃತಿಗಳಲ್ಲೂ ಸಾಂದರ್ಭಿಕವಾಗಿ ವೃತ್ತಿ ಜೀವನ ಕುರಿತು ಉಲ್ಲೇಖಗಳು ಬರುತ್ತವೆ. ಹಾಗಾಗಿ ಸಾಕಷ್ಟು ಮಾಹಿತಿ ಇವುಗಳಿಂದ ಲಭ್ಯವಿದೆ.

## 1.5. ಸಂಶೋಧನೆಯ ವಿಧಾನ ಮತ್ತು ಸ್ವರೂಪ

ಕುಶಲಕರ್ಮಿಗಳ ಕುರಿತು ಸಾಹಿತ್ಯ ಮತ್ತು ಶಾಸನ ಆಧಾರಗಳಲ್ಲಿರುವ ಮಾಹಿತಿಯನ್ನು ಬಾಹ್ಯ ವಿಮರ್ಶೆ ಮತ್ತು ಆಂತರಿಕ ವಿಮರ್ಶೆಗಳ ವಿಧಾನದಿಂದ ಸಂಗ್ರಹಿಸಲಾಗಿದೆ. ಹೀಗೆ ಸಂಗ್ರಹಿಸಿದ ಮಾಹಿತಿಗಳು ವಿಶ್ಲೇಷಿಸುವ ಹಾಗೂ ಸಾಮಾನ್ಯೀಕರಿಸುವ ಹಂತದಲ್ಲಿ ಈಗಾಗಲೇ ಪ್ರಸಿದ್ಧವಾಗಿರುವ ಗ್ರಂಥಗಳನ್ನು ಮಾದರಿಯಾಗಿಟ್ಟುಕೊಂಡು ಸಂಶೋಧನೆಯನ್ನು ನಡೆಸಲಾಗಿದೆ. ಇರ್ಫಾನ್ ಹಬೀಬ್ ಮೊಗಲ್ ಸಾಮ್ರಾಜ್ಯದ ಕುರಿತು ನಡೆಸಿದ ಅಧ್ಯಯನಗಳು ಕೇಂಬ್ರಿಡ್ಜ್ ಎಕನಾಮಿಕ್ ಹಿಸ್ಟರಿ ಮುಂತಾದವುಗಳು ಈ ಸಂದರ್ಭದಲ್ಲಿ ಉಪಯುಕ್ತವಾಗಿವೆ. ವಿಶ್ಲೇಷಣೆಯನ್ನು ಪರಾಮರ್ಶಿಸುವ ಹಂತದಲ್ಲಿ ಮಧ್ಯಕಾಲದ ಕುರಿತು ಚಾಲ್ತಿಯಲ್ಲಿರುವ ಫ್ಯೂಡಲಿಸಂ, ಸಿಗ್‌ಮ್ಯಾನ್‌ಟರಿ ಸ್ಟೇಟ್, ಜಜ್ಮಾನಿಪದ್ಧತಿ ಮುಂತಾದ ಸಿದ್ಧಾಂತಗಳ ಮಾದರಿಗಳನ್ನು ಸಹ ಪರಿಶೀಲಿಸಲಾಗಿದೆ.

ಪ್ರಸ್ತುತ ನಮ್ಮ ಅಧ್ಯಯನವನ್ನು ಪ್ರಸ್ತಾವನೆ, ಕುಶಲಕರ್ಮದ ಪ್ರಕಾರಗಳು, ಕುಶಲಕರ್ಮದ ತಾಂತ್ರಿಕತೆ, ಆರ್ಥಿಕ ಅಂಶಗಳು, ಸಾಮಾಜಿಕ ಅಂಶಗಳು ಮತ್ತು ಉಪಸಂಹಾರ ಎಂಬ ಅಧ್ಯಾಯಗಳಾಗಿ ವಿಂಗಡಿಸಿಕೊಂಡು ಅಭ್ಯಸಿಸಲಾಗಿದೆ.

ಕುಶಲಕರ್ಮದ ಪ್ರಕಾರಗಳು ಎಂಬ ಎರಡನೇ ಅಧ್ಯಾಯದಲ್ಲಿ ಕೌಶಲ್ಯವನ್ನು ಅವಲಂಬಿಸಿರುವ ವೃತ್ತಿಗಳನ್ನು ಕುಶಲಕರ್ಮಗಳೆಂದು, ಕಾರುಕರ್ಮ ಎಂದು ಪರಿಗಣಿಸಲಾಗಿದೆ. ಇಂತಹ ಕುಶಲಕರ್ಮಗಳನ್ನು ಆಧರಿಸಿ ಜೀವಿಸುವ ಜನರನ್ನು ಕುಶಲಕರ್ಮಿಗಳು ಎನ್ನಲಾಗಿದೆ. ಶಾಸನಗಳು ಹಾಗೂ ಸಾಹಿತ್ಯಾಧಾರಗಳು ಮೂಲಕ ಅಧ್ಯಯನಕ್ಕೆ ತೆಗೆದುಕೊಂಡ ಕುಶಲಕರ್ಮದ ಪ್ರಕಾರಗಳು : ನೇಕಾರರು, ಬಡಗಿಗಳು, ಕಮ್ಮಾರರು, ಕುಂಬಾರರು, ಅಕ್ಕಸಾಲಿಗರು, ಕಂಚುಗಾರ, ತೆಲ್ಲಿಗರು, ಶಿಲ್ಪಿಗಳು, ಮಾಲೆಗಾರರು, ಚರ್ಮಕಾರರು ಹಾಗೂ ಇತರೆ ವೃತ್ತಿಕಾರರನ್ನು ಕುಶಲಕರ್ಮದ ಪ್ರಕಾರಗಳಾಗಿ ಗುರುತಿಸಿ ವಿಶ್ಲೇಷಿಸಲಾಗಿದೆ.

ಕುಶಲಕರ್ಮದ ತಾಂತ್ರಿಕತೆ ಎಂಬ ಮೂರನೇ ಅಧ್ಯಾಯದಲ್ಲಿ ಕಲಾಕೌಶಲ್ಯವೇ ಜಾಸ್ತಿಯಿದ್ದು, ತಕ್ಕಮಟ್ಟಿಗೆ ಯಂತ್ರೋಪಕರಣಗಳ ಬಳಕೆಯನ್ನು ಇವರ ತಾಂತ್ರಿಕ ವಿವರದಲ್ಲಿ ನೋಡಬಹುದಾಗಿದೆ. ಅಲ್ಲದೆ ಈ ವೃತ್ತಿಗಳು ಬಹುತೇಕವಾಗಿ ವಂಶಪಾರಂಪರ್ಯ ವೃತ್ತಿಗಳಾದ್ದರಿಂದ ಇವರ ಶಿಕ್ಷಣವು ಪ್ರಾಯೋಗಿಕವಾಗಿ ಮನೆಯಲ್ಲಿಯೇ ತಂದೆ, ತಾತರ ಮಾರ್ಗದರ್ಶನದಲ್ಲಿ ಕಲಿಯಲಾಗುತ್ತಿದ್ದ ವೃತ್ತಿಗಳು. ಹಾಗಾಗಿ ಇವರ ಅಕ್ಷರ ಜ್ಞಾನಕ್ಕಿಂತ ವೃತ್ತಿತರಬೇತಿಯು ಮನೆಯಲ್ಲಿಯೇ ನಡೆಯುತ್ತಿತ್ತು. ಈ ಹಿನ್ನೆಲೆಯಲ್ಲಿ ಇವರ ತಾಂತ್ರಿಕ ವಿವರಗಳು, ಉಪಕರಣಗಳು, ಉತ್ಪಾದನಾ ಪ್ರಕ್ರಿಯೆ ಹಾಗೂ ತಾಂತ್ರಿಕ ಶಿಕ್ಷಣಗಳನ್ನು ಅಭ್ಯಸಿಸುವ ಮೂಲಕ ಕುಶಲಕರ್ಮದ ತಾಂತ್ರಿಕತೆಯನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

ಆರ್ಥಿಕ ಅಂಶಗಳು ಎಂಬ ನಾಲ್ಕನೇ ಅಧ್ಯಾಯದಲ್ಲಿ ನೇಕಾರರು, ಬಡಗಿಗಳು, ಕಮ್ಮಾರರು, ಕುಂಬಾರರು, ಅಕ್ಕಸಾಲಿಗರು, ಕಂಚುಗಾರರು, ಚಮ್ಮಾರರು, ಮೇದಾರರು, ಗಾಣಿಗರು ಇವರು ಉತ್ಪಾದಿಸುತ್ತಿದ್ದ ಉತ್ಪಾದಿತ ವಸ್ತುಗಳು, ವ್ಯಾಪಾರಿ ವಸ್ತುಗಳು, ಮಾರುವ ವ್ಯವಸ್ಥೆ, ವಸ್ತುಗಳ ಸಾಗಾಟ, ತೂಕಗಳು ಮತ್ತು ಅಳತೆಗಳು, ವೃತ್ತಿ ತೆರಿಗೆಗಳು, ವರ್ತಕರು, ವೇತನ ದತ್ತಿಗಳು, ಹಣದ ವಿನಿಯೋಗ ಹಾಗೂ ಸಂಘಟನೆಗಳು ಈ ಮೊದಲಾದ ಅಂಶಗಳ ಕುರಿತು ವಿಸ್ತೃತವಾಗಿ ಚರ್ಚಿಸಲಾಗಿದೆ. ಉತ್ಪಾದಕ ವಿನಿಮಯ ವೃತ್ತಿಯ ಕುಂಬಾರ, ಅಕ್ಕಸಾಲಿ, ಬಡಗಿಗಳು, ನೇಕಾರರು, ತೆಲ್ಲಿಗರು ಆಯಾ ವಸ್ತುಗಳನ್ನು ಉತ್ಪಾದಿಸುವುದರೊಂದಿಗೆ ವ್ಯಾಪಾರ ಕಾರ್ಯವನ್ನು ಮಾಡಿದ್ದಾರೆ. ಹೀಗೆ ಅವುಗಳ ಉತ್ಪಾದನೆ ಮಾರಾಟ ಕಾರ್ಯಗಳನ್ನು ಜೊತೆಜೊತೆಯಾಗಿ ಮಾಡಿದ ವಿಷಯವನ್ನು ಚರ್ಚಿಸಲಾಗಿದೆ. ಈ ನಿಟ್ಟಿನಲ್ಲಿ ಈ ಸಮುದಾಯಗಳು ಹೇಗೆ ವ್ಯಾಪಾರವನ್ನು ನಿಭಾಯಿಸಿಕೊಳ್ಳುತ್ತಾ ಇದ್ದವು, ಸಮಾಜದಲ್ಲಿ ಆರ್ಥಿಕವಾಗಿ ಯಾವ ರೀತಿಯ ಸ್ಥಾನಮಾನವನ್ನು ಹೊಂದಿದ್ದರೆಂಬ ವಿಷಯಗಳನ್ನು ಇದೂವರೆಗೂ ಗೊತ್ತಾಗದ ವಿವರಗಳನ್ನು ಈ ಅಧ್ಯಾಯದಲ್ಲಿ ಬೆಳಕಿಗೆ ತರಲಾಗಿದೆ.

ಸಾಮಾಜಿಕ ಅಂಶಗಳು ಎಂಬ ಐದನೇ ಅಧ್ಯಾಯದಲ್ಲಿ ಮಧ್ಯಕಾಲೀನ ಕರ್ನಾಟಕದ ಕುಶಲಕರ್ಮಿಗಳ ಸಾಮಾಜಿಕ ಸ್ಥಾನಮಾನವನ್ನು ಕುರಿತು ಚರ್ಚಿಸಲಾಗಿದೆ. ಇವರ ಸಾಮಾಜಿಕ ಸಂಘಟನೆ, ವರ್ಣ, ಜಾತಿ, ಸಾಮಾಜಿಕ ಚಲನೆ, ಜಾತಿ ಹಾಗೂ ವೃತ್ತಿಗಳ ಕುರಿತು ಕುಶಲ ವೃತ್ತಿಪರ ವಚನಕಾರರ ಅಭಿಪ್ರಾಯಗಳು, ಎಡಪಂಥೀಯ ವಿದ್ವಾಂಸರ ವಾದಗಳು, ಮತ ಧರ್ಮಗಳ ಕುರಿತು ಇಲ್ಲಿ ಚರ್ಚೆ ಮಾಡಲಾಗಿದೆ. ಸಾಮಾಜಿಕ ವರ್ಗವಾಗಿ ನೋಡುವಾಗ

ಕುಶಲಕರ್ಮಿಗಳ ಕುರಿತು ಶಾಸನಗಳಲ್ಲಿ ಒಂದು ತರಹದ ವಿವರ, ವಚನಗಳಲ್ಲಿ ಒಂದು ತರಹದ ವಿವರ ಸಿಗುತ್ತದೆ. ವಚನಗಳಲ್ಲಿ ಸಿಗುವ ಕುಶಲಕರ್ಮಿಗಳ ವಿವರಗಳಲ್ಲಿ ಸಾಮಾಜಿಕ ಸಂಘರ್ಷ ಕಂಡುಬರುತ್ತದೆ. ಹಾಗಾಗಿ ಇಂಥ ವಿಷಯ ಇಟ್ಟುಕೊಂಡು ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಾಯದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಕೊನೆಯ ಅಧ್ಯಾಯವಾದ ಸಮಾರೋಪದಲ್ಲಿ ಮಧ್ಯಕಾಲೀನ ಕರ್ನಾಟಕದ ಕುಶಲಕರ್ಮಿಗಳ ಸಾಮಾಜಿಕ ಮತ್ತು ಚಾರಿತ್ರಿಕ ಅಧ್ಯಯನ ಎಂಬ ಶೀರ್ಷಿಕೆಯಡಿ ನಡೆಸಿದ ಸಂಶೋಧನೆಯ ಪರಿಣಾಮವಾಗಿ ಕಂಡುಕೊಳ್ಳಲಾದ ಫಲಿತಗಳನ್ನು ಈ ಅಧ್ಯಾಯದಲ್ಲಿ ಸಮೀಕ್ಷೆ ನಡೆಸಲಾಗಿದೆ. ಅವುಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದ್ದು, ಸಮಾಜವೊಂದರ ಇತಿಹಾಸ ಅರಿಯಲು ಕೇವಲ ಸಮಾಜದಲ್ಲಿ ಉತ್ತಮ ಸ್ಥಾನಮಾನ ಹೊಂದಿದವರು ಮಾತ್ರವಲ್ಲದೆ ಅವರಿಗಿಂತಲೂ ಮಹತ್ವದ ಸ್ಥಾನ ಗಳಿಸಿದ ಕುಶಲಕರ್ಮಿಗಳ ಕುರಿತು ಅಧ್ಯಯನ ನಡೆಸಿದ್ದು ಇದು ಮಧ್ಯಕಾಲೀನ ಸಾಮಾಜಿಕ ಇತಿಹಾಸವನ್ನು ಅರಿಯಲು ಸಹಕಾರಿಯಾಗಲಿದೆ. ಹೀಗೆ ನಮ್ಮ ಸಂಪ್ರಬಂಧವು ತನ್ನ ಸ್ವರೂಪವನ್ನು ವಿಸ್ತರಿಸಿಕೊಂಡಿದೆ.

## 1.6. ಅಧ್ಯಯನದ ಮಿತಿಗಳು

- ಪ್ರಸ್ತುತ ಅಧ್ಯಯಕ್ಕೆ ಶಾಸನಗಳು ಹಾಗೂ ಪ್ರಾಚೀನ ಕನ್ನಡ ಸಾಹಿತ್ಯವನ್ನು ಆಧಾರವಾಗಿಟ್ಟುಕೊಳ್ಳಲಾಗಿದೆ. 10-14ನೇ ಶತಮಾನದ ಶಾಸನಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹೀಗಿದ್ದೂ ಕೆಲವೊಮ್ಮೆ ಮಹತ್ವದ ವಿಷಯವಿದ್ದಲ್ಲಿ ಆಚೀಚಿನ ಶಾಸನಗಳನ್ನು ಗಮನಿಸಲಾಗಿದೆ.
- ಶಾಸನ ಹಾಗೂ ಸಾಹಿತ್ಯಗಳ ಆಧಾರದಿಂದ ಪ್ರಸ್ತುತ ಅಧ್ಯಯನದಲ್ಲಿ ಕುಶಲಕರ್ಮದ ಪ್ರಕಾರಗಳಾಗಿ ನೇಕಾರರು, ಬಡಗಿಗಳು, ಕಮ್ಮಾರರು, ಕುಂಬಾರರು, ಅಕ್ಕಸಾಲಿಗರು, ಕಂಚುಗಾರು, ತೆಲ್ಲಿಗರು, ಶಿಲ್ಪಿಗಳು, ಮಾಲೆಗಾರರು, ಮೇದಾರರು, ಚರ್ಮಕಾರರು ಹಾಗೂ ಇತರೆ ವೃತ್ತಿಕಾರರನ್ನು ಮಾತ್ರ ಅಧ್ಯಯನಕ್ಕೊಳಪಡಿಸಿಕೊಳ್ಳಲಾಗಿದೆ.
- ಈ ಪ್ರಬಂಧದಲ್ಲಿ ಎಪಿಗ್ರಾಫಿಯಾ ಕರ್ನಾಟಿಕದ ಪರಿಷ್ಕೃತ ಸಂಪುಟಗಳು, ಬಿ.ಎಲ್. ರೈಸ್ ಸಂಪಾದಿತ ಶಿವಮೊಗ್ಗ ಜಿಲ್ಲೆಯ ಸಂಪುಟಗಳು, ಧಾರವಾಡ ವಿ.ವಿ.ಯ ಕರ್ನಾಟಕ ಇನ್ಸ್‌ಕ್ರಿಪ್ಷನ್ಸ್ ಸಂಪುಟಗಳು, ಕನ್ನಡ ವಿ.ವಿ. ಶಾಸನ ಸಂಪುಟಗಳು ಹಾಗೂ ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್ ಸಂಪುಟಗಳಲ್ಲಿರುವ ಕರ್ನಾಟಕಕ್ಕೆ ಸಂಬಂಧಿಸಿದ ಪ್ರಕಟಿತ ಶಾಸನಗಳಲ್ಲಿನ ಕುಶಲಕರ್ಮಿಗಳಿಗೆ ಸಂಬಂಧಿಸಿದ ಶಾಸನಗಳನ್ನು ಮಾತ್ರ ನೋಡಲಾಗಿದೆ.

ಅಧ್ಯಯನದ ಮಿತಿಯ ಕಾರಣದಿಂದ ಬೆಂಗಳೂರು, ಕೋಲಾರ, ಕೊಡಗು, ತುಮಕೂರು, ಬೀದರ್ ಮತ್ತು ಗುಲ್ಬರ್ಗ ಜಿಲ್ಲೆಗಳನ್ನು ಅಧ್ಯಯನದ ವ್ಯಾಪ್ತಿಯಿಂದ ಹೊರಗಿಡಲಾಗಿದೆ. ಹೀಗಿದ್ದು ಮೇಲ್ಕಾಣಿಸಿದ ಶಾಸನ ಸಂಪುಟಗಳಲ್ಲಿ ಈ ಜಿಲ್ಲೆಗಳಿಗೆ ಸಂಬಂಧಿಸಿದ ಶಾಸನಗಳ ಉಪಯೋಗವನ್ನು ಸಾಂದರ್ಭಿಕವಾಗಿ ಬಳಸಿಕೊಳ್ಳಲಾಗಿದೆ.

- ಶಾಸನಗಳಲ್ಲಿ ಕಂಡುಬರುವ ಉಲ್ಲೇಖಗಳು ವಿಷಯಕ್ಕೆ ಸಂಬಂಧಿಸಿ ಪುನರಾವರ್ತನೆಗೊಳ್ಳುತ್ತಿದ್ದು ಅವುಗಳನ್ನು ಆಯಾ ಅಧ್ಯಾಯಗಳಿಗೆ ಸಂಬಂಧಿಸಿದ ಭಾಗಗಳಲ್ಲಿ ಅವುಗಳ ಉಪಯೋಗವನ್ನು ಕಂಡುಕೊಳ್ಳಲಾಗಿದೆ.

- ಈ ಪ್ರಸ್ತುತ ಅಧ್ಯಯನದಲ್ಲಿ ಉಪಯೋಗಿಸಿದ ಪ್ರದೇಶದ ಹೆಸರುಗಳು, ವ್ಯಕ್ತಿಗಳ ಹೆಸರುಗಳು, ಕುಶಲಕರ್ಮದ ಹೆಸರುಗಳು, ಇತ್ಯಾದಿ ನಾಮಪದಗಳನ್ನು ಆಯಾ ಶಾಸನ ಸಂಪುಟದಲ್ಲಿ ಉಲ್ಲೇಖಿಸಿರುವಂತೆಯೇ ಸ್ವೀಕರಿಸಲಾಗಿದೆ ಮತ್ತು ಶಾಸನ ಸಂಪುಟಗಳನ್ನು ಶಾಸನಗಳ ಪ್ರದೇಶವಾರು ಹಂಚಿಕೆ ಹೇಗಿದೆಯೋ ಹಾಗೆಯೇ ಅದನ್ನು ಸ್ವೀಕರಿಸಲಾಗಿದೆ.

## ಪರಾಮರ್ಶನ ಗ್ರಂಥಗಳು

1. Singh Rajeshwar Prasad. 'Artisans in Manu' (Article). *Essays in Ancient Indian Economic History,* (ed.) Chattopadhyaya Brajadulal. Munshiram Manoharlal Publishers Pvt. Ltd., 1987, pp. 95-96.

2. Agrawala Vasudeva Sharma. *India as Described by Manu*, Prithvi Prakashan, Varanasi (India), 1970, pp. 37-38.

# ಅಧ್ಯಾಯ - 2

# ಕುಶಲಕರ್ಮದ ಪ್ರಕಾರಗಳು

---

2.1. ನೇಕಾರರು

2.2. ಬಡಗಿಗಳು

2.3. ಕಮ್ಮಾರರು

2.4. ಕುಂಬಾರರು

2.5. ಅಕ್ಕಸಾಲಿಗರು

2.6. ಕಂಚುಗಾರರು

2.7. ತೆಲ್ಲಿಗರು

2.8. ಶಿಲ್ಪಿಗಳು

2.9. ಮಾಲೆಗಾರರು

2.10. ಮೇದಾರರು

2.11. ಚರ್ಮಕಾರರು ಹಾಗೂ ಇತರೆ ವೃತ್ತಿಕಾರರು

---

ನಮ್ಮ ಅಧ್ಯಯನಕ್ಕೆ ತೆಗೆದುಕೊಂಡ ಕುಶಲಕರ್ಮದ ಪ್ರಕಾರಗಳು ಈ ಕೆಳಗಿನಂತಿವೆ.

ನೇಕಾರರು, ಬಡಗಿಗಳು, ಕಮ್ಮಾರರು, ಕುಂಬಾರರು, ಅಕ್ಕಸಾಲಿಗರು, ಕಂಚುಗಾರರು, ತೆಲ್ಲಿಗರು, ಶಿಲ್ಪಿಗಳು, ಮಾಲೆಗಾರರು, ಮೇದಾರರು, ಚರ್ಮಕಾರರು ಹಾಗೂ ಇತರೆ ವೃತ್ತಿಕಾರರು.

## 2.1. ನೇಕಾರರು

ಪ್ರಾಚೀನ ಕಾಲದಿಂದಲೂ ಬೆಳೆದುಬಂದ ಪ್ರಮುಖ ಕೈಗಾರಿಕೆ ನೇಕಾರಿಕೆ. ಮಧ್ಯಕಾಲೀನ ಕರ್ನಾಟಕದ ದಾನಶಾಸನಗಳಲ್ಲಿ ದೇವಾಲಯ ದಾನಗಳ ಸಂದರ್ಭದಲ್ಲಿ ಮಗ್ಗಗಳನ್ನು ದಾನ ಮಾಡುವ ಉಲ್ಲೇಖ ಕಂಡುಬರುತ್ತದೆ. ಇಂಥಹ ಮಗ್ಗಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದ ಜನರನ್ನು ಶಾಸನಗಳಲ್ಲಿ ಸಾಲಿಗ [1], ಜೇಡ [2], ದೂಸಿಗ [3], ಪಟ್ಟಗಾರ [4], ಪಟ್ಟೆಸಾಲಿಗರು[5], ದಿಂಕಸಾಲಿಗ[6], ಸಾಲಿಗರಯ್ವದಿಂಬರುಂ[7] ಎಂದೆಲ್ಲ ಸೂಚಿಸಲಾಗುತ್ತದೆ. ಹಾಗೂ ಕೆಲವು ಶಾಸನಗಳಲ್ಲಿ[8] ಈ ಕುಲಕ್ಕೆ ಸೇರಿದ ವ್ಯಕ್ತಿಗಳು ದಾನ ಕೊಡುವುದೋ ಇಲ್ಲ ದಾನದಲ್ಲಿ ಭಾಗಿಗಳಾಗುವುದೋ ಕಂಡುಬರುತ್ತದೆ.

ಕೈ ಮಗ್ಗದಿಂದ ಬಟ್ಟೆ ನೇಯುವ ಚಿತ್ರವನ್ನು ಜೇಡರ ದಾಸಿಮಯ್ಯನ ವಚನವೊಂದು ಸೊಗಸಾಗಿ ನೀಡಿದೆ.[9]

*ಉಂಕೆಯ ನಿಗುಚಿ ಸರಿಗೆಯ ಸಮಗೊಳಿಸಿ*
*ಸಮಗಾಲನಿಕ್ಕಿ ಅಣಿಯೇಳ ಮೆಟ್ಟದೆ*
*ಹಿಡಿದ ಲಾಳಿಯ ಮುಳ್ಳು ಕಂಡಿಕೆಯ ನುಂಗಿತ್ತು,*
*ಈ ಸೀರೆಯ ನೆಯ್ದವ ನಾನೊ ನೀನೋ? ರಾಮನಾಥ ॥*

ಈ ವಚನ ಮಗ್ಗದ ವಿವಿಧ ಭಾಗಗಳನ್ನು ಅದರ ಕಾರ್ಯವಿಧಾನದೊಂದಿಗೆ ಪರಿಚಯಿಸುತ್ತದೆ. ಶಾಸನಗಳು ಬಟ್ಟೆ ನೇಯುವ ಕಾಯಕದವರನ್ನು ಜೇಡ [10], ಸಾಲಿಗ [11] (< (ಸಂ) ಚೀರ > ಸೇಲ > ಸಾಲೆ) ಎಂದು ಕರೆದಿವೆ. ಇವರು ತಮ್ಮನ್ನು 'ದೇಡರದಾಸನ ಕುಲ' ಎಂದು ಬಣ್ಣಿಸಿಕೊಂಡ ಸಂದರ್ಭಗಳು ಇವೆ. ಉದಾ : ಕ್ರಿ.ಶ. 1196ರ ಬಿಜಾಪುರ ಶಾಸನದಲ್ಲಿ[12] 'ದೇಡರದಾಸ ಕುಲದೊಳು ನೋಡಿರೆ ಸೋಮಯ್ಯನೊಗೆದನಾತನ ಸತಿ' ಎಂದು ತಿಳಿಸುತ್ತದೆ. ಶರಣ

ಜೇಡರ ದಾಸಿಮಯ್ಯ ಈ ಕಾಲಕ್ಕಾಗಲೇ ಪ್ರಸಿದ್ಧಿ ಪಡೆದಿದ್ದರಿಂದ ಈ ವೃತ್ತಿಯವರು ತಮ್ಮನ್ನು ದೇಡರದಾಸ ಕುಲದವರೆಂದು ಕರೆದುಕೊಂಡು ಹೆಮ್ಮೆಪಟ್ಟಿರುವಂತಿದೆ. ಅಲ್ಲದೆ ಮಲ್ಲಿಗವಾಡ[13] ಶಾಸನದಲ್ಲಿ 'ಪಟ್ಟಗಾಱಕುಳ ಭೂಷಣ ಬರಗಿರಿಯ ಸೋಮಗೌಂಡನ ' ಎಂದು ಶಾಸನ ಮುಂದುವರಿಯುತ್ತದೆಯಾದರೆ ಶಾಸನ ಸಾಲು ಹಾಳಾಗಿದೆ.

ಹಾನಗಲ್‌ನ ಶಾಸನವೊಂದು[14] 'ಸಾಳವಾಘನ ಚಕ್ರವರ್ತ್ತಿ (ಯ) ... ಆ ಸಾಲಿಗಗಾವುಂಣ್ಡ ಮಾಬಲ್ಯೆ ... ಯುಮಿರ್ದ್ದು ಚೈತ್ರದಲುಂ...' ಎಂದು ಶಾಸನ ಮುಂದುವರೆಯುತ್ತದೆ. ಇಲ್ಲಿನ 'ಸಾಲಿಗಗಾವುಂಣ್ಡ' ಎಂಬ ಶಾಸನೋಲ್ಲೇಖ ಗಾವುಂಡ ಎಂದು ಸೂಚಿಸುವ ರೂಢಿ ಇದ್ದದ್ದನ್ನು ತಿಳಿಸುವ ಏಕೈಕ ಶಾಸನ ಇದಾಗಿದೆ. ಇನ್ನೂ ಅವರ ಹೆಸರುಗಳಲ್ಲೂ ಗೌಡ[15] ಎಂಬ ಪದ ಬಳಕೆಯಾಗಿದೆ.

ಮೊಗ್ಗದ ಕರಣಂಗಳು ಮೊಗ್ಗದಲಿ ಪಂನಾಯವನ್ನು ಕೇಣಿಯಾಗಿ ಪಡೆದು ದೇವರಿಗೆ ಬಿಟ್ಟ ಸಂಗತಿ ರೂಗಿ ಶಾಸನದಲ್ಲಿ ಉಕ್ತವಾಗಿದೆ.[16] ಮಗ್ಗದ ಮೇಲೆ ತೆರಿಗೆ ಹಾಕಲಾಗುತ್ತಿತ್ತು. ದೇಡಮಗ್ಗದ ಬಣ್ಣಿಗೆ ಸುಂಕವನ್ನು ದೇವಕಾರ್ಯಕ್ಕೆ ಬಿಟ್ಟ ಸಂಗತಿ ಒಂದು ಶಾಸನದಲ್ಲಿ ಬಂದಿದೆ.[17] ದೇವಾಲಯಗಳಿಗೆ ನಿವೇಶನ ಸಹಿತ ಮಗ್ಗ ಬಿಟ್ಟ ಉದಾಹರಣೆಗಳೂ ಇವೆ.[18]

ಈ ನೇಕಾರರು ಆಯಾ ಗ್ರಾಮಗಳಲ್ಲಿ ರಚಿಸಿಕೊಂಡ ಸಂಘದ ಹೆಸರು 'ಸಾಲೆ ಸಾಸಿರ್ವರು'.[19] ಈ ನೇಕಾರರಲ್ಲಿ ನೇಯ್ದ ಬಟ್ಟೆಗಳನ್ನು ಕೊಂಡು ಒಂದು ಕಡೆಯಿಂದ ಮತ್ತೊಂದು ಕಡೆಗೆ ಬಟ್ಟೆಗಳನ್ನು ಮಾರಾಟ ಮಾಡುತ್ತಿದ್ದ ನೇಕಾರ ಸೆಟ್ಟಿಗಳಿರುವುದು ನಮಗೆ ಲಕ್ಷ್ಮೇಶ್ವರ ಶಾಸನದಿಂದ[20] ತಿಳಿದುಬರುತ್ತದೆ.

ಅಣ್ಣೀಗೆರೆ ಶಾಸನವು[21] 'ನುಡಿದಂತೆ ಗಂಡರುಂ ದಾನವಿನೋದರುಂ ಶರಣಾಗತ ವಜ್ರಪಂಜರರುಂ ಸತ್ಯ ರಾಧೇಯರುಂ ಶೌಚ ಗಾಂಗೇಯರುಂ ಭಗವತೀಲಬ್ಧವರ ಪ್ರಸಾದರುಂ' ಎಂದು ಕೀರ್ತಿಸುವುದರ ಮೂಲಕ ಸಾಲೆಸಾಸಿರ್ವರ (ನೇಕಾರರ) ವೀರ, ದಾನ, ಸತ್ಯ ಶೌಚಗುಣಗಳನ್ನು ತಿಳಿಸುತ್ತದೆ.

ಅಮ್ಮಿನಬಾವಿ ಶಾಸನವು[22]

*ಅಜನೆನ್ತನ್ತೆ ಮತಪ್ರಯುಕ್ತರಿನನೆಂತಂ ತುಜ್ಜಳರ್ ಶಂಕರಾ*
*ತ್ರಜನೆಂತನ್ತಿರೆ ದಾನಿಗಳ್ ಧನದನೆಂತನ್ತರ್ಥ ಸಂಯುಕ್ತಕರಂ*
*ಗಜನೆನ್ತನ್ತೆ ಸುರೂಪಿಗಳ್ ಶಿವಪದಾಂಬೋಜಾತ ಷಟ್ಪದರೆಂದು*
*ಜನಂ ಬಣ್ಣಿಸುಗುಂ ಗುಣಾಗ್ರಣಿಗಳಂ ಶ್ರೀಸಾಲೆಸಾಸಿರ್ವರುಂ ॥*

ಎಂದು ಅಲಂಕಾರಿಕವಾಗಿ ಸ್ತುತಿಸುವ ಮೂಲಕ ಅವರ ಮತ, ದಾನಗುಣ, ರೂಪ, ಶಿವಭಕ್ತಿಗಳನ್ನು ಬಣ್ಣಿಸಿದೆ. ಇವರಲ್ಲಿ ದೇಹಾರದ ನಾಗಣ್ಣ, ಈತನ ಮಗ ಆಯ್ತವರ್ಮ, ಬಿಬ್ಬಣ್ಣ ಈತನ ಮಗ (?) ಕಾಳಿಮಯ್ಯ, ಬೀರಣ್ಣ, ಮಾಚಿಯಣ್ಣರು ಧರ್ಮಬುದ್ಧಿಯುಳ್ಳವರಾಗಿದ್ದರೆಂಬಂಶವನ್ನು ಮೇಲಿನ ಅಮ್ಮಿನಬಾವಿ ಶಾಸನ ಹೇಳುತ್ತದೆ.

ನೇಕಾರರು ಹತ್ತಿಯ ವಸ್ತ್ರಗಳನ್ನಲ್ಲದೆ ರೇಷ್ಮೆಯ ವಸ್ತ್ರಗಳನ್ನೂ ನೇಯುತ್ತಿದ್ದರು.[23] ಚೀನಾಗಳ ಬಿಳಿಯ ಪಟ್ಟವಸ್ತ್ರಗಳನ್ನೂ, ಜೊಂಗ, ದೇವಾಂಗ ಮುಂತಾದ ಬಣ್ಣಬಣ್ಣದ ವಸ್ತ್ರಗಳನ್ನು ಪಂಪನು[24] ಉಲ್ಲೇಖಿಸುತ್ತಾನೆ. ನೇತ್ರ, ಪಟ್ಟು, ದುಕೂಲ, ಚೀನ ಎಂಬ ಬಗೆ ಬಗೆಯ ರೇಷ್ಮೆಯ ದಿವ್ಯವಾದ ಬಟ್ಟೆಗಳಿದ್ದ ಬಗ್ಗೆ ವಡ್ಡಾರಾಧನೆಯಿಂದ ತಿಳಿಯಬಹುದು.[25] ನೇಯ್ಗೆಯ ಮಗ್ಗಗಳ ಮೇಲೆ ತೆರಿಗೆಗಳನ್ನು ಹಾಕುತ್ತಿದ್ದರು[26] ('ಮಗ್ಗದೆಜು'), ಚಿಪ್ಪಿಗರು ಬಟ್ಟೆಗಳನ್ನು ಬಹುಶಃ ಕೈಸೂಚಿಯಿಂದ ಹೊಲಿಯುತ್ತಿದ್ದರು. ಗದಾಯುದ್ಧದಲ್ಲಿ ಸೂಜಿಯನ್ನೂ, ಸೂಜಿಯನ್ನು ಹಿಂಬಾಲಿಸಿ ಹೋಗುವ ದಾರವನ್ನು ಹೆಸರಿಸಿದೆ.[27] ಚಿಪ್ಪಿಗರನ್ನು 'ವಸ್ತ್ರ ಖಂಡಿತ ಶ್ರೀಂಗಾರ ಚಿತ್ರೋದ್ಭವರ್' ಎಂದು ಒಂದು ಶಾಸನವು[28] ಹೊಗಳುತ್ತದೆ.

ಒಟ್ಟಿನಲ್ಲಿ ಉತ್ಪಾದಕ-ವಿನಿಮಯ ವರ್ತಕರಾದ ಸಾಲಿಗರು, ಪಟ್ಟಸಾಲಿಗರು ಬಟ್ಟೆಯ ಉತ್ಪಾದನೆ ಮತ್ತು ಮಾರಾಟಗಳೆರಡರಲ್ಲಿಯೂ ಕಾರ್ಯಮಾಡುವಲ್ಲಿ 'ಸಾಸಿರ್ವರ ಸಂಘ' ಬೆಂಬಲವಾಗಿ ನಿಂತಿತು.

## 2.2. ಬಡಗಿ : ಪದ ವ್ಯುತ್ಪತ್ತಿ

ಬಡಗಿ - ಬಡಿಗಿ - ಬಡಿಗಾರ - ಬಡಿಗೇರ - ಬಡಿಗ್ಯಾರ ಎಂಬ ಅಚ್ಚಕನ್ನಡದ ಮಾತು, ಸಂಸ್ಕೃತದ ವರ್ಧ (=ಕತ್ತರಿಸು, ಕಡಿ), ವರ್ಧಕಿ → ವದ್ದಕಿ → ಬಡ್ಡಕಿ(ಗಿ) ಮುಂತಾಗಿ ಬೆಳೆದು ಬಂದಿರಬಹುದೆಂಬುದನ್ನು ಭಾಷಾಶಾಸ್ತ್ರದ ದೃಷ್ಟಿಯಿಂದ ಸ್ಥಾಪಿಸಲೆತ್ನಿಸಿದರೂ ಜನಬಳಕೆಯ ಹಾಗೂ ಚಾರಿತ್ರಿಕ ಪ್ರಯೋಗಗಳನ್ನು ಗಮನಿಸಿದರೆ ಬಡಗಿ - ಬಡಿಗಿ [ಬಡಿ + ಕಿ(ಗಿ)] ಅಚ್ಚಕನ್ನಡವೆಂದು ತೋರುತ್ತದೆ. ಅದು ಸಂಸ್ಕೃತಕ್ಕೆ ಭಾಷಾಂತರವಾಗುವಾಗ ವರ್ಧಕಿ ಆಗಿರಬಹುದು ಅಥವಾ ಈ ಎರಡೂ ಸ್ವತಂತ್ರವಾಗಿಯೂ ರೂಪಿತವಾಗಿರುವ ಸಾಧ್ಯತೆಗಳಿವೆ : ಅರ್ಥ ಒಂದೇ ಆದುದರಿಂದ ಈ ಎರಡೂ ಶಬ್ದಗಳ ಸಮೀಕರಣ ಪ್ರಯತ್ನ ನಡೆದಿರಬೇಕು.

ಪ್ರಾಚೀನ ಕಾಲದಲ್ಲಿಯೂ ಈ ವೃತ್ತಿ ಇದ್ದುದಾಗಿ ಮನುಸ್ಮೃತಿ, ವಿಷ್ಣುಪುರಾಣ ಹಾಗೂ ಕೌಟಿಲ್ಯನ ಅರ್ಥಶಾಸ್ತ್ರದಿಂದ ತಿಳಿದುಬರುವುದಾಗಿ ಡಾ. ಎ.ಎಸ್. ಅಲ್ಟೇಕರ್ ಅವರು ಅಭಿಪ್ರಾಯಪಡುತ್ತಾರೆ.[29]

ಕ್ರಿ.ಶ. 1186ರ ಗದಗ (ತಾ)ನ ಹೊಸೂರಿನ ಶಾಸನವೊಂದು[30] 'ಬಡಗಿ ಕಲೋಜ ಮೋರಕೇಸ್ವರ ದೇವರ ತೋಟಕೆಯಿ ಮನೆಯ ಗೆಯಿದೆ ಕೂಲಿಯೆನಿತುಂಟನಿತುಮಂ ದೇವರ ನೈವೇದ್ಯಕೊಂಮಾನಕ್ಕಿಯ ನಡವಂತಾಗಿ ತಂನ ಪುತ್ರ ಪೌತ್ರರಾದಿಯಾಗಿಯಲ್ಲಿಯಾಚಾರ್ಯ್ಯರಗಸ್ತ (ಸ್ತ್ಯ) ಮುನೀಸ್ವರ ದೇವರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಕೊಟ್ಟ ಯಿಲ್ಲಿ ಬಡಗಿತನಕ್ಕಾರು ನಿಂನ್ದವರು ಹಿಟ್ಟುಕಾಱ ಬಡಗಿ ಕಲ್ಲೋಜ ಬಿಟ್ಟ ಧರ್ಮ್ಮಮಂ ಎಳು ನೂರ್ವ್ವರುಂ ಪ್ರಜೆ ಮಹಾಬಳಗಾ(ವು*)ಂಡನುಂ ಪ್ರತಿಪಾಲಿಸುವರು॥'

ಹಾಗೆಯೇ ಹೊಯ್ಸಳ ಬಲ್ಲಾಳರಾಯನ ಕಾಲದ ಕ್ರಿ.ಶ. 1003ರ ಕೊಲ್ಲಾಪುರದ ತಾಮ್ರ ಶಾಸನದಲ್ಲಿ[31] '... ಆ ಊರಿಂಗೆ ಹಿಟ್ಟಿನ ತಲವಾರಿ ಮಾರಯನಾಯಕ ಆತಂಗೆ ಮತ್ತರು ೬... ಹಿಟ್ಟಕಾರ ಬಡಗಿ ಹಿಲೇಜಗೆ ಮತ್ತರು ೪, ಹಿಟ್ಟಿನ ಕಂಮ್ಮಾರ ದೇವೋಜಂಗೆ ಮತ್ತರು ೪, ಹಿಟ್ಟಿನ ಅಕ್ಕಸಾಲೆ ಪಾರಿಸೋಜಂತೆ ಮತ್ತರು ೪..' ಎಂದು ಮುಂತಾಗಿ ಭೂಮಿದಾನ ಪಡೆದವರ ವಿವರಗಳಿವೆ.

ಗತಕಾಲದ ಬಡಗಿಗಳನ್ನು ಅರೆಕುಶಲ ಬಡಗಿ ಮತ್ತು ಕುಶಲ ಬಡಗಿಗಳು ಎಂದು ಎಸ್. ಗುರುರಾಜಾಚಾರ್[32] ಅವರು ಎರಡು ಭಾಗ ಮಾಡುತ್ತಾರೆ. ದಿನನಿತ್ಯದ ಸಾಮಾನ್ಯ ಜನರು ಉಪಯೋಗಿಸುವ ಪೀಠೋಪಕರಣಗಳು, ನೇಗಿಲು, ಎತ್ತಿನಗಾಡಿ ಮೊದಲಾದ ವ್ಯವಸಾಯೋಪಯೋಗಿ ವಸ್ತುಗಳು, ಸಾಮಾನ್ಯ ಮನೆ ಮುಟ್ಟುಗಳನ್ನು ಮಾಡುವವರನ್ನು ಮೊದಲನೆಯ ಗುಂಪಿಗೂ ; ಅರಸುಗಳ ಹಾಗೂ ಅಧಿಕಾರಿ ವರ್ಗದವರ ಅಭಿರುಚಿಗನುಗುಣವಾಗಿ ಸೂಕ್ಷ್ಮವಾದ ಕೆತ್ತನೆ ಕೆಲಸದ ಪರಿಕರಗಳನ್ನು, ವಿಶೇಷವಾದ ಮರದ ದೇವಸ್ಥಾನಗಳನ್ನು ಹಾಗೂ ರಥಗಳನ್ನು ಮಾಡುವವರನ್ನು ಎರಡನೆ ಗುಂಪಿಗೆ ಸೇರಿಸಬಹುದು.

ಮೊದಲನೆಯ ಗುಂಪಿಗೆ ಸೇರಿದ ಅರೆಕುಶಲಿಗಳಾದ ಬಡಗಿಗಳು ಗ್ರಾಮಗಳಲ್ಲಿ ವಾಸವಾಗಿದ್ದು, ಗ್ರಾಮಸ್ಥರಿಗೆ ಬೇಕಾಗುತ್ತಿದ್ದ ಗೃಹೋಪಯೋಗಿ ಹಾಗೂ ವ್ಯವಸಾಯೋಪಯೋಗಿ ವಸ್ತುಗಳನ್ನು ಪೂರೈಸುತ್ತಿದ್ದರು. ಇಂಥ ಬಡಗಿಗಳಿಗೆ ಗ್ರಾಮಸ್ಥರು ವರ್ಷಕ್ಕೆ ಇಷ್ಟು ಎಂದು ಗೊತ್ತಾದ ಅಳತೆಯಲ್ಲಿ ಸಗಟಾಗಿ ಕಾಳನ್ನು ಕೊಡುತ್ತಿದ್ದರು. ಆಯಗಾರರಲ್ಲಿ

ಒಬ್ಬನೆಂದು ಪರಿಗಣಿಸಿ ವಾರ್ಷಿಕ ಆಯವನ್ನು ಕೊಡುತ್ತಿದ್ದರು. ಅಥವಾ ಸ್ವಲ್ಪ ಭಾಗ ಜಮೀನನ್ನು ಅನುಭವಿಸಲು ಬಿಟ್ಟುಕೊಡುತ್ತಿದ್ದರು. ಹೀಗೆ ಹಳ್ಳಿಗೆ ಸಲ್ಲಿಸಿದ ಸೇವೆಗಾಗಿ ಬಡಗಿಗಳು ಆಯವನ್ನೋ ಭೂಮಿಯನ್ನೋ ಪಡೆದ ಹಲವಾರು ಉದಾಹರಣೆಗಳು ಶಾಸನಗಳಲ್ಲಿ ಸಿಗುತ್ತವೆ. ಕ್ರಿ.ಶ. 1159ರ ಶಿಕಾರಿಪುರ ಶಾಸನ[33]ವೊಂದು ದಂಡಾಧಿಪನೊಬ್ಬನು ವಿರೂಪಾಕ್ಷಪುರ ಎಂಬ ನಗರವನ್ನು ಕಟ್ಟಿ ಅದನ್ನು ಬ್ರಾಹ್ಮಣರಿಗೆ ದಾನ ಕೊಡುವ ಸಂದರ್ಭದಲ್ಲಿ ಒಬ್ಬೊಬ್ಬ ಬ್ರಾಹ್ಮಣನಿಗೂ ಒಂದೊಂದರಂತೆ ಅನೇಕ ಮರದ ಮಂಚಗಳನ್ನು ಬಡಗಿಗಳಿಂದ ಮಾಡಿಸಿ ದಾನವಾಗಿ ಕೊಡುವ ವಿಷಯವನ್ನು ತಿಳಿಸುತ್ತದೆ. ಕ್ರಿ.ಶ. 1225ರ ಒಂದು ಶಾಸನವು ಬಡಗಿ ಚಂಪೋಜ[34] ಎನ್ನುವವನಿಗೆ ಅವನ ಸೇವೆಯನ್ನು ಪರಿಗಣಿಸಿ ಭೂಮಿಯನ್ನು ದಾನ ಮಾಡಿದ ವಿಷಯವನ್ನು ಪ್ರಸ್ತಾಪಿಸುತ್ತದೆ.

ಉತ್ತಮ ಮಟ್ಟದ ಕುಶಲಿಗಳಾದ ಬಡಗಿಗಳು ಉತ್ತಮದರ್ಜೆಯ ಸದಭಿರುಚಿಯ ಕಲಾಕೃತಿಗಳನ್ನು ರಚಿಸುತ್ತಿದ್ದರು. ಇಂಥ ಕೆಲವರು ದಾರು ಕುಶಲಕರ್ಮಿಗಳಾದ ಬಡಗಿಗಳನ್ನು ಶ್ರೀಮಂತರು ಮನ್ನಿಸಿ ಗೌರವಿಸುತ್ತಿದ್ದರು. ಇಂಥ ಕೆಲವಾರು ಬಡಗಿಗಳ ಉಲ್ಲೇಖಗಳು ಶಾಸನಗಳಲ್ಲಿ ಉಂಟು. ಬಯಿರು[35] ಎನ್ನುವವನು ಸಿಮ್ಮೋಜನ ಮಗ ಇವನ ಕಾಲ ೧೫೦೦. ಚಿಕ್ಕಬುಳ್ಳಾಪುರ ತಾಲ್ಲೂಕು ನಂದಿಗ್ರಾಮದ ನಂದಿಬೆಟ್ಟದ ಯೋಗನಂದೀಶ್ವರ ಗುಡಿಯ ದಕ್ಷಿಣದ ಕಡೆಯ ಬಾಗಿಲ ಕದವನ್ನು ತಾನು ಮಾಡಿರುವುದಾಗಿ ಹೇಳಿಕೊಂಡಿದ್ದಾನೆ.

ಎತ್ತಿನ ಬಂಡಿಗಳು ಅಂದಿನ ಸಾರಿಗೆ ಸಂಪರ್ಕಗಳಾಗಿದ್ದವು. ಬಡಗಿಗಳು ಇವುಗಳನ್ನು ತಯಾರು ಮಾಡುತ್ತಿದ್ದರು. ಇಂಥ ಬಂಡಿಗಳ ಮೇಲೆ ಕಂದಾಯವನ್ನು ವಿಧಿಸಿದ ಉಲ್ಲೇಖಗಳು ಶಾಸನಗಳಲ್ಲಿ ಸಿಗುತ್ತವೆಯಾದರೂ ಬಂಡಿಗಳನ್ನು ತಯಾರಿಸುತ್ತಿದ್ದ ಬಡಗಿಗಳ ಉಲ್ಲೇಖ ಶಾಸನಗಳಲ್ಲಿದ್ದುದು ನಮಗೆ ತಿಳಿಯದು.

ಕಾಲವನ್ನು ಹೇಳಿಲ್ಲದ ಶಿರಾ ತಾಲ್ಲೂಕಿನ ಶಾಸನವು[36] 'ಸಾಧಾರಣ ಸಂಶ್ರಾವಣ ಶು : ೧೪ ಗುರುವಾರ ತಾಳಗುಂದದ ಬಡಗಿ ಚಿನ್ನದಗಿರಿಶ ..... ಡಿ ಬಾಗಿಲು' ಎಂಬುದಾಗಿ ಹೇಳುತ್ತದೆ. ಈ ಶಾಸನವು ದೊಡ್ಡ ಚಿಕ್ಕನಹಳ್ಳಿ ಎಂಬ ಗ್ರಾಮದ ಊರಿನ ಹೊರಬಾಗಿಲಿನ ಮೇಲೆಯೇ ಇರುವುದರಿಂದ ಆ ಒಂದು ದಿಕ್ಕಿನ ಬಾಗಿಲನ್ನು ಇದೇ ಚಿನ್ನದಗಿರಿ ಎಂಬ ಬಡಗಿಯು ಮಾಡಿದ್ದಾನೆ ಎಂದು ತಿಳಿಯಬಹುದು. ಮತ್ತೊಂದು ಶಾಸನ[37] ನಾಗಮಂಗಲ ತಾ. ದೇವರಹಳ್ಳಿಯಲ್ಲಿರುವ ತಪಸೀರಾಯ ದೇವಸ್ಥಾನದ ಮಹಾದ್ವಾರದ ಮರದ ಬಾಗಿಲನ್ನು ಅದೇ ಗ್ರಾಮಕ್ಕೆ ಸೇರಿದ

'ಅಕ್ಕಸಾಲೆ ಚಿಕ್ಕಾಚಾರಿ ಮಾಡಿದ ಶೇವಾರ್ಥ' ಎಂದು ಉಲ್ಲೇಖಿಸುವುದರಿಂದ ಇವನು ದಾನ ಮಾಡಿದವನಾಗಿರಬಹುದಾದರೂ ಕೂಡ ಶಾಸನದಲ್ಲಿ 'ಮಾಡಿದ' ಎಂದಿರುವುದರಿಂದ ಬಾಗಿಲನ್ನು ತಯಾರು ಮಾಡಿದ ತನ್ನ ಶ್ರಮವನ್ನೇ ಸೇವೆಯೆಂದು ಹೇಳಿಕೊಂಡಿದ್ದಾನೆ ಎಂದು ತಿಳಿಯಲು ಅವಕಾಶವಿದೆ.

ಕುಶಲಿಗಳಾದ ಬಡಗಿಗಳು ಸುಂದರವಾದ ಮರದ ರಥಗಳನ್ನು ರಚನೆ ಮಾಡುತ್ತಿದ್ದರು. ಇಂಥ ಕೆಲವಾರು ರಥಗಳು ಇವೆಯಾದರೂ ಅವುಗಳನ್ನು ಕಟ್ಟಿದ ಬಡಗಿಗಳ ಹೆಸರು ಉಪಲಬ್ಧವಿಲ್ಲ.

ಕ್ರಿ.ಶ. 1544 ರ ಒಂದು ಶಾಸನದ [38] ಪ್ರಕಾರ ಒಬ್ಬ ಜಿನಭಕ್ತನು ದಾರುಮಯ ಬಸದಿಯನ್ನು (ಮರದ) ಕಟ್ಟಿಸುತ್ತಾನೆ. ಅದನ್ನು ನೋಡಿದ ಆಚಾರ್ಯರು ಅವನನ್ನು ಕರೆದು ಶಿಲಾಮಯ ಬಸದಿಯನ್ನು ಕಟ್ಟಿಸಬೇಕೆಂದು ಬುದ್ಧಿವಾದ ಹೇಳುತ್ತಾರೆ. ಈ ಒಂದು ಶಾಸನೋಲ್ಲೇಖದ ಆಧಾರದ ಮೇಲೆ ಕಲ್ಲಿನ ದೇವಸ್ಥಾನವನ್ನು ಅರಸರು, ಅಧಿಕಾರಿಗಳು, ಮೊದಲಾದ ಹಣವಂತರು ಕಟ್ಟಿಸುತ್ತಿದ್ದರು. ಅದು ಒಂದು ಪ್ರತಿಷ್ಠೆಯ ಪ್ರತೀಕವಾಗಿತ್ತು ಹಾಗೂ ಕಲ್ಲಿನ ದೇವಸ್ಥಾನಗಳ ಸಂಖ್ಯೆಯು ಕಡಿಮೆ ಇತ್ತು. ಆದರೆ ಮಧ್ಯಮ ವರ್ಗದವರು ಹಾಗೂ ಸಾಮಾನ್ಯ ಜನತೆಯು ಮರದ ದೇವಸ್ಥಾನಗಳನ್ನು ಕಟ್ಟಿಸುತ್ತಿದ್ದರು ಹಾಗೂ ಇಂಥ ಮರದ ದೇವಾಲಯಗಳು ಕಲ್ಲಿನ ದೇವಾಲಯಗಳಿಗಿಂತ ಹೆಚ್ಚು ಸಂಖ್ಯೆಯಲ್ಲಿ ಇರುತ್ತಿದ್ದವು ಎಂದು ತಿಳಿಯಬಹುದಾಗಿದೆ. ಆದ್ದರಿಂದ ಆಗಿನ ಕಾಲದಲ್ಲಿ ಸಹಜವಾಗೇ ಕುಶಲಿಗಳಾದ ಬಡಗಿಗಳಿಗೆ ಹೆಚ್ಚಿನ ಬೇಡಿಕೆ ಇತ್ತು.

ಕುಶಲಿಗಳೂ, ವಾಸ್ತು ವಿಜ್ಞಾನ ತಜ್ಞರೂ ಆದ ಬಡಗಿಗಳು ಅರಸರ ಅರಮನೆಗಳನ್ನೂ ಅಧಿಕಾರಿಗಳ ಸೌಧಗಳನ್ನೂ, ಮರದ ದೇವಸ್ಥಾನಗಳನ್ನೂ ಕಟ್ಟುತ್ತಿದ್ದರು. ನಮ್ಮ ಗತಕಾಲದ ಬಡಗಿಗಳ ಕೃತಿಗಳು ಮರದ ರಚನೆಗಳಾಗಿದ್ದರಿಂದ ಅವು ಇಂದು ನಾಶವಾಗಿವೆ. ಇಂಥ ಪ್ರಾಚೀನ ಮರದ ರಚನೆಯ ಬಗ್ಗೆ ಆಗಲಿ, ಬಡಗಿಗಳ ವ್ಯಕ್ತಿ ವಿಚಾರದ ಬಗ್ಗೆ ಆಗಲಿ, ಶಿಲಾಶಾಸನಗಳು ಹೆಚ್ಚಿನ ಮಾಹಿತಿಯನ್ನು ಕೊಡುವುದಿಲ್ಲ. ಹೀಗೆ ಕೃತಿ ಮತ್ತು ಕರ್ತೃವಿನ ಉಲ್ಲೇಖ ಎರಡೂ ಇಂದು ಅನುಪಲಬ್ಧವಾಗಿರುವುದರಿಂದ ಪ್ರಾಚೀನ ಬಡಗಿಗಳ ಜೀವನವನ್ನು ಪುನಃರಚನೆ ಮಾಡುವುದು ತುಂಬ ದುಸ್ತರವಾಗಿದೆ. ಆದರೂ ಸಿಕ್ಕಷ್ಟು ಮಾಹಿತಿಯನ್ನು ತಿಳಿಯುವ ಪ್ರಯತ್ನ ಇಲ್ಲಿದೆ.

ಮೂರು ನಾಲ್ಕು ಶಿಲಾಶಾಸನಗಳು ಮೂವರು ಶಿಲ್ಪಿಗಳ ಹೆಸರು ಹೇಳಿ, ಅವರನ್ನು ಬಡಗಿ ಎಂದು ಕರೆದು, ಅವರು ದೇವಸ್ಥಾನಗಳನ್ನು ಕಟ್ಟಿರುವುದಾಗಿ ಹೇಳುತ್ತವೆ. ಈ ದೇವಸ್ಥಾನಗಳು ಕಲ್ಲಿನವೋ, ಮರದವೋ ಸ್ಪಷ್ಟಪಡಿಸುವುದಿಲ್ಲ. ಆದರೆ ಶಿಲ್ಪಿಯನ್ನು ಬಡಗಿ ಎಂದು ಕರೆದಿರುವುದರಿಂದ ಅವರು ಕಟ್ಟಿದ ದೇವಸ್ಥಾನಗಳನ್ನು ಸದ್ಯಕ್ಕೆ ಮರದ ದೇವಸ್ಥಾನಗಳು ಎಂದೇ ಪರಿಗಣಿಸಬಹುದು.

ಕ್ರಿ.ಶ. 1431ರ ಮಾಲೂರು ತಾಲ್ಲೂಕು ತೇಕಲ್ಲು ಗ್ರಾಮದ ವರದರಾಜಸ್ವಾಮಿ ದೇವಸ್ಥಾನದಲ್ಲಿ, ಅದೇ ಗ್ರಾಮದ ವಾಸಿಯಾಗಿದ್ದ ದೇವೋಜ[39] ಎಂಬ ಬಡಗಿಯು ಗುಡಿಗೆ ಸಂಬಂಧಿಸಿದ ಮರಗೆಲಸವನ್ನು ಮಾಡಿಕೊಡುತ್ತಾನೆ. ಇವನ ತಂದೆ ಬೇವೋಜ ಈ ಕೆಲಸಕ್ಕಾಗಿ ಈತನಿಗೆ ಗದ್ದೆಯನ್ನೂ ಹೊಲವನ್ನೂ ಕೊಡುತ್ತಾನೆ.

ಜಗಳೂರು ತಾಲ್ಲೂಕು ನಿಬಗೂರಿನ ಶಾಸನದಂತೆ [40] ಬಡಗಿ ಲಿಂಗೋಜನು ಕ್ರಿ.ಶ. 1448ರಲ್ಲಿ ಆಂಜನೇಯ ಗುಡಿಯನ್ನು ಕಟ್ಟುತ್ತಾನೆ. ಇದಕ್ಕಾಗಿ ಗೌಡನು ಇವನಿಗೆ ಅರವತ್ತು ಒಕ್ಕಲು ಮಾನ್ಯವನ್ನು ಕೊಡುತ್ತಾನೆ. ಇದು ಮರದ ದೇವಸ್ಥಾನವಿರಬೇಕು. ಗೌರಯ್ಯ[41] ಎನ್ನುವವನು ದೇವಸ್ಥಾನವನ್ನು ಕಟ್ಟಿದ ಮತ್ತೊಬ್ಬ ಬಡಗಿ. ಕಾಲ 1511 ಇವನ ಊರು ಸೊಂಡೇಕೆರೆ, ಇವನ ತಂದೆ ಪರವೋಜ ಎಂದು ಚಿತ್ರದುರ್ಗ ತಾಲ್ಲೂಕು ಜಂಪಳನಾಯ್ಕನ ಕೋಟೆಯ ಹತ್ತಿರದ ಹನುಮಂತದೇವರ ಗುಡಿ ಇವನ ಕೃತಿ.

ಕ್ರಿ.ಶ. 1393ರ ಶಿವಡಿಯೋಜ[42] ಎಂಬ ಬಡಗಿಯದು ಅಪರೂಪದ ಉಲ್ಲೇಖ. ಏಕೆಂದರೆ ಇವನು 'ಮಾಳಿಗೆಯ' ಮನೆಯನ್ನು ರಚನೆ ಮಾಡುತ್ತಾನೆ. ಶಾಸನವು ಇದನ್ನು ಅರಮನೆ ಎಂದು ಕರೆಯದಿದ್ದರೂ, ಇದನ್ನು ಕಟ್ಟಿಸಿದವನು ತನ್ನನ್ನು 'ಕಳನಿಯಾರ ಪ್ರಭು' ಎಂದು ಕರೆದುಕೊಂಡಿರುವುದರಿಂದ, ರಾಜಾಧಿಕಾರಿಯಾದ ಇವನು ಕಟ್ಟಿಸಿದ್ದು ದೊಡ್ಡ ಸೌಧವೋ ಅರಮನೆಯೋ ಆಗಿದ್ದಿರಬೇಕು. ಈತನು ಅನೇಕ ಜನ ಬಡಗಿಗಳ ಮೇಲೆ ಮೇಲುಸ್ತುವಾರಿಯನ್ನು ಮಾಡಿದ ಪ್ರಧಾನ ಬಡಗಿಯಾಗಿದ್ದಿರಬೇಕು.

ಡಾ. ಎಸ್. ಗುರುರಾಜಾಚಾರ್[43] ಅವರು ಕರ್ನಾಟಕವು (ಬಾದಾಮಿ ಚಾಳುಕ್ಯರನ್ನು) ಹಿಂದಿನ ಕಾಲದಿಂದಲೂ ಸಮುದ್ರಯಾನದಲ್ಲಿ ತೊಡಗಿತ್ತೆಂದೂ, ಎರಡನೆಯ ಪುಲಿಕೇಶಿಯು ನೂರು ಹಡಗುಗಳನ್ನು ತಾನು ಮಾಡಿದ ಯುದ್ಧದಲ್ಲಿ ಉಪಯೋಗಿಸಿದನೆಂದೂ, ಯಾದವ ಮಹಾರಾಜನೊಬ್ಬನು ಕೂಡ ತನ್ನದೇ ಆದ

ನೌಕಾಪಡೆಯನ್ನು ಹೊಂದಿದ್ದನು ಎಂದು ಹೇಳುತ್ತಾ ಆ ಕಾರಣದಿಂದ ಕರ್ನಾಟಕದಲ್ಲಿ ಹಡಗು ಕಟ್ಟುವ ಕೈಗಾರಿಕೆಯು ಕನ್ನಡಿಗರಿಗೆ ಚೆನ್ನಾಗಿಯೇ ತಿಳಿದಿತ್ತೆಂದು ಹೇಳುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ತುಳುವ ಜನರು ಈ ಕಲೆಯನ್ನು ಬಲ್ಲವರಾಗಿದ್ದರೆಂದು ಹೇಳುತ್ತಾರೆ. ಮುಂದುವರಿದು ಹಡಗು ಕಟ್ಟುವಲ್ಲಿ ಮರವನ್ನು ಉಪಯೋಗಿಸುತ್ತಿದ್ದುದಾಗಿ ಉಲ್ಲೇಖಿಸುತ್ತಾರೆ. ಅಂತೆಯೇ ನಾವು ಇಲ್ಲಿ ಕೂಡ ನಿಷ್ಣಾತರಾದ ಬಡಗಿಗಳು ದುಡಿದಿರಬೇಕೆಂದು ಊಹಿಸಬಹುದು.

ಆದರೆ ಹಡಗು ಕಟ್ಟಿದ ಯಾವ ಬಡಗಿಯೂ ಶಾಸನದಲ್ಲಿ ಉಪಲಬ್ಧವಾಗಿಲ್ಲ. ದಕ್ಷಿಣ ಕನ್ನಡ ಜಿಲ್ಲೆಯ "ಬೊಬ್ಬರ್ಯ" ಎಂಬ ಪಾಡ್ದನದಲ್ಲಿ ಹಡಗನ್ನು ಕಟ್ಟಲು ಮರವನ್ನು ಕಡಿದು ಕೆಲಸ ಮಾಡಲು ಮಲೆನಾಡಿನ ಕಡೆಯಿಂದ ಬಡಗಿ ಆಚಾರಿಗಳನ್ನು ಕರೆಯಿಸಿದರು ಎಂಬ ವಿಷಯವಿದೆ.[44] ಆದ್ದರಿಂದ ಕನ್ನಡದ ಬಡಗಿಗಳು ಹಡಗುಗಳನ್ನು ಕಟ್ಟುವಲ್ಲಿ ದುಡಿಯುತ್ತಿದ್ದರು ಎಂಬ ಅಂಶವು ತಿಳಿದುಬರುತ್ತದೆ.

ಬಡಗಿಗಳು ನಿರ್ವಹಿಸುತ್ತಿದ್ದ ತುಂಬ ಮುಖ್ಯವಾದ ಹೊಸ ವಿಚಾರವೇನೆಂದರೆ ಅವರು ಯುದ್ಧದಲ್ಲಿ ಉಪಯೋಗಿಸುತ್ತಿದ್ದ ಕೆಲವು ಮರದ ಆಯುಧಗಳನ್ನು ತಯಾರು ಮಾಡುತ್ತಿದ್ದರು ಎಂಬುದು. ಯಾವ ಶಾಸನವೂ ಈ ಬಗ್ಗೆ ಪ್ರಸ್ತಾಪಿಸಿಲ್ಲದಿರುವಾಗ ಕುಮಾರ ರಾಮನ ಚರಿತೆಯು[45] ಈ ವಿಷಯವನ್ನು ಪ್ರಸ್ತಾಪಿಸಿದೆ. 'ಬಲಿವ ಪೆಟಲಬೆಣೆ', 'ಡೆಂಕಣಿ ಗೈ', 'ಪಂದಿದತೆ ', 'ತಿರುಗಣಿ', 'ಭೀಮಗದೆ' ಮೊದಲಾದ ಮರದ ಆಯುಧಗಳನ್ನು ಬಡಗಿಗಳು ಕೆತ್ತಿದ್ದರು ಎಂದು ಹೇಳುತ್ತದೆ. 'ಕೆತ್ತುವಾ ಬಡಗಿಗಳಿಂದಾ ದುರ್ಗ ಸಲೆ ಮೆರೆದುದು' - ಎಂಬ ಉಕ್ತಿಯು ಬಹುಶಃ ಯುದ್ಧದ ಆಯುಧಗಳನ್ನು ಶತ್ರುಗಳಿಂದ ರಕ್ಷಿತವಾದ ರಹಸ್ಯವಾದ ದುರ್ಗದ ಒಳಗೆ ಇದ್ದುಕೊಂಡು ನಿರ್ಮಾಣ ಮಾಡುತ್ತಿದ್ದರು ಎಂಬ ಅಂಶವನ್ನು ಹೇಳಿರುವಂತಿದೆ.

## 2.3. ಕಮ್ಮಾರರು

ಕಮ್ಮಾರರು, ಅಕ್ಕಸಾಲಿಗಳು, ಬಡಗಿಗಳು, ಕಂಚುಗಾರರೂ ಇದೇ ವಿಶ್ವಕರ್ಮ ಕುಲಕ್ಕೆ ಸೇರಿದವರು. ಇವರಲ್ಲಿ ಅಕ್ಕಸಾಲಿಗಳು ಚಿನ್ನದ ಕೆಲಸವನ್ನು ಮಾಡುವವರು, ಅಪರೂಪವಾಗಿ ಶಾಸನಗಳನ್ನು ಕೆತ್ತುತ್ತಿದ್ದುದೂ ಉಂಟು. ಕಬ್ಬಿಣದ ಕೆಲಸಗಳನ್ನು ಮಾಡುತ್ತಿದ್ದವರು ಕಮ್ಮಾರರು (ಕಬ್ಬೊನ್, ಕರ್ವೊನ್ ಎಂದರೆ ಕಬ್ಬಿಣ ಕಮ್ಮಟ ಎಂದರೆ ಕುಲುಮೆ, ಕರ್ಮ + ಕಾರ ಕಮ್ಮಾರ ಆಗಿದೆ. ಈಗ ಬಳಕೆಯಲ್ಲಿ ಕಮ್ಮಾರ ಮತ್ತು ಕಂಬಾರ ಎರಡೂ ರೂಪಗಳು ಬಳಕೆಯಲ್ಲಿವೆ).

ಮರದ ಕೆಲಸಗಳನ್ನು ಮಾಡುವವನು ಬಡಗಿ (ಸಂ. ವರ್ಧಕಿ) ದೇವಸ್ಥಾನಕ್ಕೆ ಸಂಬಂಧಿಸಿದ ಮರಗೆಲಸಗಳನ್ನು ಮಾಡಲು, ಮುರಿದು ಹೋದ ಸಾಮಾನುಗಳನ್ನು ಸರಿಪಡಿಸಲು ಇವರಿಗೆ ಶಾಶ್ವತವಾದ ದತ್ತಿಗಳನ್ನು ಬಿಟ್ಟುಕೊಡುತ್ತಿದ್ದರು. ಇವರೂ ಅನೇಕ ಶಾಸನಗಳನ್ನು ಕೆತ್ತಿದ್ದಾರೆ. ಇದನ್ನು ನೋಡಿದರೆ ಶಿಲ್ಪಿ, ಕಮ್ಮಾರ, ಅಕ್ಕಸಾಲೆ ಮತ್ತು ಬಡಗಿಗಳು ಪರಸ್ಪರರ ವೃತ್ತಿಗಳನ್ನವಲಂಬಿಸಲು ಅವಕಾಶವಿದ್ದಂತೆ ಊಹಿಸಬಹುದು.

ಇವರನ್ನು ಶಾಸನಗಳಲ್ಲಿ ಕಮ್ಮಾಱ[46], ಕಮ್ಮಱ[47], ಕಂಮಾಕಾರ[48], ಕಮ್ಮಾಱರೊಕ್ಕಲು[49] ಎಂದೆಲ್ಲ ಸೂಚಿಸಲಾಗುತ್ತದೆ.

ಕಮ್ಮಾರರು ವ್ಯವಸಾಯಕ್ಕೆ, ಯುದ್ಧಕ್ಕೆ, ನಿತ್ಯ ಜೀವನಕ್ಕೆ ಅನಿವಾರ್ಯವಾದ ಕಬ್ಬಿಣದ ಉಪಕರಣಗಳನ್ನು ತಯಾರಿಸಿಕೊಡುವ ಕಸುಬುಗಾರರು. ಹಳ್ಳಿಯ ಹನ್ನೆರಡು ಆಯಗಾರರಲ್ಲಿ ಒಬ್ಬರು. ಮಾನವನ ಮೂಲಭೂತ ಅವಶ್ಯಕತೆಗಳನ್ನು ಈಡೇರಿಸಬಲ್ಲ ವ್ಯವಸಾಯದ ದೃಷ್ಟಿಯಿಂದ ಈ ಕಮ್ಮಾರ ವೃತ್ತಿ ಮಿಕ್ಕ ವೃತ್ತಿಗಳಲ್ಲೆಲ್ಲ ಅತ್ಯಂತ ಉಪಯುಕ್ತವಾದುದು. ಆದ್ದರಿಂದ ಆಯವನ್ನು ಕೊಡುವ ಒಕ್ಕಲಿಗನ ದೃಷ್ಟಿಯಲ್ಲಿ ಕಮ್ಮಾರ ಅತ್ಯವಶ್ಯ ಆಯಗಾರನಾಗಿದ್ದಾನೆ. ಕರ್ಮಯೋಗಿಯಾದ ಒಕ್ಕಲಿಗನಿಗೆ ತನ್ನ ವ್ಯವಸಾಯದ ಅನುಕೂಲಕ್ಕಾಗಿ ದುಡಿಯುವ ಕಂಬಾರನದೇ ನಿಜವಾದ ಕರ್ಮ. ಅಂತೆಯೇ ಒಕ್ಕಲಿಗ ಕರ್ಮಯೋಗಿ ಎನಿಸಿಕೊಂಡರೆ, ಈತ ಕರ್ಮಕಾರ ಎನಿಸಿಕೊಂಡಿದ್ದಾನೆ. ಕರ್ಮ ಎಂಬ ಶಬ್ದದಿಂದಲೇ ಕಂಬಾರ ಎಂಬ ಶಬ್ದದ ವುತ್ಪತ್ತಿಯಾದಂತಿದೆ. ಕಮ್ಮಾರ ಎನ್ನುವುದು ಕರ್ಮಕಾರ ಎಂಬ ಶಬ್ಧದ ತದ್ಭವ. ಕಮ + ಕಾರ = ಕಮ್ಮಾರ ಎಂದು ಈ ಶಬ್ದದ ನಿಷ್ಪತ್ತಿಯನ್ನು ಹೇಳಬಹುದಾಗಿದೆ. ಒಟ್ಟಿನಲ್ಲಿ ಕರ್ಮಕಾರ ಎಂಬ ಶಬ್ದದಿಂದ ಕಮ್ಮಾರ ಅಥವಾ ಕಂಬಾರ ಎಂಬ ಶಬ್ದ ಹುಟ್ಟಿಕೊಂಡಿದೆ. ಇಂದು ಕಮ್ಮಾರ ಹಾಗೂ ಕಂಬಾರ ಎರಡೂ ಶಬ್ದಗಳು ಸಮಾನ ಬಳಕೆಯಲ್ಲಿವೆ. ಕುಂಬಾರ ಎಂಬ ಶಬ್ದದ ಪ್ರಭಾವದಿಂದ ಕಮ್ಮಾರ ಎನ್ನುವುದು ಕಂಬಾರ ಎಂದು ಮಾರ್ಪಾಟು ಹೊಂದಿದಂತಿದೆ. ಮರಾಠಿಯ ಪ್ರಭಾವದಿಂದಾಗಿ ಬೆಳಗಾವ್ ಹಾಗೂ ಕಾರವಾರ ಜಿಲ್ಲೆಗಳಲ್ಲಿ ಲೋಹಾರ ಎಂದೂ ಕರೆಯಲಾಗುತ್ತದೆ. ಕಮ್ಮಾರ, ಕಂಮಾರ, ಕರ್ಮಹರ, ಕಂಮರ, ಕಂಮಱಿಗ, ಕಮ್ಮಱ, ಕಂಬಱ, ಕನ್ಮಾರ, ಕಮ್ಬಾರ, ಕಂಬಾರ ಎಂಬ ಹೆಸರುಗಳು ಪ್ರಾಚೀನ ಹಾಗೂ ಅರ್ವಾಚೀನ ಕನ್ನಡ ಶಾಸನಗಳಲ್ಲಿ ಕಾವ್ಯ, ವ್ಯಾಕರಣಗಳಲ್ಲಿ ಕಾಣಿಸಿಕೊಂಡಿದೆ. ಈ ವೃತ್ತಿಯ ಹೆಣ್ಣುಮಕ್ಕಳಿಗೆ ಕಮ್ಮಾಱಗಾತಿ, ಕಮ್ಮಾರಗಿತ್ತಿ ಕಮ್ಮಱಿತಿ, ಕಮ್ಮಾಱತಿ, ಕಂಬಾರತಿ ಎಂದು ಮೊದಲಾಗಿ ಕರೆಯಲಾಗಿದೆ.

ಕರ್ನಾಟಕದಲ್ಲಿ ಕಂಬಾರರು ಅತ್ಯಂತ ಪ್ರಾಚೀನ ಕಾಲದಿಂದಲೂ ಜನಾಂಗದ ಮನ್ನಣೆಯನ್ನು ಪಡೆದು ಗಮನಾರ್ಹವಾದ ಬಾಳನ್ನು ಬಾಳುತ್ತ ಬಂದಿದ್ದಾರೆ. ಕರ್ನಾಟಕದ ಹಲವಾರು ಶಾಸನಗಳಲ್ಲಿ ಕಮ್ಮಾರ ಹೆಸರಿನ ವ್ಯಕ್ತಿ ಊರು, ಹಳ್ಳಿ, ಸ್ಥಳಗಳ ಉಲ್ಲೇಖ, ವೃತ್ತಿ ಹಾಗೂ ಅವರ ಸಾಮಾಜಿಕ ಜೀವನವನ್ನು ಕುರಿತ ಉಲ್ಲೇಖಗಳು ದೊರೆಯುತ್ತಿದ್ದು, ಅವೆಲ್ಲ ಅವರ ಬದುಕಿನ ಸ್ವರೂಪವನ್ನು, ಅವರ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮಟ್ಟವನ್ನು ಪ್ರಭಾವಕಾರಿಯಾಗಿ ಕಲ್ಪನೆಗೆ ತಂದುಕೊಡಬಲ್ಲವುಗಳಾಗಿವೆ.

ಕಮ್ಮಾರಿಕೋದ್ಯಮವು ಸಾಂಸ್ಥಿಕವಾಗಿ, ಸುಸಂಘಟಿತವಾಗಿ ಬೆಳೆದಿರಲಿಕ್ಕೂ ಸಾಧ್ಯ. ಏಕೆಂದರೆ ಆಗಿನ ಕಾಲದಲ್ಲಿ ರಾಜ ಮಹಾರಾಜರು ಸದಾ ಯುದ್ಧ ಮಾಡುವುದರಲ್ಲಿ ತೊಡಗಿರುತ್ತಿದ್ದುದು ನಮಗೆಲ್ಲ ತಿಳಿದ ವಿಷಯವೇ ಆಗಿದೆ. ಯುದ್ಧಗಳಲ್ಲಿ ಸಹಜವಾಗಿ ಅನೇಕ ವಿಧವಾಗಿ ಆಯುಧಗಳು, ಕವಚಗಳು ಬಳಕೆಯಾಗುತ್ತಿದ್ದವು.

ಈ ಆಯುಧಗಳ ತಯಾರಿಕೆಯು ಗೊತ್ತಾದ ಲೆಕ್ಕಾಚಾರದಲ್ಲಿ ನಡೆಯುತ್ತಿದ್ದು, ನಿಷ್ಣಾತರಾದ, ಯುದ್ಧವಿದ್ಯೆಯನ್ನು ಬಲ್ಲ ಕಮ್ಮಾರರಿಂದಲೇ ರಚನೆಯಾಗುತ್ತಿದ್ದವೆಂದು ಊಹಿಸಬಹುದು. ಬಾಗಳಿಯ ಶಾಸನವೊಂದು ಹೀಗೆ ಉಲ್ಲೇಖಿಸುತ್ತದೆ.[50] 'ಬಾಗುಳಿಯ ಬ್ಯೆ .. ನ. ಕಮ್ಮಾಱ ಕೊಂಗುಣಿ ಆಚಾರಿಯ ಮಗಂ ಕೊನ್ನಾಚರಿ ನಾಡಾಳಿವನೊಡನೆ ಕಾಳಗಕ್ಕೆ ಕಾದಿ ಸ್ವರ್ಗಸ್ತನಾದಂ॥' ಎಂದು ಉಲ್ಲೇಖಿಸುವುದರಿಂದ ಕಮ್ಮಾರರು ಕೂಡ ಯುದ್ಧ ವಿದ್ಯೆಯನ್ನು ಬಲ್ಲವರಾಗಿದ್ದರೆಂದು ತಿಳಿಯಬಹುದು.

ಕ್ರಿ.ಶ. 11ನೇ ಶತಮಾನದ ಮೈಸೂರಿನ ಶಾಸನ[51]ವು ಬಲ್ಲಸಿಯಾ ಎಂಬುವನು ಕತ್ತಿಗಳನ್ನು ತಯಾರಿಸುತ್ತಿದ್ದುದಾಗಿಯೂ ಅವನು ಖಡ್ಗಾದಿ ಶಸ್ತ್ರಗಳನ್ನು ಬಲ್ಲವನಾಗಿದ್ದನೆಂದೂ ತಿಳಿಸುತ್ತದೆ.

ಕ್ರಿ.ಶ. 1138ರ ಧಾರವಾಡ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನ ಮತ್ತೂರು ಶಾಸನವು[52] 'ಸ್ವಸ್ತಿ ಶ್ರೀಮತು ಚಾಳುಕ್ಯ ಭೂಲೋಕ ವರ್ಷದ ೬೩ಸಿಯ ಕಾಳಯುಕ್ತ ಸಂವತ್ಸರದ ಪುಷ್ಯ ಸು ೫ ಆದಿವಾರದಂದು ಮುತ್ತೂರ ಕಮ್ಮನವಳ್ಳಿಯ ಜಕ್ಕಿಸೆಟ್ಟಿ ಊರನಱಿದು ಪೆಂಡಿರುಡೆಯುರ್ಚ್ಚಲು ಕಮ್ಮಾಱ ಮಾಚ ತಳುತಿಱದು ಸುರಲೋಕ ಪ್ರಾಪ್ತನಾದ ॥' ಅಂದರೆ ಕಮ್ಮನವಳ್ಳಿಯ ಜಕ್ಕಿಸೆಟ್ಟಿಯು ಊರಿನ ಮೇಲೆ ದಾಳಿ ಮಾಡಿ ಹೆಂಗಸರ ಮಾನ ಹಾನಿ ಮಾಡುತ್ತಿದ್ದ ಸಮಯದಲ್ಲಿ ಕಮ್ಮಾರ ಮಾಚನು ಕೆಲವರನ್ನು ಕೊಂದು ತಾನು ಸತ್ತ ವಿಷಯವನ್ನು ತಿಳಿಸುತ್ತದೆ. ಮಾಚನು ಮರಣ ಹೊಂದಲು ಅವನ ಮನೆತನದ ನಿರ್ವಹಣೆಗಾಗಿ ಆ ಊರಿನ ಗೌಡರು ಭೂಮಿ ದಾನ ಬಿಟ್ಟಿರುವುದನ್ನು ಸಹ ಶಾಸನ ಮುಂದುವರಿಯುತ್ತ ತಿಳಿಸುತ್ತದೆ.

ಸೊರಬ ತಾಲ್ಲೂಕಿನ ಬಿಳೇಗೋಡು[53] ಎನಲ್ಲಿರುವ ಒಂದು ವೀರಗಲ್ಲಿನ ಪಾಠದಿಂದ ಬೇಟೆಗೆ ಹೋದಲ್ಲಿ ಕಮ್ಮಾರ ಕಸಬನು ತಳ್ತಿಱಿದು ಹಲರಂ ಕೊಂದು ಸುರಲೋಕಕ್ಕೆ ಹೋದನೆಂದು ಹೇಳಿದೆ. ಕ್ರಿ.ಶ. 1179ರ ಮೂಡಗೆರೆಯ ಶಾಸನ[54] ಬಮ್ಮಣ ಎಂಬುವವನು ಆನೆಯ ಮಸ್ತಕವನಿರಿದು ಸತ್ತವಿಷಯವನ್ನು ತಿಳಿಸುತ್ತದೆ.

ಸೊರಬ ತಾಲ್ಲೂಕಿನ ಕುಣಿತೆಪ್ಪದ ಕ್ರಿ.ಶ. 1249ರ ಶಾಸನವು[55] 'ಸ್ವಸ್ತಿಶ್ರೀ ಯಾದವನಾರಾಯಣಂ ಭುಜ ಬಳ ಪ್ರತಾಪ ಚಕ್ರವರ್ತಿ ಶ್ರೀ ಕಂನಹಸದೇವ ವರ್ಷದ ೩ ನೆಯ ಸವಮ್ಯಸವತ್ಸರದ ಜೇಷ್ಠ ಬ ೧೩ ಬುಧವಾರದಂದು ..... ತ್ರಿಭುವನ ಮಲ್ಲಹಾಯಗ ಬೇಟೆಕಾಱ ಹರಿಯವ ಸೆಟ್ಟಿಯ ಬೆಸವಗ ಕುಳಿಯ ತೆಪ್ಪವ ಕಂಮಾಱ ಮಲೋಜ ನಮಗ ಭೊಮೋಜನು ಬೇಂಟೆಗೆ ಹೋದಲಿ ಹಂದಿ ಮೇಲವಾಯಿದಡೆ ಸುರಿಗಿಱಿದುಮೆಱಿದು ಸುರಲೋಕ ಪ್ರಾಪ್ತನಾದ' ಅಂದರೆ ಕಂಮಾಱ ಮಲೋಜನ ಮಗ ಭೊಮೋಜನೆಂಬುವವನು ಬೇಟೆಗೆ ಹೋದಾಗ ಅವನು ಕಾಡುಹಂದಿಯ ಜೊತೆಯಲ್ಲಿ ಹೋರಾಡುವಾಗ ಹಂದಿ ಹಾಯ್ದು ಮರಣ ಹೊಂದಿರುವುದನ್ನು ಉಲ್ಲೇಖಿಸುತ್ತದೆ.

ಕ್ರಿ.ಶ. 1165ರ ಮೂಡಗೆರೆಯ ಒಂದು ಶಾಸನ[56] ಕಮ್ಮಾರಗೋಡನೆಂಬವನು ಅಮೃತೇಶ್ವರ ದೇವಾಲಯವನ್ನು ಕಟ್ಟಿಸಿ ಕೆಲವು ಭೂಮಿಗಳನ್ನು ದತ್ತಿ ಬಿಟ್ಟುದಾಗಿ ಹೇಳುತ್ತದೆ. ಕ್ರಿ.ಶ. 1215ರ ಶಾಸನದ[57] ಆಧಾರದ ಮೇಲಿಂದ 'ಕೊಡತಿವಣ' ಎಂಬ ತೆರಿಗೆಯನ್ನು ಬಹುಶಃ ಕಮ್ಮಾರ ಮತ್ತು ಬಡಗಿಗಳ ಮೇಲೆ ಹಾಕುತ್ತಿದ್ದರೆಂದು ಊಹಿಸಲಾಗಿದೆ.

ಹೀಗೆ ಕರ್ನಾಟಕದ ಕಂಬಾರರು ಧರ್ಮಪರರು, ಧೈರ್ಯಶಾಲಿಗಳು, ಶೂರರು, ಸಾಹಸಿಗಳು, ಸತ್ಯಜಿಗಳೂ ಆಗಿ ಉದಾತ್ತವಾದ, ನೆಮ್ಮದಿಯ ಸಾರ್ಥಕ ಬಾಳನ್ನು ಬಾಳಿದ ವಿಷಯ ವೇದ್ಯವಾಗುತ್ತದೆ.

ಮಾನವನ ನಾಗರಿಕತೆಯ ಇತಿಹಾಸದಲ್ಲಿ ಈ ಕಮ್ಮಾರ ವೃತ್ತಿ ಕಬ್ಬಿಣಯುಗದಷ್ಟು ಪ್ರಾಚೀನವಾಗಿದ್ದು ಕ್ರಿ.ಶ.ಪೂ. 12ನೇಯ ಶತಮಾನದಲ್ಲಿ ಸಮುದ್ರ ಜನರ ದಾಳಿಯಿಂದ ಹಿಟ್ಟೈಟ್ ಸಾಮ್ರಾಜ್ಯ ಪತನವಾದ ಮೇಲೆ ಕಬ್ಬಿಣದ ಲೋಹಗಾರಿಕೆ ಪಶ್ಚಿಮ ಏಷ್ಯಾದ ಅನೇಕ ಭಾಗಗಳಲ್ಲಿ ಹರಡಿ, ಅದರ ಉಪಕರಣಗಳನ್ನು ವ್ಯವಸಾಯ ಕೈಗಾರಿಕೆಗಳಲ್ಲಿ ಬಳಸುವಂತಾಯಿತು. ಇದೆ ಸುಮಾರಿಗೆ ಇಜಿಪ್ತ ಮತ್ತು ಇರಾಣ ಮಾರ್ಗವಾಗಿ ಕಬ್ಬಿಣದ ಉಪಯೋಗ ಭಾರತಕ್ಕೆ ಬಂದಿರಬಹುದೆಂದು ಪುರಾತತ್ವತಜ್ಞರ ಅಭಿಪ್ರಾಯ.[58] ಉತ್ತರ ವೇದ ಕಾಲದಲ್ಲಿ (ಕ್ರಿ.ಪೂ. 1000-600)

ಕಬ್ಬಿಣದ ಉಪಯೋಗ ಭಾರತದಲ್ಲಿ ಆರಂಭವಾಯಿತೆಂದು ಹೇಳುತ್ತಾರೆ. ವೇದಗಳಲ್ಲಿ ಕಮ್ಮಾರ, ನಾವಿದ ಮೊದಲಾದ ವೃತ್ತಿಗಳ ಹೆಸರುಗಳಿರುವುದಾಗಿಯೂ ತಿಳಿದುಬರುತ್ತದೆ. ಎಲ್ಲಕ್ಕೂ ಮಹತ್ವದ್ದೆಂದರೆ ಧಾರವಾಡ ಜಿಲ್ಲೆಯ ಹಳ್ಳೂರು ಮುಂತಾದ ನೆಲೆಗಳಲ್ಲಿ ಕ್ರಿ.ಪೂ. 11ನೆಯ ಶತಮಾನದಲ್ಲಿಯೇ ಕಬ್ಬಿಣದ ಬಳಕೆ ಬಂದಿತೆಂದು ಪುರಾತತ್ವಜ್ಞರ ಹೇಳಿಕೆಯಾಗಿದೆ. ಹೀಗೆ ಕನ್ನಡ ನಾಡು ಅಸ್ತಿತ್ವಕ್ಕೆ ಬರುವಷ್ಟರಲ್ಲಿಯೇ ವ್ಯವಸಾಯ ಹಾಗೂ ಕಬ್ಬಿಣದ ಉಪಯೋಗ ಹಾಗೂ ಆಯಗಾರಿಕೆ ಬೆಳೆದುಬಂದದ್ದರಿಂದ, ಕರ್ನಾಟಕದಲ್ಲಿ ಕಂಬಾರಿಕೆಯ ಕಸುಬು ಆರಂಭದಿಂದಲೂ ಇದ್ದು ಅದು ಆಯವನ್ನು ಅವಲಂಬಿಸಿತ್ತೆಂದು ಸಹಜವಾಗಿಯೇ ವೇದ್ಯವಾಗುತ್ತದೆ. ಒಟ್ಟಿನಲ್ಲಿ ಕಮ್ಮಾರಿಕೆಯು ಅಂದಿನಿಂದ ಇಂದಿನವರೆಗೂ ಆಯವನ್ನು ಅವಲಂಬಿಸಿಕೊಂಡು ಬಂದ ವೃತ್ತಿಯಾಗಿದೆ.

## 2.4. ಕುಂಬಾರ

ಮಾನವನ ಅತ್ಯಂತ ಪುರಾತನವಾದ ಕಲೆಗಳಲ್ಲಿ ಕುಂಭಕಲೆ ಕೂಡ ಒಂದು. ಗ್ರಾಮೀಣ ಪರಂಪರೆಯಲ್ಲಿ ಬೆಳೆದು ಬಂದ ಹಲವು ಹನ್ನೊಂದು ಕುಲಕಸುಬುಗಳಲ್ಲಿ ಕುಂಬಾರಿಕೆ ಪ್ರಮುಖವಾದದ್ದು. ಗ್ರಾಮೀಣ ಮೂಲದ ಕುಂಬಾರಿಕೆಯನ್ನು ಜನಪದ ಮೂಲದ ವೃತ್ತಿ ಎಂದು ಕರೆಯಲಾಗುತ್ತದೆ. ಲಲಿತೇತರ ಕಲೆಗಳಲ್ಲಿ ಕುಂಭ ಕಲೆಯನ್ನು ಗುರುತಿಸಲಾಗಿದೆ. ಬಹು ಪ್ರಾಚೀನದಿಂದಲೂ ಮಾನವನ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಹಾಗೂ ಲೌಕಿಕ ಬದುಕಿಗೆ ನೆರವಾಗುತ್ತಲೇ ಬಂದ ಕುಂಭ ಕಲೆ ಮೃತ್ ಶಿಲ್ಪವಾಗಿಯೂ ಇತಿಹಾಸದುದ್ದಕ್ಕೂ ವಿಜೃಂಭಿಸಿದೆ. **"Shilpa denotes both a sculpture in stone and work in clay"** ಎನ್ನುವ ಮಾತು ಕುಂಭಕಲೆಗಿರುವ ಮಹತ್ವವನ್ನು ಸೂಚಿಸುತ್ತದೆ.

ಕುಂಬಾರ ಎನ್ನುವ ಶಬ್ದಕ್ಕೆ ಕುಲಾಲ, ಚಕ್ರಿ, ದಂಡಧರ, ಕುಂಭಕಾರ ಮುಂತಾದ ಅರ್ಥಗಳಿವೆ. ಕುಂಭ ಎಂದರೆ ಸಂಸ್ಕೃತದಲ್ಲಿ ನೀರಿನ ಗಡಿಗೆ ಎಂದರ್ಥ. ಅಂದರೆ ಕುಂಬಾರರು ಜಲಸಂಸ್ಕೃತಿಯ ಜನಾಂಗ ಎಂದು ಅರ್ಥೈಸಬಹುದು. ಜಲ ಎಂದರೆ ಪವಿತ್ರ ಗಂಗಾ ಮಾತೆ ಎನ್ನುವ ನಂಬಿಕೆ ಇದೆ. ಕುಂಬಾರರು ಮಾತೃ ಪ್ರಧಾನ ಸಂಸ್ಕೃತಿಯವರು. ಇನ್ನೊಂದು ರೀತಿಯಲ್ಲಿ ಕುಂಬಾರರು ಅಗ್ನಿ ಸಂಸ್ಕೃತಿಗೆ ಹತ್ತಿರದವರೆಂದು ಹೇಳಬಹುದು. "ಮಾಡಿದ ಬದುಕಿಗೆ ಬೆಂಕಿ ಕೊಡುವ ಜನ" ಎಂದು ಕುಂಬಾರರ ಬಗೆಗೆ ಗಾದೆ ಇದೆ. ಹಸಿ ಮಣ್ಣಿನ ಮಡಕೆಗಳನ್ನು ಆವಿಗೆಯಲ್ಲಿಟ್ಟು ಸುಡುವುದರಿಂದ ಸಹಜವಾಗಿಯೇ ಆ ಮಾತು ಬಂದಿರಬಹುದು. ಹೀಗೆ ಕುಂಬಾರರು ಜಲ ಮತ್ತು ಅಗ್ನಿ ಸಂಸ್ಕೃತಿಯ ಸಮನ್ವಯ

ಜನಾಂಗವೆಂದು ಹೇಳುವುದು ಸೂಕ್ತವಾದೀತು. ಇನ್ನೂ ವಿಸ್ತರಿಸಿ ಹೇಳುವುದಾದರೆ ಮಣ್ಣು, ನೀರು, ಬೆಂಕಿ ಈ ಮೂರರ ಒಡನಾಡದೊಡನೆ ಕುಂಬಾರ ಜನಾಂಗ ಬೆಳೆದು ಬಂದಿದೆ.

ಮಣ್ಣಿನಿಂದ ಮಡಕೆ ಮಾಡುವ ಚಿತ್ರವನ್ನು ಬಸವಣ್ಣನವರ ವಚನವೊಂದು ತುಂಬ ಸೊಗಸಾಗಿ ನೀಡಿದೆ.[59]

*ನಿನ್ನಾಳಿ ಕುಂಬಾರನ ಕೆಲಸದೋಪಾದಿ ;*
*ಉದಕದ ಶೈತ್ಯವನೆ ಕೊಟ್ಟು,*
*ನೂಲೆಳೆಯಲ್ಲಿ ಗೋಣ ಕೊಯ್ದು,*
*ವಾಯುವಿನ ಶೈತ್ಯದಲ್ಲಿ ಆರಿಸಿ,*
*ಅಗ್ನಿಮುಖದಲ್ಲಿ ಬೇರೆ ಭಾಂಡವೆಂದೆನಿಸಿದಂತೆ*
*ಕೂಡಲಸಂಗಮದೇವಾ ||"*

ಈ ವಚನವು ಕುಂಬಾರನು ಕುಂಭ ತಯಾರಿಸುವ ವಿವಿಧ ಹಂತಗಳನ್ನು ತಿಳಿಯಪಡಿಸುತ್ತದೆ.

ಕುಂಬಾರ ಸಂಸ್ಕೃತದ 'ಕುಂಭಕಾರ ' ಎನ್ನುವುದರ ತದ್ಭವ. ಕುಲಾಲ ಎನ್ನುವ ಸಂಸ್ಕೃತ ಪದ ಮಧ್ಯಕಾಲೀನ ಗ್ರಂಥಗಳಲ್ಲಿ ಹೆಚ್ಚು ಬಳಕೆಯಲ್ಲಿದೆ. ಬರುಬರುತ್ತಾ ಕುಂಭಕಾರ ಎನ್ನುವುದು ನಿಂತು ಕುಂಬಾರ, ಕುಮ್ಮಾರ, ಕುಮ್ಮರ, ಕುಂವರಿ, ಗುಮ್ಮರಿ, ಕುಂಭಾರೋ ಎನ್ನುವ ಪದಗಳು ಬಳಕೆಗೆ ಬಂದವು. ತಮಿಳಿನಲ್ಲಿ ಕುಂಬಾರರಿಗೆ ಕುಶವನರು ಎಂದು ಹೇಳುತ್ತಾರೆ. ಕುಂಭಕ್ಕೆ ಮರಾಠಿಯಲ್ಲಿ ಭಾಂಡ ಎನ್ನುವರು. ಇದರಿಂದ ಭಾಂಡಾರೋ ಭಾಂಡಿಯೋ ಎನ್ನುವ ಹೆಸರುಗಳು ಬಳಕೆಯಲ್ಲಿವೆ. ಉತ್ತರ ಭಾರತದಲ್ಲಿ ಕುಂಬಾರರಿಗೆ, ಪ್ರಜಾಪತಿ ಎನ್ನುವ ಹೆಸರು ಬಳಕೆಯಲ್ಲಿದೆ. ಬಂಗಾಳದಲ್ಲಿ ಕುಂಬಾರರಿಗೆ, 'ರುದ್ರಪಾಲ್' ಎಂದು, ಉತ್ತರ ಪ್ರದೇಶದಲ್ಲಿ 'ಕುಮಾರಾಸ್' ಎಂದು ಕರೆಯುವರು. ಕೇರಳದಲ್ಲಿ ಕುಂಬಾರರಿಗೆ, ಕುಶವನ್, ಕುಲಾಲ, ಕುಲಾಲನಾಯರ್, ಆಂದುರುನಾಯರ್, ಕುಂಬಾರನ್, ಓಡನ್, ವೇಲಾರ್ ಎಂಬ ಎಂಟು ಹೆಸರುಗಳಿವೆ ಎಂದು ಬಸವರಾಜ ಕುಂಚೂರು[60]ರವರು ಕುಂಬಾರರ ವಿವಿಧ ಹೆಸರುಗಳನ್ನು ಉಲ್ಲೇಖಿಸುತ್ತಾರೆ.

ಬೇಟೆಗಾರಿಕೆ, ಗೆಡ್ಡೆ ಗೆಣಸುಗಳ ಸಂಗ್ರಹಣೆಗಳ ನಿರಂತರ ಅಲೆಮಾರಿತನ ಕಡಿಮೆಯಾಗಿ ಗೋಧಿ ಮತ್ತು ಬಾರ್ಲಿಗಳನ್ನು ಆದಿಮಾನವ ಬೆಳೆದ ಕಾಲ ಕ್ರಿ.ಪೂ.ಸು. ೧೦,೦೦೦ ಮತ್ತು ೮,೦೦೦ ಎಂದು 'ದಿ ಡ್ವಾನ್ ಆಫ್ ಮ್ಯಾನ್' ಕೃತಿಯ ಜೊಸೆಫ್ ವೂಲ್ಫ್ ಅವರ ಅಭಿಪ್ರಾಯ.[61] ಈ ಕಾಲದ ಆದಿಮ ಗುಂಪುಗಳನ್ನೇ ಪ್ರಪಂಚದ ಪ್ರಥಮ ಕೃಷಿಕರೆಂದು ಗುರುತಿಸಲಾಗಿದೆ. ಕೃಷಿ ಸಾಧನ, ಸಲಕರಣೆಗಳನ್ನು ಹುಟ್ಟಿಸಿಕೊಂಡು ತಮಗೆ ಅನುಕೂಲವಾದ ಭೂ ಪ್ರದೇಶದ

ಭಾಗಗಳಲ್ಲಿ ನೆಲೆನಿಂತ ಕಾಲದಿಂದ ಗುಡಿಸಲು, ಹಟ್ಟಿ, ಕೆರೆ ಕಟ್ಟೆಗಳು ರೂಪುಗೊಂಡವು. ಇದರ ಜೊತೆಗೆ ಆದಿಮ ಗುಂಪುಗಳ ಬದುಕಿನಲ್ಲಿ ಪಾತ್ರೆ ಪಡಗ, ಮಡಿಕೆ ಕುಡಿಕೆಗಳು ತಲೆದೋರಿದವು.

ಪೂರ್ವಶಿಲಾಯುಗ, ಶಿಲಾಯುಗ, ನವಶಿಲಾಯುಗ ನಿಕ್ಷೇಪ, ಪಳೆಯುಳಿಕೆಗಳನ್ನು ಪರಿವೀಕ್ಷಿಸಿದ ಪ್ರಾಚ್ಯವಸ್ತು ಸಂಶೋಧಕರು ಮಣ್ಣಿನ ಸುಟ್ಟ ಮಡಕೆ ತಯಾರಿಸುವ ವಿಧಾನ ಸು. ಕ್ರಿ.ಪೂ. 7000. ಅಷ್ಟು ಕಾಲಕ್ಕೆ ರೂಪುಗೊಂಡಿತೆಂದು ಹೇಳುತ್ತಾರೆ.[62] ದಕ್ಷಿಣ ಇರಾನದ ಜಾಗ್ರೋಸ್ ಬೆಟ್ಟಗಳ ಪ್ರದೇಶದಲ್ಲಿ ಇಂಥ ಸುಟ್ಟ ಮಡಕೆಗಳ ಖಚಿತ ಕುರುಹನ್ನು ಕಂಡುಹಿಡಿಯಲಾಗಿದೆ.

ಕುಂಬಾರಿಕೆ ವಿಶೇಷತಃ ಕುಶಲಕಲಾ ವೃತ್ತಿ ಇರಾನ್ ಮುಂತಾದ ಪ್ರದೇಶಗಳಿಂದ ಭಾರತದ ವಿವಿಧ ಪ್ರದೇಶಗಳಿಗೆ ಹರಡಿತೆಂದು ಎಚ್.ಡಿ. ಸಂಕಾಲಿಯಾ ಊಹಿಸುತ್ತಾರೆ.[63] ಇಂಡಸ್ ನಾಗರಿಕತೆಯ ಅಧ್ಯಯನ ನಡೆಸಿದ ಈ ವಿದ್ವಾಂಸರು ಕುಂಬಾರಿಕೆ ಭಾರತದ ಪ್ರಾಚೀನ ಕಲೆಯಾಗಿತ್ತೆನ್ನುವುದನ್ನು ಅಲ್ಲಗಳೆಯುವುದಿಲ್ಲ. ಆದರೆ ಕುಂಬಾರಿಕೆಯು ಒಂದು ವರ್ಣಮಯ ಕುಶಲ ಕಲೆಯಾಗಿ ರೂಪುಗೊಂಡ ಸಂದರ್ಭವನ್ನು ಕುರಿತು ಹೇಳುವಾಗ ಮಾತ್ರ ಅಂಥ ಕಲಾತ್ಮಕ ನೈಪುಣ್ಯ ಇರಾನ್, ಆಫ್ಘಾನಿಸ್ತಾನ, ಬಲೂಚಿಸ್ಥಾನ ಮೊದಲಾದ ದೇಶಗಳ ನಯಗಾರಿಕೆಯಿಂದ ಪ್ರಭಾವಿತವಾಯಿತು ಎಂದು ಹೇಳುತ್ತಾರೆ. ಇದು ಕುಂಬಾರರ ಮತ್ತು ಕುಂಬಾರಿಕೆಯ ಪ್ರಸರಣದ ಗುಣವನ್ನು ತೋರಿಸುತ್ತದೆ.

## ಶಾಸನಗಳಲ್ಲಿ ಕುಂಬಾರ

ಕ್ರಿ.ಶ. 13ನೇ ಶತಮಾನದ್ದಿರಬಹುದಾದ [64] ಆನೆಗೊಂದಿ ಹಾಗೂ ಸೊಲ್ಲಾಪುರ ಶಾಸನಗಳೆರಡರ ಉದ್ದೇಶ ಒಂದೇ ; ಅದೆಂದರೆ, ಕುಂಬಾರ ಕುಲದ (ಕೋವರ ಕುಲ, ಕರಗ ವಿದ್ಯಾಧರ ಕುಲ) ಹುಟ್ಟನ್ನು ಪೌರಾಣಿಕ ಹಿನ್ನೆಲೆಯಲ್ಲಿ ವಿವರಿಸುವುದು. ಪೌರಾಣಿಕ ಕಥಾಭಿತ್ತಿ ಪಾರ್ವತೀ ಕಲ್ಯಾಣ. ಕಾವ್ಯಾತ್ಮಕ ವಿವರಗಳನ್ನು ಬದಿಗಿರಿಸಿದರೆ ಅದರ ಸಾರವಿಷ್ಟೆ : ಕೃತಯುಗದಲ್ಲಿ ಸುಶಾಶ್ವತನಪ್ಪ ಪುರುಷ ಬೇಕೆಂದು ಗಿರಿಯನೇರಿ ತಪಸ್ಸು ಮಾಡಿದ ಗಿರಿರಾಜನ ಮಗಳನ್ನು ಬೇಟೆಯಾಡಲೆಂದು ಬಂದ ಶಿವ ಮೆಚ್ಚಿ ವರಿಸಬಯಸುತ್ತಾನೆ. ವಿವಾಹ ಆರಂಭವಾದಾಗ, ಮದುವೆ ಮಂಟಪದಲ್ಲಿ "ಕೈಧಾರೆಯೆರೆಯಲು ಕಲಶ, ಜಗಲಿಗೆ ಶೋಭೆ ತರುವ ಹೂಜೆ, ಭೃಂಗಾರಿಗಳು ಆಗಬೇಕಲ್ಲ" ಎಂದು ಶಿವ ಕೇಳಿದಾಗ ಗಿರಿರಾಜ ತನ್ನ ದಿವ್ಯಧ್ಯಾನದಿಂದ ವಿಷ್ಣುವಿನ ಚಕ್ರವನ್ನು ತಿಗರಿಯಾಗಿ, ಬ್ರಹ್ಮನ ವೇದ ಪುಸ್ತಕದ ಕಂಭಿಯನ್ನು ಕಂಭಿಯಾಗಿ,

ಶಿವನ ಲಾಕುಳವನ್ನು ಕೋಲಮಾಡಿ, ಯಜ್ಞೋಪವೀತವನ್ನು ಕೊರೆದಾರ ಮಾಡಿ, ಯಮನ ಕೋಣನಿಂದ ಮಣ್ಣನ್ನು ತರಿದು ಹದಮಾಡಿ, ಮಿದಿದು ಹೂಜಿ, ಸೊನ್ನಲಿಗೆ, ಕುಂಭಾದಿ ನಾನಾ ಭಾಂಡಗಳನ್ನು ತಯಾರಿಸಿ, ಹದಗೊಳ್ಳುವವರೆಗೆ ಸುಟ್ಟು, ಹೂಜೆಗೆ ಅನೇಕ ಪ್ರಕಾರವಾಗಿ ಬಣ್ಣವಿಟ್ಟು ಶಿವನ ಅಪೇಕ್ಷೆಯನ್ನು ಪೂರೈಸುತ್ತಾನೆ. ವಿವಾಹ ನಡೆದು ಶಿವನು ಗಿರಿಜೆಯೊಂದಿಗೆ ಕೈಲಾಸಕ್ಕೆ ಹೊರಡಲು ಉದ್ಯುಕ್ತನಾದಾಗ ಗಿರಿರಾಜನನ್ನು ಕರೆದು "ಹೂಜಿ, ಸೊಂನಲಿಗೆ ಭೃಂಗಾರಿಯನ್ನು ಮಾಡಿತಂದ ವೃತ್ತಿ ಕೆಡಲಾಗದು" ಎಂದು ಹೇಳಿ ಅವನ ಸಂತತಿಗೆ "ಸಾಲೆ ಸಾಸಿರ್ವರೆಂಬ ಸಮಯ"ದ ಹೆಸರು ನೀಡಿ, ನಂತರ ಚಕ್ರ, ಗಳೆಯನ್ನು ಕೊಟ್ಟು 'ಅಯಿ ಸಾವಂತ'ರೆಂಬ ಹೆಸರು ಕೊಟ್ಟು ಸರ್ವಪ್ರಕಾರದ ಗ್ರಾಮಗಳಲ್ಲಿ ಮೂವತ್ತಾರು ಭಾಂಡಗಳನ್ನು ಹುಟ್ಟಿಸಿ ಲೋಕಕ್ಕುಪಕಾರ ಮಾಡು" ಎಂದು ಆದೇಶಿಸಿದ. ಹೀಗೆ ಕುಂಭಕಾರರ ಸಮಯವನ್ನು, ಅದರ ಹದಿನೆಂಟು ಪಟ್ಟಣ, ಹದಿನೆಂಟು ಯೋಗಪೀಠ, ಹದಿನೆಂಟು ಕೇಣಿಗಳನ್ನು ಋಷಿಸಮೂಹ ಕೊಂಡಾಡುವುದು. ಕುಂಭಕಾರರ ಹದಿನೆಂಟು ಕಣಿಗಳನ್ನು ಸಪ್ರಶಸ್ತಿ ಹೆಸರಿಸಿ, ಅವುಗಳಿಗೆ ಅಧೀಕ್ಷಕವೆನಿಸುವ 'ಮೂವತಿಛಾಸಿರಕೇಣಿ'ಯ ಪ್ರಶಸ್ತಿ ನೀಡಿದೆ. ಇಲ್ಲಿಗೆ ಒಂದು 'ಸಮಯ ಶಾಸನ ಪುರಾಣ' ಮುಕ್ತಾಯವಾಗಿ ಇನ್ನೊಂದು ಪುರಾಣ ಆರಂಭವಾಗುತ್ತದೆ. ದೇವಾಸುರರು ಅಮೃತಮಂಥನ ಮಾಡುವುದೆಂದು ನಿರ್ಧರಿಸಿ ಹರಿಯನ್ನು ಅಮೃತ ತರಲು ಅಟ್ಟುತ್ತಾರೆ. ಆದರೆ ಅಮೃತವನ್ನು ಕಡೆಯಲು ಪಾತ್ರೆ ಬೇಕಲ್ಲ! ದೇವಾಸುರರು ಶಿವನೆಡೆಗೆ ಓಡುತ್ತಾರೆ. ಅವನಲ್ಲಿ ತಮ್ಮ ಅಳಲನ್ನು ತೋಡಿಕೊಳ್ಳುತ್ತಾರೆ. 'ಗಿರಿಜಾ ಕಲ್ಯಾಣ' ಸಂದರ್ಭದಲ್ಲಿ ಗಿರಿರಾಜ ಕುಂಭಕಾರ ಕಲೆಯಲ್ಲಿ ನೈಪುಣ್ಯ ತೋರಿದ್ದಾನೆ. ಆದ್ದರಿಂದ ಶಿವ ದೊಡ್ಡ ಕುಂಭವನ್ನು ತಯಾರಿಸಿ ತರಲು ಗಿರಿರಾಜನಿಗೆ ಆದೇಶಿಸುತ್ತಾನೆ. ಆತ ಅಂತು ಮಾಡಿದ ಮೇಲೆ ಅಮೃತವನ್ನು ಕಡೆದಾಗ ಹಲವು ವಸ್ತು ವಿಶೇಷಗಳು ಹುಟ್ಟಿದವು. ಅವುಗಳಲ್ಲಿ ಹದಿನೆಂಟು ಪಟ್ಟಣ, ಹದಿನೆಂಟು ಜಾತಿಗಳು ಸೇರಿದ್ದವು. ದೇವತೆಗಳಿಗೆ ತಂತಮ್ಮ ಪಾಲನ್ನು ಶಿವ ಹಂಚಿದ. ಹದಿನೆಂಟು ಪಟ್ಟಣ, ಹದಿನೆಂಟು ಜಾತಿಗಳನ್ನು ಭೂಮಿಯ ಮೇಲೆ ನಿಲ್ಲಿಸಿದ. ಕುಂಭ ಮಾಡಿಕೊಳ್ಳುವುದಕ್ಕೆ ಪ್ರತಿಫಲವಾಗಿ ಗಿರಿರಾಜ ಭಲ್ಲುಕೆಗೋಲು, ಮಡಕೆ ಬೆಲ್ಲ ಕುಂಚುಳಿಕೆ, ಮೂವತ್ತಾರು ಭಾಂಡ, ಗುಡಿ (ಧ್ವಜ), ಹಾರೆಯಕೋಲು, ಪಂಚಲೋಹ ಇತ್ಯಾದಿಗಳನ್ನು ಅವುಗಳನ್ನು ಹೇರಲು ಕೋಣವನ್ನೂ ಶಿವನಿಂದ ಪಡೆದು ಗಿರಿಪುರಕ್ಕೆ ಮರಳಿ ಅಯ್ಯಾವಂತರ್ಗೆ ಕೊಟ್ಟ. ಈ ಶಾಸನವನ್ನು ಶಿವನೇ ಹೇಳಿದ ವಿಶ್ವಾಮಿತ್ರನೇ ಬರೆದ. ಗಿರಿರಾಜ ಅದನ್ನು ಪಡೆದು ಕೋವರ ಕುಲಕ್ಕೆ ಕೊಟ್ಟ.

ಅಂತೂ ಈ ಸಮೀಕ್ಷೆಯಿಂದ ಕುಂಬಾರ ಕುಲ, ವೃತ್ತಿಯ ಉತ್ಪತ್ತಿಯನ್ನು ಶಿವನ ಮಾವ, ಪಾರ್ವತಿಯ ತಂದೆ ಪರ್ವತರಾಜನವರೆಗೆ ಹಿಂದೆ ಕೊಂಡೊಯ್ಯುವ, ಅದಕ್ಕೆ ಪೌರಾಣಿಕ ಹಿನ್ನೆಲೆ, ದೈವಿಕ ಅನುಮೋದನೆ, ಪ್ರಾಮಾಣ್ಯಗಳನ್ನು ನೀಡುವ ಉದ್ದೇಶ ಈ ಶಾಸನದ ರಚನೆಯಲ್ಲಿ ಅಡಗಿದೆ ಎಂಬುದು ಸುಸ್ಪಷ್ಟ.

ಶಾಸನದಲ್ಲಿ ಕುಂಭಕಾರ ಸಮಯಕ್ಕೆ "ಸಾಲೆ-ಸಾಸಿರ್ವರ ಸಮಯ" ಎಂಬ ಹೆಸರನ್ನು ಒಂದೆಡೆ ಸೂಚಿಸಲಾಗಿದೆ. ನಮಗೆ ತಿಳಿದಿರುವ ಮಟ್ಟಿಗೆ ಸಾಲೆಸಾಸಿರ್ವರದು ನೇಕಾರ ಸಂಘ. ಈ ಸಂದರ್ಭದಲ್ಲಿ ಸೊಲ್ಲಾಪುರ ಶಾಸನ "ಸಲ್ಲೆಸಾಸಿರ್ವರು" ಎಂಬ ಪದ ಬಳಸಿರುವುದು ಗಣನೀಯ. ಬಹುಶಃ ಇದು 'ಸಲ್ಲೆ' - 'ಶಲ್ಯ' - 'ಕೋಲು' - 'ಗಳೆಯ' - 'ಸಾಸಿರ್ವರು' ಎಂಬರ್ಥ ನೀಡುವಂತಿದೆ. 'ಕೋಲು', 'ಗಳ' ಅಥವಾ 'ದಂಡ' ಕುಂಬಾರರ ಹೆಗ್ಗುರುತು ಆಗಿರಬಹುದು.

ಕ್ರಿ.ಶ. 1126ರ ಹೊಳಲ್ಕೆರೆಯ ಶಾಸನವೊಂದು[65] ಕುಂಬಾರ ಜಾತಿಯ ಬಮ್ಮಣ್ಣ ಎನ್ನುವವನು ತಲೆಯನ್ನು ತೊಳೆಯದ, ಅನ್ನವುಣ್ಣದ 'ವೀರವ್ರತ'ವನ್ನು ಕೈಗೊಂಡು ಕುಂಭೇಶ್ವರ ದೇವರ ಪ್ರತಿಷ್ಠೆ ಮಾಡಿಸಿದ ವಿಷಯವನ್ನು ತಿಳಿಸುತ್ತದೆ.

ಹರಿಹರ ಮಹಾಕವಿಯ ಕುಂಬಾರ ಗುಂಡಯ್ಯನ ರಗಳೆ[66]ಯಲ್ಲಿ ಗುಂಡಯ್ಯನ ಅನನ್ಯ ಭಕ್ತಿಗೆ ಮೆಚ್ಚಿ ಸಾಕ್ಷಾತ್ ಶಿವನೇ ಬಂದು ಕುಣಿದ ಭಕ್ತಿ ಪರವಶತೆಯ ಚಿತ್ರ ಸುಪ್ರಸಿದ್ಧ. 'ಆಡಿದನಾಡಿದನಾಹಾ ಶಂಕರ ' ಎಂದು ಹರಿಹರ ಉದ್ಗರಿಸಿದರೆ 'ಕುಂಬಾರರೆಲ್ಲರು ಗುಂಡಯ್ಯನಾಗಬಲ್ಲರೇ? ಮಡಿವಾಳರೆಲ್ಲರು ಮಾಚಯ್ಯನಾಗಬಲ್ಲರೇ?' ಎಂದು ಶಿವಯೋಗಿ ಸಿದ್ಧರಾಮೇಶ್ವರ[67] ಪ್ರಶ್ನಿಸುತ್ತಾನೆ. ಕುಂಬಾರ ಗುಂಡಯ್ಯ ಚಾರಿತ್ರಿಕ ವ್ಯಕ್ತಿಯಾಗಿದ್ದು ಶಾಸನಗಳಲ್ಲಿ ನಮೂದಿತನಾಗಿರುವುದನ್ನು ಡಾ. ಕಲಬುರ್ಗಿಯವರು[68] ಗುರುತಿಸಿದ್ದಾರೆ.

ಸು. ಕ್ರಿ.ಪೂ. 1305ರ ಮರಡಿಪುರ ಶಾಸನದಲ್ಲಿ[69] 'ಒಹಿಲ ಉದ್ಭಟ ನಂಬಿ ಕುಂಬಾಱ ಗುಂಡ ಆಂಡವಲ ಕರಿಕಾಳಚೋಳ ಭೋಗದೇವ ಬಾಣ ಮಯೂರ ' ಎಂದೂ, ಕ್ರಿ.ಶ. 1200ರ ಅಬ್ಬಲೂರು[70] ಸೋಮೇಶ್ವರ ದೇವಾಲಯದ ಪೌಳಿಯಲ್ಲಿ 'ಕುಂಬಾರಗುಂಡನ ಮುಂದೆ ಬಂದಾಡಿದ ನಮ್ಮ ಶಿವನು' ಎಂದೂ ಕೆತ್ತಲಾಗಿದ್ದು ಈ ಬರಹದ ಅಡಿಯಲ್ಲಿ ಗಡಿಗೆ ಬಾರಿಸುವ ಗುಂಡಯ್ಯನ ಚಿತ್ರ ಬಿಡಿಸಲಾಗಿರುವುದು ತಿಳಿದುಬರುತ್ತದೆ.

## 2.5. ಅಕ್ಕಸಾಲೆ

'ಅಕ್ಕಸಾಲಿ'ಗೆ 'ಅರ್ಕಸಾಲೆ'ಯೇ ಮೂಲಪದ. ಅರ್ಕ ಎಂದರೆ ಅರಗು. ಅಂದರೆ ಅರಗು ಕೂಡಿಸುವ, ಕರಗಿಸುವ ಅಥವಾ ಭಟ್ಟಿ ಇಳಿಸಿ ಆಭರಣಗಳಿಗೆ ತುಂಬುವ ಸಾಲೆಯೇ 'ಅರ್ಕಸಾಲೆ' ಎಂದಿಟ್ಟುಕೊಳ್ಳಬಹುದು. ಕೌಟಿಲ್ಯನು ಬಂಗಾರದ ಒಡವೆ ಮಾಡುವ ಶಾಲೆಗೆ ಅಕ್ಷಶಾಲೆ ಎಂದಿದ್ದಾನೆ. ಅದೇ (ಇಗ ಪ್ರತ್ಯಯ ಸೇರಿ) ಅಕ್ಕಸಾಲೆಯಾಗಿರಬೇಕೆಂದು ಊಹಿಸುತ್ತಾರೆ. ಒಟ್ಟು ಬೆಳ್ಳಿ ಇಲ್ಲವೆ ಚಿನ್ನವನ್ನು ಭಟ್ಟಿ ಇಳಿಸುವ ಸಾಲೆಯೇ ಅರ್ಕಸಾಲೆ ಎಂದು ಕರೆಯಬಹುದು.

ಪಂಚಶಿಲ್ಪನಿರತರಾದ ಈ ವಿಶ್ವಕರ್ಮವಿಶ್ವಬ್ರಾಹ್ಮಣ ಪಂಚಾಳರಿಗೆ ಪಂಚಗೋತ್ರಋಷಿಗಳನ್ನು ಕಲ್ಪಿಸಲಾಗಿದೆ. ಸಾನಗ ಗೋತ್ರದಲ್ಲಿ ಕಮ್ಮಾರನೂ, ಸನಾತನ ಗೋತ್ರದಲ್ಲಿ ಬಡಿಗನೂ, ಅಹೋಭೂನ ಗೋತ್ರದಲ್ಲಿ ಕಂಚುಗಾರನೂ, ಪತ್ನಗೋತ್ರದಲ್ಲಿ ಶಿಲ್ಪಿಯೂ ಮತ್ತು ಸುಪರ್ಣಸ ಗೋತ್ರದಲ್ಲಿ ಅಕ್ಕಸಾಲಿಯೂ ಬರುತ್ತಾನೆ.

ಬೆಳ್ಳಿ ಹಾಗೂ ಬಂಗಾರದ ಒಡವೆಗಳನ್ನು ತಯಾರಿಸುವಲ್ಲಿ ಕುಶಲಕರ್ಮಿಗಳೆನಿಸಿಕೊಂಡ ಸುಪರ್ಣಸ ಗೋತ್ರದವರಾದ ದೈವಜ್ಞ ಅಕ್ಕಸಾಲಿಗರಿಗೆ ಚಿನಿವಾಲರು, ರಥಕಾರರು, ಸೋನೆಗಾರರು, ಪತ್ತಾರರು ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ. ಅಲ್ಲದೇ ಅರ್ಕಸಾಲಿ, ಮನ್ವಾಚಾರಿ, ಮಾನಾಚಾರಿ, ಮಾಯಾಚಾರಿ, ಆಚಾರಿ, ಪಂಚಾಳ, ಪತ್ತಾರ ಇತ್ಯಾದಿ ಅಡ್ಡ ಹೆಸರುಗಳು ಇವರಿಗೆ ಸಾಮಾನ್ಯವಾದವುಗಳು.

ಗತಿಸಿಹೋದ ನಾಗರಿಕತೆಯನ್ನು, ಪ್ರಾಚೀನ ಕಲಾವಿನ್ಯಾಸವನ್ನು ಗುರುತಿಸಲು ಈ ಹಿಂದೆ ಆಗಿ ಹೋದ ಅಕ್ಕಸಾಲಿಗರು ನಿರ್ಮಿಸಿದ ಕಲಾಕುಸುರಿನ ವಸ್ತು ಒಡವೆಗಳು ಮಹತ್ವದ ಸಾಮಗ್ರಿಗಳಾಗಿರುತ್ತವೆ (ಬಂಗಾರ, ಬೆಳ್ಳಿ, ವಜ್ರ, ರತ್ನ, ಮಣಿಗಳಿಂದ ಖಚಿತವಾದ ಸುಂದರ ಕುಸುರಿ ಕೆಲಸಗಳಲ್ಲಿ ಇವರು ಪರಿಣಿತರು). ವಿಶ್ವಕರ್ಮ ಬ್ರಾಹ್ಮಣರನ್ನು ಕುರಿತಂತೆ ಹಾಗೆಯೇ ಅಕ್ಕಸಾಲಿಗರನ್ನು ಕುರಿತಂತೆ ಅದೆಷ್ಟೋ ಸಂಗತಿಗಳು ಶಾಸನೋಕ್ತವಾಗಿವೆ.

ಕ್ರಿ.ಪೂ. 2500ರ ಕಾಲದಲ್ಲಿ ಸಿಂಧೂ ಕಣಿವೆಯ ನಾಗರಿಕತೆಯ ಘಟ್ಟದಲ್ಲಿ ಅಕ್ಕಸಾಲಿಗರು ತಯಾರಿಸಿದ ಬೆಳ್ಳಿ, ಬಂಗಾರ ಹಾಗೂ ತಾಮ್ರದ ಆಭರಣಗಳು ಅವರ ಪ್ರಾಚೀನತೆಗೆ ಸಾಕ್ಷಿಯಾಗಿವೆ. ಕ್ರಿ.ಪೂ. 1500ರ ಕಾಲಕ್ಕೆ ಭಾರತಕ್ಕೆ ಬಂದ ಆರ್ಯರೂ ಕೂಡ ಅಕ್ಕಸಾಲೆ ಕಲೆಯಲ್ಲಿ ನಿಷ್ಣಾತರಾಗಿದ್ದರು. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಅಕ್ಕಸಾಲಿಗರ ವೃತ್ತಿ

ಹಾಗೂ ಸರಕಾರವು ಅವರ ಮೇಲೆ ವಿಧಿಸಿದ ನಿಯಂತ್ರಣದ ಬಗೆಗೆ ಹೇಳಲಾಗಿದೆ. ಈ ಅಕ್ಕಸಾಲಿಗರು ಬೆಳ್ಳಿ ಬಂಗಾರದ ನಾಣ್ಯಗಳನ್ನು ಮಾಡಿಕೊಡುತ್ತಿದ್ದರು. ರತ್ನಮಣಿಯನ್ನು ಬಂಗಾರದಲ್ಲಿ ಕೂಡಿಸುವುದನ್ನು 'ಕ್ಷೀಪಣ' ಎಂದೂ, ಬಂಗಾರ ಇಲ್ಲವೆ ಬೆಳ್ಳಿಯ ಬಳೆಗಳನ್ನು ತಯಾರಿಸುವುದಕ್ಕೆ 'ಗುಣ' ಎಂದೂ ಕರೆಯುತ್ತಿದ್ದರು. ಸಾಮಾನುಗಳಿಗೆ ತಕ್ಕಂತೆ ಹಣ ನಿಗದಿಯಾಗುತ್ತಿತ್ತು. ತನ್ನ ಕೆಲಸದಲ್ಲಿ ಅಜಾಗರೂಕತೆ ವಹಿಸಿ ಯಾರಿಗಾದರೂ ಮೋಸ ವಂಚನೆ ಮಾಡುವ ಅಕ್ಕಸಾಲಿಗೆ ವೇತನದ ಹತ್ತುಪಟ್ಟು ದಂಡ ಕೊಡಬೇಕಾಗುತ್ತಿತ್ತು. ಅಕ್ಕಸಾಲೆಯನ್ನು ಹೊರತುಪಡಿಸಿ ಎಲ್ಲಿಯಾದರೂ ಮುಚ್ಚುಮರೆಯಲ್ಲಿ ಬಂಗಾರ ಬೆಳ್ಳಿಯ ಕೆಲಸ ಮಾಡಿದವನಿಗೂ ದಂಡವಿಧಿಸಲಾಗುತ್ತಿತ್ತು.[71]

ವಿಶ್ವಕರ್ಮರೆಂದು ಕರೆದುಕೊಳ್ಳುವ ಅಕ್ಕಸಾಲಿಗಳನ್ನು ರಾಜನು ಕಮ್ಮಟಗಳಲ್ಲಿ ನೇಮಿಸಿಕೊಳ್ಳುತ್ತಿದ್ದನು.[72] ಈ ಅಕ್ಕಸಾಲಿಗಳು ಅಥವಾ 'ಕಮ್ಮಟದೋಜು'ಗಳು ತಾವೇ ಪ್ರತ್ಯೇಕವಾಗಿ ಶ್ರೇಣಿಗಳನ್ನು ಸ್ಥಾಪಿಸಿಕೊಂಡಿದ್ದರು. ಉದಾಹರಣೆಗೆ ಅಂತಹ ಶ್ರೇಣಿಯೊಂದು ಕಮ್ಮಟೇಶ್ವರ ದೇವಸ್ಥಾನಕ್ಕೆ ಆಯಾ ಕಮ್ಮಟಗಳಲ್ಲಿ ಕೊಡಬೇಕಾದ ಭಾಗವನ್ನು ನಿರ್ಧರಿಸಿದ ವಿಷಯವು ಶಾಸನವೊಂದರಲ್ಲಿದೆ.[73] 'ಅಶೇಷ ಕೊತ್ತಳೆಯುಮಿದ್ದು ಕಮ್ಮಟೇಶ್ವರ ದೇವರ ನಂದಾದೀವಿಗೆಗೆ ಬಿಟ್ಟ ದತ್ತಿ ಉಂಡಿಗೆಯ ಕಮ್ಮಟದಲು ತಿಂಗಳಿಗೆ ಸ[ಗ] ಒಂದು ಬಿಡಿಗಮ್ಮಟದಲು ತಿಂಗಳಿಗೆ ಹ ಒಂದು'. ಪ್ರಾಚೀನ ಕರ್ನಾಟಕದ ಲೊಕ್ಕಿಗುಂಡಿ[74], ಸೂಡಿ[75], ಮುಂತಾದ ಕಡೆಗಳಲ್ಲಿದ್ದ ಕಮ್ಮಟಗಳು ಪ್ರಸಿದ್ಧವಾಗಿದ್ದವು. ರಾಜನು ತನ್ನ ಕಮ್ಮಟಗಳ ಮೇಲ್ವಿಚಾರಣೆಗೆ ಅಧಿಕಾರಿಗಳನ್ನು ನೇಮಿಸುತ್ತಿದ್ದನು.

ಕ್ರಿ.ಶ. 1098ರ ಕುಡುತಿನಿ ಶಾಸನವು[76] 'ಎರಣೆಗ ಮಾದೋಜನ ಮಗಂ ಸಾವಿಮೋಜನುಂ ಬೇಚೋಜನ ಮಗ ಚಿಕ್ಕಮಾದೋಜನು ಸ್ವಾಮಿ ದೇವರ ನವಿಲಚ್ಚಿನ ಪೊನ್ನಂ, ಲೊಕ್ಕಿಯ ಪೊನ್ನಾಣೆಯು (೦) ಮಾಪೊನ್ನ ತೂಕಮು ಮಾಗಿ ಪೊಯ್ದು ಸಲಿಸುವರು'. ಇದರಿಂದ ದೇವಸ್ಥಾನಗಳೂ ಕೂಡ ನಾಣ್ಯಗಳನ್ನು ಟಂಕಿಸುತ್ತಿದ್ದದ್ದು ಗೊತ್ತಾಗುತ್ತದೆ. ಅಲ್ಲದೆ ಕಮ್ಮಟದ ಅಕ್ಕಸಾಲಿಗಳಿಗೆ ನಾಣ್ಯಗಳನ್ನು ಟಂಕಿಸುವ ಅಧಿಕಾರವನ್ನು ದೇವಸ್ಥಾನವು ಬಿಟ್ಟುಕೊಟ್ಟು, ಅದಕ್ಕೆ ಪ್ರತಿಯಾಗಿ ಅವರಿಂದ ವರ್ಷಕ್ಕೆ ಇಂತಿಷ್ಟು ಗದ್ಯಾಣ (ಪೊನ್)ಗಳನ್ನು ಪಡೆಯುತ್ತಿದ್ದಿತೆಂದು ಕಾಣುತ್ತದೆ.

ಕ್ರಿ.ಶ. 1259ರ ಮಾರೆಹಳ್ಳಿ ಶಾಸನವು[77] 'ಶ್ರೀನಾರಸಿಂಹದೇವರು ಅಕಸಾಲೆ ಕಾಳಜೀಗೆ ಕೊಟ್ಟ ಕೊಡಗೆ ನಕಾ .. ಭಂಗಾರದ ಕೆಲಸ ವಿಸ ತಾಯ' ಅಂದರೆ ಹೊಯ್ಸಳ ನರಸಿಂಹನಿಗೆ ಬಂಗಾರದ ಕೆಲಸ ವಿಸತಾಯನು ಮಾಡುವುದಕ್ಕೆ ಅವನಿಗೆ (ಅಕ್ಕಸಾಲೆ ಕಾಳಜಿಗೆ) ೧ ಗದ್ದೆ ಹೊಲವನ್ನು ಅನುಭವಿಸುವ ಬಿಟ್ಟುಕೊಡಲಾಗಿದೆ.

ಚಿನ್ನಾಭರಣಗಳು ಆ ದೇಶದ ಸಂಪತ್ತಿನ ಪ್ರತೀಕವಾಗಿದ್ದವು. ಅರಸೀಕೆರೆಯ ಶಾಸನವೊಂದು ಚಿನ್ನಾಭರಣದ ಖಜಾನೆಯನ್ನು ನೋಡಿಕೊಳ್ಳಲು ಮಾಣಿಕ್ಯ ಭಂಡಾರಿ[78] ಎಂಬ ಅಧಿಕಾರಿಯಿದ್ದನೆಂದು ತಿಳಿಸುತ್ತದೆ. ಮತ್ತೊಂದು ಅರಸೀಕೆರೆಯ ಶಾಸನವು[79] ಮುಮ್ಮಡಿ ನರಸಿಂಹನ ಕಾಲದಲ್ಲಿ ರತ್ನ ಪರಿಣಿತರು ಇದ್ದ ಬಗ್ಗೆ ಮಾಹಿತಿ ನೀಡುತ್ತದೆ. ಅರಸೀಕೆರೆಯ ಶಾಸನಗಳೆರಡು[80] ಕಿವಿಯೋಲೆಯ ಉಲ್ಲೇಖವನ್ನು ಮಾಡುತ್ತವೆ. ನಾಣ್ಯ ತಯಾರಿಕೆಯಲ್ಲಿ ಗುಣವನ್ನು ಕಾಪಾಡುವ ದೃಷ್ಟಿಯಿಂದ ನಾಣ್ಯ ಪರೀಕ್ಷಕರಿದ್ದು[81] ಅವರುಗಳ ಮೇಲೆ ತೆರಿಗೆ ವಿಧಿಸುತ್ತಿದ್ದುದನ್ನು ಕಡೂರಿನ ಶಾಸನವೊಂದು ವಿವರಿಸುತ್ತದೆ.

## 2.6. ಕಂಚುಗಾರರು

ತಾಮ್ರ, ಹಿತ್ತಾಳೆ ಮತ್ತು ಕಂಚು ಎಂಬ ಮೂರು ಲೋಹಗಳಲ್ಲಿ ಕೆಲಸ ಮಾಡುವವರನ್ನು ಕನ್ನಡದಲ್ಲಿ ಕಂಚುಗಾರರು ಎಂದು ಕರೆಯಲಾಗಿದೆ. 'ಕಾಂಸಿಗ ' ಎಂಬ ಪದವನ್ನು ಕೆಲವು ಕಡೆ ಈ ಅರ್ಥದಲ್ಲೇ ಬಳಸಿರುವಂತೆ ಕಾಣುತ್ತದೆ. ಈ ಕಂಚುಗಾರರು ಕೂಡ ವಿಶ್ವಕರ್ಮ ಮತಕ್ಕೆ ಸೇರಿದವರೇ ಆಗಿದ್ದಾರೆ. ಕಂಚುಗಾರರು ತಳಿಗೆ, (ಕಂಚಿನ) ಕನ್ನಡಿ, ಸಿಪ್ಪು, ಸಟ್ಟುಗಗಳನ್ನು ಮಾಡುತ್ತಿದ್ದುದಾಗಿ ಡಾ. ಚಿದಾನಂದಮೂರ್ತಿ[82]ಯವರು ಹೇಳಿದ್ದಾರೆ. ಕೈದೀಪ, ಮುಕ್ಕಾಲು ಮಣೆ (Tripods), ಘಂಟೆಗಳು (Bells), ನೀರ್ದಾನಿಗಳು (Water-vessels), ಕಹಳೆ (Horn) ಮೊದಲಾದವುಗಳು ಕೂಡ ಇವರಿಂದ ತಯಾರಾಗುತ್ತಿದ್ದವೆಂದು ಡಾ. ಜಿ.ಆರ್. ಕುಪ್ಪಸ್ವಾಮಿಯವರು[83] ತಿಳಿಸುತ್ತಾರೆ.

ಕ್ರಿ.ಶ. 984ರ ಬಳ್ಳಾರಿ ಜಿಲ್ಲೆಯ ಕೋಳಗಲ್ಲು ಶಾಸನವು[84] 'ಶ್ರೀಮತ್ ಗಜಾಧರಯ್ಯಂ ಕೋಳ್ಗಲ್ಲಾಳ ಲೋಹಾಸನಮಸ್ತಕಸ್ಥಿತನಾಗಿ ರಾಜ್ಯಂಗೆಯುತ್ತುಂ ಚಂಗಗಾವುಣ್ಡನ ....' ಎಂದು ಮುಂದುವರಿಯುತ್ತದೆ. ಇಲ್ಲಿನ 'ಲೋಹಾಸನ' ಎಂಬುದು ಕಂಚುಗಾರರು ಲೋಹಾಸನಗಳನ್ನು ತಯಾರಿಸುತ್ತಿದ್ದಿರಬಹುದೆ ಎಂದು ಊಹಿಸಬಹುದು.

ಕ್ರಿ.ಶ. 11ನೇ ಶತಮಾನಕ್ಕೆ ಸೇರಿದ ನಟರಾಜ, ಶಿವ, ಪಾರ್ವತಿ ಮೊದಲಾದ ಲೋಹದ ಎರಕ ಹೊಯ್ದ ವಿಗ್ರಹಗಳು ಚೆನ್ನಪಟ್ಟಣದ ಹತ್ತಿರದ ಕೂಡಲೂರು ಗ್ರಾಮದಲ್ಲಿ ಸಿಕ್ಕಿರುವುದನ್ನು ಗಮನಿಸಿದ ಡಾ. ಗುರುರಾಜಾಚಾರ್ ಇದರ ಆಧಾರದ ಮೇಲೆ ಆಗಿನ ಕಾಲಕ್ಕಾಗಲೇ ಈ ಕಂಚುಗಾರರು ಮಿಶ್ರಲೋಹವನ್ನು ಎರಕ ಹೊಯ್ದು ವಿಗ್ರಹಗಳನ್ನು

ತಯಾರಿಸುವುದರಲ್ಲಿ ಪರಿಣಿತರಾಗಿದ್ದರೆಂದೂ ಮೆಚ್ಚಿ ಮಾತನಾಡಿದ್ದಾರೆ.[85] ಮುಂದುವರಿದು ಕ್ರಿ.ಶ. 1116ರ ಮೈಸೂರಿನ ಒಂದು ಶಾಸನವು ಬಂಗಾರ, ಕಬ್ಬಿಣ, ತಾಮ್ರ ಮೊದಲಾದ ಲೋಹಕರ್ಮಗಳಲ್ಲಿಯೂ, ವಜ್ರ, ಮುತ್ತು ರತ್ನ ಮೊದಲಾದ ರತ್ನಕರ್ಮಗಳಲ್ಲಿಯೂ ಪರಿಣಿತರಾಗಿದ್ದುದೇ ಅಲ್ಲದೆ ; ತೀರ್ಥಂಕರ, ವಿಷ್ಣು ಮೊದಲಾದ ದೇವತೆಗಳ ಮೂರ್ತಿಗಳನ್ನು ಎರಕ ಹೊಯ್ದು ತಯಾರಿಸುತ್ತಿದ್ದರೆಂದು ಹೇಳುತ್ತಾರೆ.

ಕ್ರಿ.ಶ. 1054ರ ಒಂದು ಶಾಸನವು[86] ನಾಚೋಜ ಎಂಬ ಕಾಂಸಿಗನನ್ನು ಗುರುತಿಸುತ್ತದೆ. ಇವನು ಕಂಚಿನ ಕೆಲಸವನ್ನು ಮಾಡಿದ್ದಕ್ಕಾಗಿ ಭೂಮಿಯನ್ನು ದಾನವಾಗಿ ಪಡೆಯುತ್ತಾನೆ. ಕಾಳೋಜ ಮತ್ತು ಆವಕೋಜ[87] ಎಂಬಿಬ್ಬರು ಕಂಚಿನ ಕೈಗಾರಿಕೋದ್ಯಮಿಗಳು ಕ್ರಿ.ಶ. 1395ರಲ್ಲಿ ಬೇಲೂರಿನ ಚೆನ್ನಕೇಶವ ದೇವಾಲಯದಲ್ಲಿರುವ ಕಂಚಿನ ದೀಪಸ್ತಂಭವನ್ನು ತಯಾರು ಮಾಡುತ್ತಾರೆ. ಇವರು ಕಂಚುಗಾರ ಮಾರಾಳ ನಿಂದೋಜನ ಮಕ್ಕಳು. ಇವರು ತಮ್ಮನ್ನು 'ಪಟ್ಟಣದ ಕಂಚುಗಾರರೆಂದು' ಹೇಳಿಕೊಂಡಿದ್ದಾರೆ. ಅದೇ ಬೇಲೂರು ಪಟ್ಟಣವನ್ನು ಕುರಿತೇ ಇವರು ಪಟ್ಟಣ ಎಂದು ಹೇಳಿರಬೇಕು.

ಕಂಚು ಮೊದಲಾದ ಲೋಹದ ವಿಗ್ರಹಗಳು ಸ್ವಲ್ಪ ಪ್ರಮಾಣದಲ್ಲಿ ಅಲ್ಲಲ್ಲಿಯೇ ಉಪಲಬ್ಧವಿದ್ದರೂ ಅವುಗಳನ್ನು ಮಾಡಿದ ಕುಶಲ ಕಲಾಕಾರರ ಉಲ್ಲೇಖಗಳು ಸದ್ಯಕ್ಕೆ ಉಪಲಬ್ಧವಿಲ್ಲ.

## 2.7. ತೆಲ್ಲಿಗರು

ಮಧ್ಯಕಾಲೀನ ಕರ್ನಾಟಕದ ದಾನ ಶಾಸನಗಳಲ್ಲಿ ದೇವಾಲಯ ದಾನಗಳ ಸಂದರ್ಭದಲ್ಲಿ ನಂದಾದೀವಿಗೆಗೆ ಎಣ್ಣೆಯನ್ನು ದಾನ ಮಾಡುವ ಉಲ್ಲೇಖ ಸಾಮಾನ್ಯವಾಗಿ ಬರುತ್ತದೆ. ಅಂದರೆ ಈ ದೇವಾಲಯಗಳಲ್ಲಿ ಎಣ್ಣೆ ದೀಪವನ್ನು ಉರಿಸಲಿಕ್ಕಾಗಿ ಯಾವಾಗಲೂ ಬೇಕಾಗುತ್ತಿತ್ತು. ಇಂಥ ಎಣ್ಣೆಯನ್ನು ಸೊಂಟಿಗೆಯ ಲೆಕ್ಕದಲ್ಲೋ, ಗಾಣದ ಲೆಕ್ಕದಲ್ಲೋ ನಿಶ್ಚಿತಪಡಿಸಿ ದಾನಮಾಡುತ್ತಿದ್ದರು. ಇದು ಧರ್ಮ ಮತ್ತು ಪುಣ್ಯ ಸಂಪಾದನೆಗೆ ಸಂಬಂಧಪಟ್ಟ ವಿಷಯ. ಈ ಎಣ್ಣೆಯನ್ನು ಕರ್ನಾಟಕದ ಹಳ್ಳಿಹಳ್ಳಿಯಲ್ಲಿ ಇದ್ದ ಸಹಸ್ರಾರು ದೇವಾಲಯಗಳಿಗೆ ಅವಿರತವಾಗಿ ಪೂರೈಸುತ್ತಿದ್ದ ಜನರೇ ತೆಲ್ಲಿಗರು.

ಇವರನ್ನು ಶಾಸನಗಳಲ್ಲಿ ತೆಲ್ಲಿಗರು[88], ಗಾಣಿಗರು[89], ತೆಲ್ಲಿಗರೈವತ್ತೊಕ್ಕಲು[90] ಎಂದೆಲ್ಲ ಸೂಚಿಸಲಾಗುತ್ತದೆ ಹಾಗೂ ಕೆಲವು ಶಾಸನಗಳಲ್ಲಿ[91] ಈ ಕುಲಕ್ಕೆ ಸೇರಿದ ವ್ಯಕ್ತಿಗಳು ದಾನ ಕೊಡುವುದೋ, ಇಲ್ಲ ದಾನದಲ್ಲಿ

ಭಾಗಿಗಳಾಗುವುದೋ ಕಂಡುಬರುತ್ತದೆ. ಹಳೆ ಮೈಸೂರಿನ ಭಾಗಗಳಲ್ಲಿ (ಚಾಮರಾಜನಗರ, ಗುಂಡ್ಲುಪೇಟೆ, ಹುಣಸೂರು, ಟಿ. ನರಸೀಪುರ, ಪಿರಿಯಾಪಟ್ಟಣ, ಮೈಸೂರು, ಕೊಳ್ಳೆಗಾಲ, ನಂಜನಗೂಡು) ಮಧ್ಯಕಾಲದ ಅನೇಕ ಕಲ್ಲುಗಾಣಗಳ ಮೇಲೆ ಕೂಡ ಇವರನ್ನು ಉಲ್ಲೇಖಿಸುವ ಶಾಸನಗಳು ಕಂಡುಬರುತ್ತವೆ.

ತೆಲ್ಲಿಗರ ಸಮಾಜದ ಕುರಿತು ನಮಗೆ ಸಿಗುವ ಮಾಹಿತಿಗಳಲ್ಲಿ ಅವರು ತಮ್ಮನ್ನು ತೆಲ್ಲಿಗ ಕುಲ ಎಂದು ಬಣ್ಣಿಸಿಕೊಂಡ ಸಂದರ್ಭಗಳು ಇವೆ. ಉದಾ : ಕಲ್ಲಂಗೆರೆಯ ಶಾಸನದಲ್ಲಿ[92] ಆ ಊರಿನಲ್ಲಿ ತೆಲ್ಲಿಗರ ಜಕ್ಕವೆ ಕಟ್ಟಿದ ಗ್ರಾಮೇಶ್ವರ ದೇವರ ಗುಡಿಯನ್ನು 'ತೆಲ್ಲಿಗರ ಕುಲಕೆ ಕಳಶ' ಎಂದು ವರ್ಣಿಸಲಾಗಿದೆ. ಬಹುಶಃ ತೆಲ್ಲಿಗರು ತಮ್ಮ ವಸತಿಗಳಲ್ಲಿ ಕಟ್ಟಿಸುತ್ತಿದ್ದ ದೇವಾಲಯಗಳು ತೆಲ್ಲಿಗ ಸಮುದಾಯಕ್ಕೆ ಸಂಬಂಧಿಸಿ ಇದ್ದವು. ಇದೇ ನಿಟ್ಟಿನಲ್ಲಿ ಅನೇಕ ಉದಾಹರಣೆಗಳಲ್ಲಿ ಬರುವ ತೆಲ್ಲಿಗೇಶ್ವರ [93] ದೇವಾಲಯಗಳನ್ನು ಗ್ರಹಿಸಬಹುದು. ಈ ತೆಲ್ಲಿಗೇಶ್ವರ ದೇವರು ಹೆಸರೇ ಸೂಚಿಸುವಂತೆ ತೆಲ್ಲಿಗರ ದೇವರಾಗಿತ್ತು ಹಾಗೂ ಒಂದು ವಸತಿಯ ತೆಲ್ಲಿಗರ ಒಕ್ಕಲುಗಳು ಸಾಮೂಹಿಕವಾಗಿ ದೇವಸ್ಥಾನ ನಿರ್ಮಾಣದಾನಕಾರ್ಯದಲ್ಲಿ ತೊಡಗಿಸಿಕೊಂಡಿದ್ದು ಅಷ್ಟೆ ಅಲ್ಲ ಈ ದೇವಾಲಯಗಳು ತೆಲ್ಲಿಗ ಕೇರಿಯೊಳಗೆ ಇರುತ್ತಿದ್ದವು.

ಕೊಪ್ಪಳ ಜಿಲ್ಲೆಯ ಒಂದು ಶಾಸನದಲ್ಲಿ[94] ತೆಲ್ಲಿಗರ ಕೇರಿಯ ಒಳಗಿರುವ ದೇವರನ್ನು ಉಲ್ಲೇಖಿಸಲಾಗಿದೆ. ಈ ತೆಲ್ಲಿಗ ಕುಲಕ್ಕೆ ಸೇರಿದ ಜನರು ಅವರದೇ ಪ್ರತ್ಯೇಕ ಕೇರಿಗಳಲ್ಲಿ ಇರುತ್ತಿದ್ದುದು ಕೂಡ ಈಗಾಗಲೇ ತಿಳಿದ ವಿಷಯ. ಉದಾ: ಬೇಲೂರಿನ ಒಂದು ಶಾಸನ [95] ಹಿರಿಯ ತೆಲ್ಲಿಗಗೇರಿ ಕಿಱು ತೆಲ್ಲಿಗಗೇರಿ ಎಂದು ಉಲ್ಲೇಖಿಸುವುದರಿಂದ ಒಂದು ಊರಿನಲ್ಲಿ ತೆಲ್ಲಿಗರ ಎರಡು ಅಥವಾ ಅದಕ್ಕೂ ಹೆಚ್ಚು ಪ್ರತ್ಯೇಕ ತೆಲ್ಲಿಗಗೇರಿಗಳಿದ್ದಿರಲೂಬಹುದು. ಬಹುಶಃ ಇಲ್ಲಿ ಹಿರಿಯ ತೆಲ್ಲಿಗಗೇರಿ ಎಂಬುದು ಎತ್ತುಗಾಣಗಳಿದ್ದವರ ಕೇರಿಯಾಗಿದ್ದು, ಕಿಱುತೆಲ್ಲಿಗಗೇರಿ ಎಂಬುದು ಕೈಗಾಣ ಮತ್ತು ಮೆಟ್ಟುಗಾಣಗಳಿರುವವರ ಕೇರಿಯಾಗಿರಬಹುದು. ಆದರೆ ಎಲ್ಲಿಯೂ ಶಾಸನಾಧಾರವಿಲ್ಲ.

ತೆಲ್ಲಿಗರ ಕೇರಿಯಲ್ಲಿ ಇರುತ್ತಿದ್ದ ತೆಲ್ಲಿಗರನ್ನು ಒಕ್ಕಲುಗಳೆಂದು ಕರೆಯಲಾಗಿದೆ. ಇಲ್ಲಿ ಒಕ್ಕಲುಗಳು ಎಂಬ ಶಬ್ದ ಗಾಣದಿಂದ ಎಣ್ಣೆ ತೆಗೆಯುವ ಕೆಲಸ ಮಾಡುತ್ತಿದ್ದ ತೆಲ್ಲಿಗರನ್ನು ಸೂಚಿಸುತ್ತವೆ ಎಂಬುದು ಗಾಣದರುವತ್ತೊಕ್ಕಲುಗಳು[96] ಮುಂತಾದ ಪ್ರಯೋಗಗಳಿಂದ ಗೊತ್ತಾಗುತ್ತದೆ. ಬೇಲೂರಿನ ಒಂದು ಶಾಸನ ಮೆಟ್ಟುಗಾಣದೊಕ್ಕಲೈವತ್ತು[97] ಎಂದು ಉಲ್ಲೇಖಿಸುವುದರಿಂದ ಮೆಟ್ಟುಗಾಣದವರವೆ ಐವತ್ತು ಒಕ್ಕಲುಗಳಿದ್ದುದು ಸ್ಪಷ್ಟವಾಗುತ್ತದೆ. ಆದರೆ ನಮಗೆ

ಕೈಗಾಣದೊಕ್ಕಲೈವತ್ತು ಎಂದಾಗಲಿ, ಎತ್ತುಗಾಣದೊಕ್ಕಲೈವತ್ತು ಎಂದಾಗಲಿ ಶಾಸನಗಳು ಪ್ರತ್ಯೇಕವಾಗಿ ಉಲ್ಲೇಖಿಸದಿದ್ದು ಈ ಶಾಸನ ಮೆಟ್ಟುಗಾಣದೊಕ್ಕಲೈವತ್ತು ಎಂದು ಉಲ್ಲೇಖಿಸಿರುವುದು ಈ ಶಾಸನದ ವಿಶೇಷ. ಅಂದರೆ ಇಲ್ಲಿ ತೆಲ್ಲಿಗರ ಎಲ್ಲಾ ಸದಸ್ಯರನ್ನು ಒಕ್ಕಲುಗಳೆಂದು ಕರೆದ ಸಾಧ್ಯತೆಗಿಂತ ಗಾಣವನ್ನು ಹೊಂದಿದ ತೆಲ್ಲಿಗರನ್ನು ಮಾತ್ರ ಈ ಒಕ್ಕಲುಗಳು ಎಂಬ ಶಬ್ದ ಸೂಚಿಸಿರುವ ಸಾಧ್ಯತೆ ಹೆಚ್ಚು. ಹಾಗಾಗಿ ಐವತ್ತು ಎಂಬ ಸಂಖ್ಯೆಯು ಎಷ್ಟೇ ರೂಢಿಯ ಬಳಕೆಯದಾಗಿದ್ದರೂ ಗಾಣಗಳ ಒಡೆಯರನ್ನು ಒಟ್ಟಾರೆಯಾಗಿ ಸೂಚಿಸುತ್ತಿದ್ದವು ಎಂದು ತೀರ್ಮಾನಿಸಬಹುದು. ತೆಲ್ಲಿಗರೈವತ್ತೊಕ್ಕಲು ಎಂಬ ಶಬ್ದ ಈ ಕಾಲದ ಶಾಸನಗಳಲ್ಲಿ ಸಾಂಪ್ರದಾಯಿಕವಾಗಿ ಪ್ರಯೋಗವಾಗುತ್ತದೆ. ಹಾಗಾಗಿ ಈ ಪ್ರಯೋಗ ಇದ್ದಲ್ಲೆಲ್ಲ ಐವತ್ತೇ ಒಕ್ಕಲುಗಳಿದ್ದರೆ ಎಂಬ ಪ್ರಶ್ನೆ ಅಷ್ಟೊಂದು ಪ್ರಸ್ತುತವಾಗಲಾರದು. ಆದರೆ ತೆಲ್ಲಿಗರಿಪ್ಪತ್ತೊಕ್ಕಲು[98] ಐವತ್ತೊಕ್ಕಲು[99], ಅರುವತ್ತೊಕ್ಕಲು[100], ತೆಲ್ಲಿಗನೂರ್ಱೆಪ್ಪತ್ತದಿಂಬರುಂ[101], ಸಾಯಿರೊಕ್ಕಲು[102] ಮುಂತಾದ ಉಲ್ಲೇಖಗಳು ಕೆಲವೊಮ್ಮೆ ಬರುವುದರಿಂದ ಆಯಾ ವಸತಿಯಲ್ಲಿ ತೆಲ್ಲಿಗರು ರಚಿಸಿಕೊಂಡ ಸಂಘಟನೆಯ ಸದಸ್ಯತ್ವವನ್ನು ಇದು ನಿರ್ದಿಷ್ಟವಾಗಿ ಸೂಚಿಸಿದಂತೆ ತೋರುತ್ತದೆ. ಹಾಗಾಗಿ ತೆಲ್ಲಿಗರೈವತ್ತೊಕ್ಕಲು ಎನ್ನುವುದು ಒಂದು ಮಂಡಳಿಯಂತೆ ಇದ್ದು ಗಾಣದ ಒಡೆಯರು ಐವತ್ತು ಮಂದಿ ಅದರ ಸದಸ್ಯರಾಗಿದ್ದ ಸಾಧ್ಯತೆ ಇದೆ. ಕೆಲವೊಮ್ಮೆ ಎಣ್ಣೆಯನ್ನು ದಾನ ಬಿಡುವಾಗ ಮೂರೊಕ್ಕಲ ಗಾಣದೆಱೆ[103] ಎಂದು ನಿರ್ದಿಷ್ಟವಾಗಿ ಹೆಸರಿಸುವುದರಿಂದ ಇಲ್ಲಿ ಒಕ್ಕಲುಗಳೆಂದರೆ ಗಾಣವನ್ನಾಡಿಸುವವರು ಎಂಬ ಅರ್ಥ ಬರುತ್ತದೆ. ಹಾಗಾಗಿ ಇಲ್ಲಿ ಒಕ್ಕಲು ಎಂಬ ಶಬ್ದ ಗಾಣವನ್ನಾಡಿಸುವವ ಅಥವಾ ಹೊಂದಿದವ ಎಂದು ತಿಳಿಯಬಹುದು. ಬಾಳೂರು ಶಾಸನ [104] ವೊಂದು ಸೋಮೇಶ್ವರ ದೇವರ ನನ್ದಾದೀವಿಗೆಗೆ ಅಯ್ವತ್ತೊಕ್ಕಲ ತೆಲ್ಲಿಗಸೆಟ್ಟಿಗಳೆಲ್ಲರು ಸೊಟಿಗೆಯೆಣ್ಣೆಯನ್ನು ಧರ್ಮಕ್ಕೆ ಕೊಟ್ಟಿರುವ ವಿಷಯವನ್ನು ತಿಳಿಸುವುದರಿಂದ ಕೆಲವೊಮ್ಮೆ ಸೆಟ್ಟಿಗಳನ್ನು ಕೂಡ ಒಕ್ಕಲು ಎಂದು ಕರೆದ ಉದಾಹರಣೆ ಇದೆ. ನಮಗೆ 12ನೇ ಶತಮಾನದ ಹೊತ್ತಿಗೆ ತೆಲ್ಲಿಗಸೆಟ್ಟಿಗಳಿದ್ದ ವಿಚಾರ ಮೇಲಿನ ಶಾಸನದಿಂದ ತಿಳಿಯುವುದರಿಂದ 13ನೇ ಶತಮಾನದ ನಂತರವೇ ತೆಲ್ಲಿಗರು ತಮ್ಮನ್ನು ಸೆಟ್ಟಿಗಳೆಂದು ಕರೆದುಕೊಂಡರು[105] ಎಂಬ ಮಾತು ಪ್ರಸ್ತುತ ಶಾಸನದಿಂದ ಸಮಂಜಸವೆನಿಸಲಾರದು. ಒಕ್ಕಲುಗಳಲ್ಲೇ ಕಿರಿ ಒಕ್ಕಲು ಎಂಬ ಶಬ್ದ ಕೂಡ ಬರುತ್ತದೆ.

ಮುಳುಗುಂದ ಶಾಸನವೊಂದು [106] ತೆಲ್ಲಿಗರು ತೆಲ್ಲಿಗೇಶ್ವರ ದೇವರಿಗೆ ಬಿಟ್ಟ ವಿವಿಧ ದಾನಗಳನ್ನು ಉಲ್ಲೇಖಿಸುತ್ತ 'ಬಳದ ಸಾಮ್ಯದ ಐವತ್ತೊಕ್ಕಲ ಮನೆಯಲು ಮದುವೆಯಾದಡೆ ಗಂಡಿಂಗೆ ಹಣ ೧ ಹೆಣ್ಣಿಗೆ ಹಣ ೧' ಎಂದು

ನಿರ್ದಿಷ್ಟಪಡಿಸುತ್ತದೆ. ಈ ರೀತಿ ತಮ್ಮ ಕುಲದ ಎಲ್ಲಾ ಸದಸ್ಯರ ಮೇಲೆ ಕಟ್ಟಳೆಯನ್ನು ವಿಧಿಸುವ ಅಧಿಕಾರವನ್ನು ತೆಲ್ಲಿಗ ಸಂಘಟನೆ ಹೊಂದಿತ್ತು ಹಾಗೂ ಇದೇ ಶಾಸನದಲ್ಲೇ ತೆಲ್ಲಿಗೇಶ್ವರ ದೇವಸ್ಥಾನವನ್ನು ಕಟ್ಟಿಸಿ ಅದಕ್ಕೆ ತೆಲ್ಲಿಗ ಒಕ್ಕಲುಗಳೆಲ್ಲ ಪ್ರತಿ ಉತ್ಸವಕ್ಕೂ ಒಂದೊಂದು ಹಾಗವನ್ನು ವಿಧಿಸಲಾಗಿದೆ ಹಾಗೂ ನಂದಾದೀವಿಗೆಗೆ ಎಣ್ಣೆಯನ್ನು ನೀಡುವಂತೆ ವಿಧಿಸಲಾಗಿದೆ. ಈ ಉದಾಹರಣೆಯಲ್ಲಿ ತೆಲ್ಲಿಗೇಶ್ವರ ದೇವಸ್ಥಾನವನ್ನು ತೆಲ್ಲಿಗ ಸಮುದಾಯವೂ ನಿರ್ವಹಿಸುವ ಹೊಣೆಯನ್ನು ಹೊತ್ತಿರುವುದು ಕಂಡುಬರುತ್ತದೆ.

ತೆಲ್ಲಿಗರಲ್ಲಿ ಗಾಣವಾಡಿಸುವವರನ್ನು ಗೌಡ [107], ಗಾವುಂಡ [108] ಅಥವಾ ಗೌಂಡ ಎಂದು ಸೂಚಿಸುವ ರೂಢಿ ಇದ್ದದ್ದನ್ನು ನಾವು ಶಾಸನಗಳಲ್ಲಿ ನೋಡುತ್ತೇವೆ. ಬೇಲೂರಿನ ಒಂದು ಶಾಸನದಲ್ಲಿ[109] ಇಂಥವರನ್ನು ತೆಲ್ಲಿಗಗವುಂಡುಗಳು ಎಂದು ಕರೆಯುತ್ತಾರೆ. ಇವರಲ್ಲಿ ದೇವಗೌಂಡ, ಮಂಟಬಮ್ಮಗೌಂಡ ಮುಂತಾದ ಹೆಸರುಗಳು ಬರುತ್ತವೆ. ಜೊತೆಗೆ ಭೋಕಿಯ ನಾಯಕ, ಸಾವನ್ತನ ಮಗ ಬಮ್ಮಗೌಂಡ ಮುಂತಾದ ಪ್ರಯೋಗಗಳು ಈ ತೆಲ್ಲಿಗ ಒಕ್ಕಲುಗಳ ಸಮುದಾಯದ ಆಂತರಿಕ ವೈವಿಧ್ಯತೆಯನ್ನು ಸೂಚಿಸುತ್ತದೆ. ಇಂಥ ತೆಲ್ಲಿಗ ಗೌಂಡರ ಉಲ್ಲೇಖ ಇನ್ನೂ ಬೇರೆಡೆಯಲ್ಲೂ ಸಿಗುತ್ತದೆ.

ನಾಯಕ ಸಾವಂತ ಮುಂತಾದ ಅಂತ್ಯ ಪದಗಳು ಯೋಧವೃತ್ತಿಯವರ ಬಿರುದುಗಳಾಗಿದ್ದುದು ಗಮನ ಸೆಳೆಯುತ್ತದೆ. ಬಹುಶಃ ತೆಲ್ಲಿಗ ಸಮುದಾಯದಲ್ಲೇ ಕೆಲವರು ಯೋಧವೃತ್ತಿಯನ್ನು ಆಶ್ರಯಿಸಿದ ಸಾಧ್ಯತೆ ಇದೆ. ಇದು ನಮಗೆ ಅರಸೀಕೆರೆಯ ಶಾಸನ [110]ವೊಂದರಿಂದ ಗೊತ್ತಾಗುತ್ತದೆ. ಈ ಶಾಸನವು 'ಸಿಂಗನ ದಾಳಿ ಬಂದಡೆ ... ಸಲಶಿಯ .. ದ್ರಿಕೆ ಯೆಳವರೆಯ ತೆಲ್ಲಿಗ ಮಲೆಯ ನಾಯಕನ ಮಗ ...... ಬವರದ .... ಡಿ ಮೆಚ್ಚಲು ಕಾದಿ ಸುರಲೋಕ ಪ್ರಾಪ್ತನಾದನು' ಎಂದು ಉಲ್ಲೇಖಿಸುತ್ತದೆ. ಅಂದರೆ ಮಲೆಯ ನಾಯಕನ ಮಗನು ತನ್ನ ರಾಜ್ಯ ರಕ್ಷಣೆಯನ್ನು ಮಾಡಲು ಹೋಗಿ ಯುದ್ಧದಲ್ಲಿ ತಾನೇ ಪ್ರಾಣವನ್ನು ಕಳೆದುಕೊಂಡ ವಿಷಯವನ್ನು ಇದು ತಿಳಿಸುತ್ತದೆ. ತಂದೆಯಾದ ತೆಲ್ಲಿಗ ಮಲೆಯ ನಾಯಕ ತನ್ನ ಮಗನ ಹೆಸರಿನಲ್ಲಿ ಒಂದು ವೀರಗಲ್ಲನ್ನು ನಿಲ್ಲಿಸುತ್ತಾನೆ. ಇದು ತೆಲ್ಲಿಗರಲ್ಲಿ ಯೋಧವೃತ್ತಿಯನ್ನು ಮಾಡುತ್ತಿದ್ದವರಿದ್ದರೆಂಬುದನ್ನು ಸ್ಪಷ್ಟಪಡಿಸುತ್ತದೆ. ಈ ಯೋಧ ವೃತ್ತಿಯನ್ನು ಅವರು ತೆಲ್ಲಿಗರ ಸಂಘಟನೆಗಾಗಿ ಕೈಗೊಳ್ಳುತ್ತಿದ್ದರೋ ಅಥವಾ ರಾಜ್ಯದ ಸೈನ್ಯದಲ್ಲಿ ತಾತ್ಕಾಲಿಕ ಸೇವೆಯನ್ನು ಮಾಡುತ್ತಿದ್ದರೋ ಸ್ಪಷ್ಟವಾಗುವುದಿಲ್ಲ.

**ಗಾಣದ ಕಲ್ಲಿನ ಶಾಸನಗಳು**

ಹಳೆ ಮೈಸೂರು ಭಾಗದಲ್ಲಿ ಸುಮಾರು ಇಪ್ಪತ್ತೈದು ಶಾಸನಗಳು ಕಲ್ಲಿನ ಗಾಣದ ಮೇಲೆ ಇವೆ. ಆ ಕಲ್ಲುಗಾಣವನ್ನು ಮಾಡಿಸಿದ ವ್ಯಕ್ತಿಗಳ ಹೆಸರುಗಳನ್ನೂ[111], ನಂದಾದೀವಿಗೆಗೆ ಎಣ್ಣೆಯನ್ನು ಕೊಡುವ ಕುರಿತಾಗಿಯೂ[112], ಅಪ್ಪ ಸತ್ತಲ್ಲಿ ಮಗ ಅಥವಾ ಬೇರೆಯವರು ಧರ್ಮಕಾರ್ಯಕ್ಕಾಗಿ ದೇವಾಲಯಕ್ಕೆ ದಾನ ಕೊಟ್ಟ ವಿಷಯವನ್ನೋ[113], ಹೀಗೆ ಮೊದಲಾದ ವಿಷಯಗಳ ಕುರಿತು ಗಾಣದ ಮೇಲೆ ಶಾಸನ ಉಲ್ಲೇಖಗಳಿವೆ. ಚಾಮರಾಜನಗರದ ಐದು ಶಾಸನಗಳು, ಗುಂಡ್ಲುಪೇಟೆಯ ಮೂರು ಶಾಸನಗಳು, ಹುಣಸೂರು, ಟೀ ನರಸೀಪುರ, ಮೈಸೂರುಗಳ ತಲಾ ಎರಡು ಶಾಸನಗಳು, ನಂಜನಗೂಡು, ಹೆಗ್ಗಡೆದೇವನ ಕೋಟೆ, ಕೊಳ್ಳೇಗಾಲ, ಪಿರಿಯಾ ಪಟ್ಟಣಗಳ ತಲಾ ಒಂದೊಂದು ಶಾಸನಗಳು ಕಲ್ಲಿನ ಗಾಣದ ಮೇಲಿನ ಶಾಸನಗಳಾಗಿವೆ. ಇಂತಹದ್ದೇ ಒಂದು ಕಲ್ಲಿನ ಗಾಣವನ್ನು ನಾವು ಇಂದಿಗೂ ವಾಜಮಂಗಲದಲ್ಲಿ ಕಾಣಬಹುದು. (ಫೋಟೋವನ್ನು ಗಮನಿಸಿ). ಈ ಕಲ್ಲಿನ ಗಾಣವನ್ನು ಕ್ರಿ.ಶ. 1277ರಲ್ಲಿ ವೀರನಾರಸಿಂಗದೇವ ಆಳುತ್ತಿದ್ದಾಗ ಒಜಮಂಗ(ಲ)ದ ರಾಜಮಂಣಗೌಡನ ಮಗ ಮರುಗೌಡನ ಮಗ ಅಂಕಗೌಡನ ಮಗ ಮುದ್ದಗೌಡನ ಮಕ್ಕಳು ಬೀರಗೌಡ ಮಾದಿಗೌಡ ಅಂಕಗೌಡ ಯೀ ಮೂವರೂ ಮಾಡಿಸಿದ ಗಾಣ ಎಂದು ಉಲ್ಲೇಖವಿದೆ.

## 2.8. ಶಿಲ್ಪಿಗಳು

ಇವರು ಸಾಮಾನ್ಯವಾಗಿ ತಮ್ಮ ಮೂಲ ಪುರುಷ ವಿಶ್ವಕರ್ಮನೆಂದು ಹೇಳಿಕೊಳ್ಳುತ್ತಾರೆ. ವಾಸ್ತುವಿದ್ಯೆ, ಶಿಲ್ಪ, ಲೋಹವಿಗ್ರಹಗಳ ಕೆತ್ತನೆ (=ಕಾಂಸ ವಿದ್ಯೆ), ಪತ್ರಚ್ಛೇದಾದಿ ಕುಶಲಕಲೆಗಳಲ್ಲಿ ಇವರು ನಿಷ್ಣಾತರಾಗಿದ್ದರು. ಇವರು ಚಿತ್ರಕಲೆಯಲ್ಲಿಯೂ ನಿಷ್ಣಾತರಾಗಿದ್ದರು. ಒಂದು ಶಾಸನದಲ್ಲಂತೂ ಚಿತ್ರಕಲೆಯೇ ಎಲ್ಲ ಕಲೆಗೂ ಮೂಲಭೂತವಾದ ಕಲೆ ಎಂದು ಹೇಳಿದೆ ('ಸರ್ವ ಕಲಾಧಾರಭೂತ ಚಿತ್ರಕಲಾಭಿಜ್ಞೇಯ ವಿಶ್ವಕರ್ಮಾಚಾರ್ಯೇಣ .... '). ಇವರು ತಮ್ಮನ್ನು 'ಸರಸ್ವತಿ ಗಣದಾಸಿ'ಗಳೆಂದು ಕರೆದುಕೊಳ್ಳುತ್ತಾರೆ. 'ಸರಸತಿ ಗಣ ಮಿತ್ರ'ರೆಂದು ಕರೆದುಕೊಂಡಿರುವುದುಂಟು. ಈ ವಿನಯದ ಜೊತೆಗೆ ತಮ್ಮ ಮತ್ತು ತಮ್ಮ ಕಲೆಯ ವಿಷಯದಲ್ಲಿ ಅವರಿಗೆ ಆತ್ಮಾಭಿಮಾನವೂ ಹೆಮ್ಮೆಯೂ ಇದ್ದಿತು. ಈ ವಿಶೇಷಣಗಳನ್ನು ನೋಡಿದರೆ ಇದು ಸ್ಪಷ್ಟವಾಗುತ್ತದೆ. - 'ಮಲವರ ಗಂಡ ಬಿರುದರೂವಾರಿಗಿರಿ ವಜ್ರದಂಡ ರೂವಾರಿ ಕಾಳಿದಾಸಿ ಗೆಯ್ದ ಮಕರ ತೋರಣ', 'ಬಳ್ಳಿಗ್ರಾಮೆಯ ರೂವಾರಿ ದಾಸೋಜ ಬಿರುದರ ಬಡಿವಗೊಂದಳ

ಬಡಿವ', 'ಸರಸ್ವತೀ ಗಣದಾಸಿ ಮಚ್ಚರಿಪರು (ರ) ವಾದಿಸ್ವ(ಶ)ರಭ ಭೇರುಂಡ' - ಇದನ್ನು ನೋಡಿದರೆ ಅವರವರಲ್ಲಿಯೇ ತೀವ್ರವಾದ ಸ್ಪರ್ಧೆಯಿದ್ದಿತೆಂದು ಊಹಿಸಬಹುದು ಎಂದು ಡಾ. ಎಂ. ಚಿದಾನಂದಮೂರ್ತಿಯವರು ಅಭಿಪ್ರಾಯಿಸುತ್ತಾರೆ.[114]

ಶಿಲ್ಪಿಗಳ ಕಲೆಯು ತಲೆಯಿಂದ ತಲೆಗೆ, ತಂದೆಯಿಂದ ಮಗನಿಗೆ ಹರಿದು ಕೊಂಡು ಬರುತ್ತಿದ್ದಿತು. ಒಂದೇ ದೇವಸ್ಥಾನದ ರಚನೆಯಲ್ಲಿ ತಂದೆ ಮಕ್ಕಳಿಬ್ಬರೂ ನಿಯುಕ್ತರಾಗಿದ್ದುದು ಕಂಡುಬರುತ್ತದೆ.[115] ಆದರೂ ಶಿಲ್ಪದಲ್ಲಿ ಪರಿಣಿತರ ಬಳಿಗೆ ವಿದ್ಯಾರ್ಥಿಗಳು ಶಿಷ್ಯವೃತ್ತಿಯನ್ನವಲಂಬಿಸಿ ಬರುತ್ತಿದ್ದುದರ ಸೂಚನೆಗಳಿವೆ. ಮಾಚೋಜ ಎಂಬ ಶಿಲ್ಪಿಯನ್ನು 'ಕಲುಕಣಿನಾಡ ಆಚಾರ್ಯ'[116] ಎಂದು ಕರೆದಿರುವುದೂ, ಇನ್ನೊಂದೆಡೆ ಒಬ್ಬ ಶಿಲ್ಪಿಯು ತಾನು 'ನಾಗವರ್ಮನ ಶಿಷ್ಯ'ನೆಂದು ಕರೆದುಕೊಂಡಿರುವುದು[117] ಮೇಲಿನ ಊಹೆಗೆ ಆಧಾರಗಳಾಗಿವೆ.

ಈ ಶಿಲ್ಪಿಗಳಲ್ಲೇ ಅವರ ನೈಪುಣ್ಯತೆಯ ಆಧಾರದ ಮೇಲೆ ಅವರನ್ನು ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತಿತ್ತು. ಅವರು ನಿರ್ವಹಿಸುತ್ತಿದ್ದ ಕೆಲಸಗಳು ಸಹ ಕೆಲವೊಮ್ಮೆ ವಿಭಿನ್ನವಾಗಿದ್ದವು.

**ರೂವಾರಿ**

ಕನ್ನಡ ಪದವಾದ 'ರೂವಾರಿ' ಎಂಬುದು ಸಂಸ್ಕೃತದ 'ರೂಪಕಾರ' ಎಂಬ ಪದದಿಂದ ಬಂದಿದೆ. **Rupakara means a sculptor or maker of rūpa (images)** ಇಲ್ಲಿ ಶಿಲ್ಪಿ ಎಂದು ಸಹ ಬಳಸಲಾಗುತ್ತದೆ. **The terms Śilpin, Śilpi or Śilpika meaning an 'artificer, artisan, craftsman or artist' are also used and as such are the makers of Śilpa or works of art. The non-specialist term Śilpin is significant, since he was both an artist and a craftsman who was variously employed to build temples and carve images.**

ಅನೇಕ ಶಾಸನಾಧಾರಗಳ ಮೂಲಕ ಶಿಲ್ಪಿಗಳು ತಮ್ಮನ್ನು ರೂವಾರಿಗಳೆಂದು ಕರೆದುಕೊಂಡಿರುವುದನ್ನು ಕಾಣಬಹುದು.

*'ಬಿರುದ ರೂವಾರಿ ಮುಖತಿಳಕಂ ಗಂಗಾಚಾರಿ ಖಣ್ಡರಿಸಿದಂ'*[118]

*'ರೂವಾರಿ ಹೊಯ್ಸಳಾಚಾರಿಯ ಮಗಂ ವರ್ದ್ಧಮಾನಾಚಾರಿ ಬಿರುದ ರೂವಾರಿ ಮುಖತಿಳಕಂ ಕಣ್ಡರಿಸಿದ'*[119]

*'ಬಿರುದ ರೂವಾರಿ ಮುಖತಿಳಕಂ ವರ್ದ್ಧಮಾನಚಾರಿ ಖಂಡರಿಸಿದಂ'*[120]

*'ಕಂಡಳಿಸಿದ ರೂವಾರಿ ಬಯಿಚೋಜ ಶ್ರೀ ಶ್ರೀ ಶ್ರೀ'*[121]

*'ರೂವಾರಿ ರಾಮೋಜನ ಕೆಲಸ'*[122]

*'ರೂವಾರಿ ಆದಿತ್ಯಾಚಾರಿಯ ಮಗ ಪಾಂಡ್ಯಾಚಾರಿಯ ಬೆಸ'*[123]

*'ರೂವಾರಿ ಮಾರೋಜನ ಮಗ ಬಮ್ಮಯನ ಸಿಳಾ ಲಿಕಿತ'*[124]

*'ರೂವಾರಿ ಪೆಮ್ಮಿಓಜ ಮಸಣೋಜ'* [125]

*'ಬಿರುದ ಕಂಡರಣೆಕಾಜಿ ಕೋಳಾಹಳಂ ರೂವಾರಿ ಮಲ್ಲೋಜನ ಕಂಡರಣೆ'*[126]

*'ಸರಸ್ವತೀಗಣಪುತ್ರ ಸುಮತಿಪಂಡಿತರ ಶಿಷ್ಯ ರೂವಾರಿ ಸೋಮೋಜನ ಪುತ್ರ ದುರ್ಗ್ಗಿಯನ ಬೆಸ'*[127]

*'ಅಗ್ಗಳೋಜನ ಮಗಂ ರೂವಾರಿ ಮಚ್ಚೋಜಂ ಬೆಸಗೆಯ್ದ'*[128]

*'ರೂವಾರಿ ಮಾದೆಯ ಹೊಯಿದ'*[129]

*'ರೂವಾರಿ ಚಟ್ಟೋಜನ ಕೆಲಸ'*[130]

**While, the terms Rūvāri, Ṡilpi and Ōja usually referred to sculptors, a number of other tems were applied to members of the artist community.**

## ಕಲ್ಕುಟಿಗ

ಶಾಸನಗಳಲ್ಲಿ ಕೆತ್ತುತ್ತಿದ್ದ ಶಿಲ್ಪಿಗಳನ್ನು ಕೆಲವು ಶಾಸನಗಳಲ್ಲಿ 'ಕಲ್ಕುಟಿಗ'ರೆಂದೂ ಕರೆದಿರುವುದುಂಟು. ನಾವು ಅನೇಕ ಶಾಸನಾಧಾರಗಳ ಮೂಲಕ ಕಲ್ಕುಟಿಕರಾದ ಶಿಲ್ಪಿಗಳನ್ನು ಗುರುತಿಸಬಹುದು.

*'ಕಲ್ಕುಟಿಕ ಮಲ್ಲೋಜಂಗೆ ಬಿಟ್ಟ ....'*[131]

*'ಯಿ ಕಲುವೆಸನವವ.. ಈ ಶಾಸನವ ಹೊಯಿದಾತನು ಕಲುಕುಟಿಗ ಜಡೆಯ ರಾಮೋಜನು'*[132]

*'ಕಲುಕುಟಿಗ ಸಿಗ್ಗೋಜ ಮಾಡಿದ ರೂವಾರ ಮಂಗಳ ಮಹಾ ಶ್ರೀ'*[133]

*'ಕಲುಕುಟಿಗ ಕ್ಷೇಮೋಜನ ಮಗ ಎಪ್ಪೋಜ ಕಣ್ಡರಿಸಿದ*
*ದೇಗುಲಮಂ ಮಾಡಿದ ಕಾಮೋಜ ಶ್ರೀ'*[134]

*'ಯಿ ಕಲ್ಲು ಕಡೆದಾತ ಸಂತೋಜ'*[135]

*'ಕಲುಕುಟಿಗ ನಜ್ಜಮ ಆಕ್ಕರಮಂ ಕಣ್ಡರಿಸಿದಂ'*[136]

*'ಕಲ್ಲಕಡಿದವ ಕಲುಕುಟಿಗ ಸಿಂಗೋಜ ಮಗ ಭೀರೋಜ ಮಂಗಳ ಮಹಾ'*[137]

*'ಯಿ ಕಲ್ಲ ಮಾಡಿದಾತ ಕಲ್ಲುಕುಟಿಗ ಸಿಂಗೋಜ ಮಗ ಬೀರೋಜ*
*ಆತನ ಬಿರುದು ಮಂಠಣೆಸುವರ ಗಂಟರಗಾಳ ಮತ್ಸ ಮತ್ಸ....*
*ರಿಸುವರ ಮಂಕಣಸೂಲ'*[138]

*'ಕಲುಕುಟಿಗ ಮಳೋಜ ಹೊಯ್ದ'* [139]

*'ಇ ಕಲ್ಲ ಪೊಯ್ದ ಕಲ್ಕುಟಿಗ ಆಕೋಜ'* [140]

ಈ ಎಲ್ಲ ಶಾಸನಗಳೋಲ್ಲೇಖಗಳನ್ನು ಗಮನಿಸಿದರೆ ಕಲ್ಲನ್ನು ಕಡಿಯುವ ಕೆಲಸದಲ್ಲಿ ಇವರು ನೈಪುಣ್ಯತೆಯನ್ನು ಪಡೆದಿರುವಂತೆ ತಿಳಿಯುತ್ತದೆ. ಇದರಿಂದಲೇ ಇವರಿಗೆ 'ಕಲ್ಕುಟಿಗ' ಅಥವಾ 'ಕಲ್ಕುಟಿಕ' ಎಂದು ಬಂದಿರಬಹುದೆಂದು ಅಭಿಪ್ರಾಯಪಡಬಹುದು.

**ಬಿನ್ನಾಣಿ**

ಶಿಲ್ಪಿಗಳಲ್ಲೇ ಮತ್ತೊಂದು ರೀತಿಯ ನೈಪುಣ್ಯತೆ ಪಡೆದ ಶಿಲ್ಪಿಗಳೆಂದರೆ ಬಿನ್ನಾಣಿಗಳು. ಇವರು ಚಿತ್ರಗಳನ್ನು ಅಥವಾ ಶಿಲ್ಪಗಳನ್ನು ಕೊರೆಯುವುದರಲ್ಲಿ ನೈಪುಣ್ಯತೆ ಪಡೆದವರು ಈ ಬಿನ್ನಾಣಿಗಳು.

'ಬಿನ್ನಾಣಿ' ಎಂಬ ಪದವು ಸಂಸ್ಕೃತದ 'ವಿಜ್ಞಾನಿ' ಪದದಿಂದ ಬಂದಿರಬಹುದೆಂದು ಕೆಲವೊಂದು ವಿದ್ವಾಂಸರು ಅಭಿಪ್ರಾಯಿಸಿದ್ದಾರೆ. ಈ ಕೆಳಗಿನ ಶಾಸನಾಧಾರಗಳ ಮೂಲಕ ಬಿನ್ನಾಣಿಗಳಾದ ಶಿಲ್ಪಿಗಳನ್ನು ಗುರುತಿಸಬಹುದು.

> *'ಯೀ ಕಲ್ಲಂ ಕಡಿದ ಬಿಂನಾಣಿ ಮಾರೋಜನ ತನೂಜ ಯದೋಜನು....'*[141]
> *'ಶ್ರೀಮತು ಹೊಯ್ಸಳ ಬಿಟ್ಟದೇವನ ವಿಜಯ ನಾರಾಯಣದೇವರ ಮಂಟ್ಟಪದ*
> *ಸಾಳಬಂದಿಕೆ ಮಾಡಿದ ಬಿನ್ನಾಣಿ। ಶ್ರೀಮತು ತ್ರಿಭುವನಮಲ್ಲದೇವರ ಬಿಂನ್ನಾಣಿ*
> *ಚಿನ್ನೋಜನ ಪುತ್ರ ಚಿಕ್ಕಹಂಪ್ಪ ಮಾಡಿದ ಮದನಮಚ್ಚರಿಪರೂವಾರಿಗಳಗಣ್ಡ॥'*[142]

ಇವರು ವಿಶೇಷ ಪರಿಣಿತಿಯನ್ನು ಪಡೆದಿರಬಹುದು. ಇದರಿಂದಲೇ ಇವರಿಗೆ ಬಿನ್ನಾಣಿಗಳೆಂದು ಕರೆದಿರಬಹುದೆಂದು ನನಗನ್ನಿಸುತ್ತದೆ.

**ಸೂತ್ರಧಾರಿ**

ನಾಟಕವು ಸೂತ್ರಧಾರಿಯನ್ನು ಬಿಟ್ಟು ಹೇಗೆ ನಡೆಯಲಾರದೋ ಹಾಗೆ ಶಿಲಾಕರ್ಮದಲ್ಲಿಯು ಸೂತ್ರಧಾರಿಯನ್ನು ಬಿಟ್ಟು ಕೆಲಸವು ನಡೆಯಲಾರದು. ಅಂಥಹ ಮುಖ್ಯ ಪಾತ್ರವನ್ನು ಈತನು ವಹಿಸಿದ್ದಾನೆ. Architects ಗಳಲ್ಲೇ ಈತನು Master Architect ಎಂದು ಹೇಳಬಹುದು.

ಈತನು ಶಿಲ್ಪಶಾಸ್ತ್ರ, ಗಣಿತ, ವಾಸ್ತುವಿದ್ಯೆ, ಚಿತ್ರಕಲೆ ಮೊದಲಾದ ವಿದ್ಯೆಗಳಲ್ಲಿ ಪರಿಣಿತಿ ಪಡೆದಿರಬೇಕಾಗುತ್ತದೆ. ಏಕೆಂದರೆ Architectural design ಮಾಡುವಾಗ ಅದನ್ನು Measurement ತೆಗೆದುಕೊಂಡೇ ಮಾಡಬೇಕಾಗುತ್ತದೆ. ಈ ರೀತಿಯಾಗಿ ಶಿಲ್ಪದ ಅಳತೆ ಮೊದಲಾದವು ಗೊತ್ತಿರಬೇಕಾದರೆ ಆತನು ಈ ಎಲ್ಲಾ ವಿದ್ಯೆಗಳಲ್ಲಿ ವಿಶೇಷವಾಗಿ ಪರಿಣಿತಿಯನ್ನು ಪಡೆದಿರಬೇಕಾಗುತ್ತದೆ.

The Sūtra-dhāri or Sūtra-grāhi "The holder of the thread" was the assistant of the Sthapati, "the master carpenter or master-mason", the architect.[143] Kundgol inscription has mentioned a gift of Kāḷojā, son of Bammōja who is called the Sūtradhāri of God Svayambhu. ಹೀಗೆ ಇವರಲ್ಲಿ[144] ಆಂತರಿಕ ವೈವಿಧ್ಯತೆ ಕಂಡುಬರುತ್ತದೆ.

ಸಾಮಾನ್ಯವಾಗಿ ರೂವಾರಿಗಳು ನಿರಕ್ಷರಿಗಳು. ಕಂಡರಣೆಯ ಕಾರ್ಯದಲ್ಲಿ 'ನ್ಯೂನಾಕ್ಷರಮಧಿಕಾಕ್ಷರಂ ವಾ ತತ್ಸರ್ವ್ವಂ ಪ್ರಮಾಣಮಿತಿ'[145] ಎಂದು ಪ್ರಾಂಜಲ ಪ್ರಜ್ಞೆಯನ್ನು ತೋರಿದರೂ ಇವರ ಅಜ್ಞತೆಯಿಂದಾಗಿ ಅಕ್ಷರ ಅಂದಗೆಡಲು, ಭಾಷೆ ದೋಷಗೊಳ್ಳಲು ಅವಕಾಶವಿದೆ. ಇವರಿಗೆ ಹೊರತಾಗಿ ಕೆಲವು ಅಕ್ಷರಜ್ಞ ರೂವಾರಿಗಳು ಲಿಪಿಕಾರನ ಕಾರ್ಯವನ್ನೂ ಮಾಡಿದ ಉದಾಹರಣೆಗಳಿವೆ.

*'ಹುಲಿಗೆಱಿಯ ಬಮ್ಮೋಜ ತಾನೆ ಬರೆದು ಕಂಡರಿಸಿದ ಸಾಸನ'*[146]
*'ಈ ಸಾಸನಕ್ಷರಮಂ ಬರೆದು ಪೊಯ್ದಂ ಧರ್ಮೋಜ.... '*[147]

ಇಂಥ ಅಕ್ಷರಜ್ಞರಿಂದಾಗಿ ಬರವಣಿಗೆ ಅಂದಗೊಂಡು, ಭಾಷೆ ಶುದ್ಧಗೊಂಡು, ಶಾಸನ ಅಚ್ಚುಕಟ್ಟುಗೊಳ್ಳುತ್ತದೆ. ಹೀಗೆ ರೂವಾರಿಗೆ ಬರವಣಿಗೆ ಗೊತ್ತಿದ್ದಷ್ಟು ಒಳ್ಳೆಯದು.

ಕೆಲವು ಶಿಲ್ಪಿಗಳ ಹೆಸರಿನ ಹಿಂದೆ 'ಸರಸ್ವತಿ' ಸೂಚಕ ಪದವನ್ನೊಳಗೊಂಡ ಉದ್ಧರಣೆಗಳು ಹೀಗೆ ಸಿಗುತ್ತವೆ.

*'ಶ್ರೀ ಸರಸ್ವತೀದೇವೀ ವರಪ್ರಸಾದಂ ಹೋದಲ ರಾಮೋಜನ ಮಗಂ ರೇವೋಜಂ ಹೊಯ್ದ ಸಾಸನ'*[148]
*'ಸರಸ್ವತೀ ಗಣದಾಸಿ ಬಮ್ಮೋಜ ಬೆಸಗೆಯ್ದ'*[149]
*'ಸರಸ್ವತೀಗಣದ ಸಿಭುಗೋಜನ ಪುತ್ರ ಇಕುಲೋಜ'*[150]
*'ಪುರಿಕರನಗರದ ಬಮ್ಮಂ ಸರಸ್ವತೀಗಣದ ದಾಸಿ ಕ[ಣ್ಡ].... '*[151]
*'ಸರಸ್ವತೀ ಗಣದಾಸಿ ಬೆಂಗೋಜನ ಪುತ್ರ ಇಕ್ಕುಡಾಚಾರಿ ... '*[152]
*'ಶಿಲ್ಪಿಕ ಲಲಾಟಪಟ್ಟಂ ಸರಸ್ವತೀಗಣ ಪಾದಪಂಕಜಭ್ರಮರಂ ಜಿನ ಪಾದಾ ರಾಧಕಂ ಪದ್ಮೋಜನ ಶಿಲ್ಪಿಕಾಕರ್ಮ್ಮ'*[153]
*'ಸರಸ್ವತೀಗಣಪುತ್ರ ಸುಮತಿ ಪಂಡಿತರ ಶಿಷ್ಯ ರೂವಾರಿ ಸೋಮೋಜನ ಪುತ್ರ ದುರ್ಗಯನ ಬೆಸ'*[154]
*'ಶ್ರೀ ಸರಸ್ವತೀಗಣಭಾತ್ರ ಶ್ರೀ ಮಲ್ಲಿಯಣ್ಣನ ಬರಪಂ।
ಖಂಣ್ಡರಿಸಿದನ್ನೋಜಂ'*[155]

ಇಲ್ಲಿಯ ಸರಸ್ವತೀ ಗಣ, ಸರಸ್ವತೀ ಗಣಪುತ್ರ, ಸರಸ್ವತೀಗಣ ಛಾತ್ರ ಎಂಬ ಪದಗಳು ಕವಿ, ಲಿಪಿಕಾರರನ್ನು ಬಿಟ್ಟು ರೂವಾರಿಗಳ ಹಿಂದೆ ಮಾತ್ರ ಬರುವುದರಿಂದ 'ಸರಸ್ವತೀ ಗಣ'ವೆಂಬುದು ರೂವಾರಿ ವಿಶಿಷ್ಟವೆನಿಸುತ್ತದೆ.

*ಶ್ರೀ ಸೋಡಲ ಭಕ್ತಿ ಮಹಾ ।*
*ಪ್ರಾಸಾದಪ್ರಾಳಿ ತನಗೆ ನಿಜವನೆ ನೆಗರ್ದ್ದಿ ।*
*ಭಾಸುರಯಶಂಖ್ಯ ರೋಜಂ ।*
*ಲೇಸೆನೆ ಶಾಸನಮನರ್ತ್ತಿಯಿಂ ಟಂಕಿಸಿದಂ ॥*[156]

ಎಂಬ ಕಂದದಲ್ಲಿ ರೂವಾರಿಯೊಬ್ಬನು 'ಅಸಂಖ್ಯರೋಜಂ' ಎಂದು ಕರೆದುಕೊಂಡುದು ಅಸಂಖ್ಯ ಶಿಷ್ಯಸಮುದಾಯಕ್ಕೆ ಆತನು ಗುರುವಾದುದನ್ನು ಸೂಚಿಸುತ್ತದೆ. 'ಪುರಿಕರ ನಗರದ ಬಮ್ಮಂ ಸರಸ್ವತೀಗಣದ ದಾಸಿಕ [ಣ್ಣ] .... ನಿರುತಯತಿ [ಸಟಂ] ಖಣ್ಡರಿಸಿದಂ ನಾಗವರ್ಮ್ಮನ ಚ್ಛಾತ್ರ[ಂ]'[157] ಎಂಬ ಹೇಳಿಕೆಯೂ ಇಂಥ ಗುರು-ಶಿಷ್ಯ ಪರಂಪರೆಯನ್ನು ಪುಷ್ಟಿಗೊಳಿಸುತ್ತದೆ.

*"ಗುಣಪಾ ... ರ್ಯ್ಯ ।*
*ಪ್ರಣೀತ ಶಾಸ್ತ್ರೋಕ್ತಿಯಿಂದೆ ಕಲುವೆಸನಂ ಲ ।*
*ಕ್ಷಣಯುಕ್ತಮಾಗಿರಲು ಧಾ ।*
*ರಣಿಯೊಳು ಗುಲುಗೋಜನಟಿವನೆಂದಳಿ ಪೊಗಳ್ಗುಂ ॥*[158]

ಎಂಬ ಶಾಸನ ಪದ್ಯದಲ್ಲಿ "ಗುಣಪಾ ... ರ್ಯ ಪ್ರಣೀತ ಶಾಸ್ತ್ರ" ಸಮ್ಮತವಾಗಿ ಕಲುಗೆಲಸವನ್ನು ಮಾಡುವವನೆಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ, ಗುಲುಗೋಜ. "ಈ ಪದ್ಯದಿಂದ ವಾಸ್ತುಶಿಲ್ಪವನ್ನು ಕುರಿತ ಪ್ರಸಿದ್ಧ ಶಾಸ್ತ್ರಗ್ರಂಥವೊಂದು ಇದ್ದಿತೆಂದೂ ಈ ಶಾಸನದ (ಕ್ರಿ.ಶ. 1099) ಕಾಲದ ಹೊತ್ತಿಗೆ ಅದು ಜನಸಾಮಾನ್ಯವಾಗಿದ್ದು, ಅದಕ್ಕನುಸಾರವಾಗಿ ದೇವಸ್ಥಾನ ಮೊದಲಾದುವನ್ನು (ಶಾಸನ) ಕಟ್ಟುವುದು ಕುರುವತ್ತಿಯ ಭಾಗದಲ್ಲಿಯಂತೂ ಪ್ರಚುರವಾಗಿದ್ದಿತೆಂದೂ, (ಶಿಲ್ಪಿ) ಗುಲುಗೋಜನೆಂಬುವನು ಈ ಪದ್ಧತಿಯ ವಾಸ್ತುರಚನೆಯಲ್ಲಿ ಪ್ರವೀಣನೆಂದು ಖ್ಯಾತನಾಗಿದ್ದನೆಂದೂ ತಿಳಿಯುತ್ತದೆ" ಎಂದು ಮೇವುಂಡಿ ಮಲ್ಲಾರಿ[159]ಯವರು ಹೇಳುತ್ತಾರೆ. ಆ ಕಾಲದಲ್ಲಿ ಸರ್ವಸಮ್ಮತವಾಗಿರಬಹುದಾದ ಈ ಶಾಸ್ತ್ರ ಕೃತಿ ಸಿಗುವುದಿರಲಿ, ಇದರ ಸ್ವರೂಪವು ತಿಳಿದುಬಂದಿಲ್ಲ. ಇದು ಮತ್ತು ಇಂತಹ ಶಾಸ್ತ್ರಕೃತಿಗಳು ಲಭಿಸಿದ್ದರೆ ವಾಸ್ತುಶಿಲ್ಪ ಮತ್ತು ಮೂರ್ತಿ ಶಿಲ್ಪಗಳ ಜೊತೆ ಅಕ್ಷರಶಿಲ್ಪಕ್ಕೆ ಸಂಬಂಧಪಟ್ಟ ಅಕ್ಷರ ಕಂಡರಣೆಯ ಪರಿಕರ, ವಿಧಾನ ಇತ್ಯಾದಿ ಸಂಗತಿಗಳನ್ನರಿಯಲು ಅನುಕೂಲವಾಗುತ್ತಿತ್ತು.

ರೂವಾರಿಗಳದು ವಂಶಪಾರಂಪರ್ಯ ವೃತ್ತಿ. ಈ ಪರಂಪರೆಯನ್ನು ಅವರು ಅಭಿಮಾನದಿಂದ ಹೇಳಿಕೊಂಡಿರುವರು.

*'ಬಿರುದರೂವಾರಿ ಮುಖತಿಳಕ ಗಂಗಾಚಾರಿಯ ತಮ್ಮ ಕಾಂವಾಚಾರಿ ಕಂಡರಿಸಿದ'*[160]
*'ಬೆಸಗೆಯ್ದಂ ಕಾವನ ಬನದ ಅ[ಯ್ತ] ವರ್ಮ್ಮೋಜನಳಿಯ ಜಕೋಜ[ಂ]*[161]
*'ಬೀರೋಜನ ಮಗಂ ಬರ್ಮ್ಮೋಜ ಮಾಡಿದ ಶಾಸನ॥'*[162]
*'ಶ್ರೀ ಮತೆಬ್ಬರ ಗಣ್ಡನ ಮಗಂ ಮರುಳೋಜನಾತನ ಮಗ (ಜ) ಕೋ*
*ಜನಾತನ ಮಗಂ ರೂವಾರಿವೈರಿಭೇರುಣ್ಡ ಚೌವುಡಾಭರಣ ಗೋತ್ರಪವಿತ್ರ ಚೌಣ್ಡೋಜನ ಮರ್ಮ್ಮ ಚನ್ನೋಜನ ಮಾಡಿದ ಸಾಸನ..'*[163]

ಈ ಮಾತುಗಳು ನಮ್ಮ ರೂವಾರಿಗಳ ಕಲಾಪರಂಪರೆ ತಲೆಮಾರಿನಿಂದ ತಲೆಮಾರಿಗೆ ನಡೆದುಬಂದುದನ್ನು ವ್ಯಕ್ತಪಡಿಸುತ್ತವೆ.

ರೂವಾರಿಗಳು ಕಲಾಕ್ಷೇತ್ರದಲ್ಲಿ ಮರ್ತ್ಯಲೋಕದ ವಿಶ್ವಕರ್ಮರು. 'ಸ್ವಸ್ತಿ ಸಮಸ್ತ ತ್ರಿಭುವನ ನಿರ್ಮಿತಾಧಾರ ವಿಶ್ವಂಖರ್ಮ ಕುಲೋದ್ಭವಂ ಜಗದ್ಗುರು ಎನಿಸುವ ವೊಡೆಯಪ್ಪಯ್ಯನ ಮಗ ಬಸವಾಚಾರಿಯ ಮಗ ವಿಶ್ವನಾಥ ಹೊಯಿದ '[164] ಎಂಬ ಮಾತಿನಿಂದ ಈ ಅಂಶವನ್ನು ಅರಿಯಬಹುದು. ಈ ವಿಶ್ವಕರ್ಮಕುಲದ ಕಲಾಸಿದ್ಧಿಯ ವಿವಿಧ ಸಾಧ್ಯತೆಗಳಿಗೆ ಅನೇಕ ಶಾಸನಗಳು ಆಧಾರವನ್ನೊದಗಿಸುತ್ತವೆ.

*'ವಿಶ್ವ ಕರ್ಮ್ಮ ಸಮಾನೇನ ವಿಶ್ವ ಕರ್ಮಾಚಾರ್ಯೇಣೇದಂ ಶಾಸನಂ ಲಿಖಿತಂ'*[165]
*'ಮೂಱುಲೋಕದ ಬಿರುದ... ವಾರಿಗಳ್ಗೆ ಬಂಗಾಱ ಚವೋಜ'*[166]
*'ಬಿರುದ ರೂವಾರಿಮುಖತಿಳಕಂ ಗಂಗಾಚಾರಿ ಕಂಡರಿಸಿದಂ'*[167]
*'ಬಿರುದ ಕಂಡರಣೆಕಾಱ ಕೋಳಾಹಳಂ ರೂವಾರಿ ಮಲ್ಲೋಜನ ಕಂಡರಣೆ'*[168]
*'ಬಿರುದ ರೂವಾರಿಗಳ ಗಂಡ..... ಚಿಕ ಮಲ್ಲುಕನ ಕಂಡ.. '*[169]
*'ಯಿ ಕಲ್ಲ ಮಾಡಿದಾತ ಕಲ್ಲುಕುಟಿಗ ಸಿಂಗೋಜನ ಮಗ ಬೀರೋಜ,*
*ಆತನ ಬಿರುದು ಮಂಠಣಿಸುವರ ಗಂಟರಗಾಳ, ಮತ್ಸರಿಸುವರ ಮಂಠಣಸೂಲ'*[170]
*'ರೂವಾರಿ[ಕು] ಮುದಚಂದ್ರಂ ಭಾವಕರೂವಾರಿವಾರಿಜಕ್ಕಂ ಮತ್ತಂ*
*ರೂವಾರಿವಾರಿಜೋದ್ಭವನೀ ವಸುಮತಿಯೊಳಗತಿ ಪ್ರಚಣ್ಡಂ ಚೌಣ್ಡ॥*
*ಸಲೆ ಮಂದೂರ ಗವುಣ್ಡನಾಕಣೆಯ ಚೌವುಣ್ಡಂಗೆ ಸತ್ಪುತ್ರನೀ*
*ಬಲದೇವಂ ಶಿವಪಾದಪದ್ಮಮಧುಪಂ ಮನ್ದೂರೊಳಂ ಶಂಭುವೀ*
*ಕಲಿದೇವಂಗತಿಭಕ್ತಿಯಿನ್ದೆ ಬೆಸಗೆಯ್ದೀ ಶಾಸನಂ ನಿಲ್ವೆ ತಾಂ*
*ನೆಲನುಂ ನೇಸಱುಮುಳ್ಳಿನಂ ತೊಲಗದಿನ್ನಾ ಚಂದ್ರತಾರಂಬರಂ॥ '*[171]
*'ಕಲ್ಲ ಬೆಸೆಂಗಳನರಿವವರೆಲ್ಲಂ ಕೈಕೊಣ್ಡು ಪೊಗ...*
*.... ನೆ ಚಾವುಣ್ಡೋಜಂಗಲ್ಲದೆ ಪೆಱಗ್ಗೋವಜವೆಸರದೇನೊಪ್ಪುಗುಮೆ*
*ಶ್ರೀ ಶ್ರೀ ಜಯಾಭಿವೃದ್ಧಿರ್ಭವತಾತ್[॥]'*[172]
*'ಸ್ವಸ್ತಿ ಶ್ರೀಮತು ಬಳ್ಳಿಗ್ರಾಮೆಯ ದಮ್ಮೇಸ್ವರದೇವರ ಪಾದಪಂಕಜ*
*ಭ್ರಮರ ದಾಸೋಜನ ಪುತ್ರ ಚಾವಣನಗೆಯ್ದ ನಿತ್ಯ ಸರಸ್ವತೀಗಣದಾಸಿ*
*ಮಚ್ಚರಿಪ ರುವಾರಿಸ್ವರಭಭೇರುಣ್ಡ'*[173]
*'ರೂವಾರಿ ವೈರಿ ಬಿರುದ ಭೇರುಂಡ ಚಾಉಡೋಜನ ಮರ್ಮ್ಮ ಸಾತೋಜನ ಬೆಸ'*[174]

ಈ ಬಿರುದು, ಆತ್ಮಪ್ರೌಢಿಮೆಗಳಲ್ಲಿಯ ಒಂದೊಂದು ಮಾತು ನಮ್ಮ ರೂವಾರಿಗಳ ಅಭಿಮಾನ, ಪ್ರತಿಷ್ಠೆಗಳನ್ನು ಉದ್ಘೋಷಿಸುತ್ತವೆ.

ಇನ್ನು ಕೆಲವು ಸಲ ಅವರ ಕಲಾಸಿದ್ಧಿ ಹೀಗೆ ವ್ಯಕ್ತವಾಗಿದೆ.

*'ಸರ್ವ್ವಕಲಾಧರಭೂತ ಚಿತ್ರಕಲಾಭಿಜ್ಞೇನ ವಿಶ್ವಕರ್ಮ್ಮಾಚಾರ್ಯ್ಯೇಣೇದಂ ಶಾಸನಮ್ ಲಿಖಿತಮ್ .... '[175]*
*'ಇ ಕಲ್ಲಂ ಬೆಸಗೆಯ್ದೊ ವಿನ್ನಾಣಿ ಚಾಮುಣ್ಡನೆಂಬೊ ರೂವಾರದೊಳಂ*
*ಶಿಲಾಕರ್ಮ್ಮದೊಳಂ ಪ್ರವೀಣನಪ್ಪಕೊರವಟಿಕ್ಕ'[176]*
*'ಸೈವೋಜ ರೂವಾರಿ ಭೈರವಂ ...... ನರಕರಿಗೆ ..... ನುರಾಗ*
*.... ಣಪ .. ಜಿದು ಮನ್ದಿರ ಕಂಶೆಸುರ ದೊರೆಯಲ್ಲ ... ದಚ್ಚರಿಸುವ*
*ಶಿಳ (ಕಾಂಸ್ಯ) ವಿದ್ಯೆಯೊಳು ಸೈವುಗನುಂ'[177]*
*'ಪುರಿಕರಪಟ್ಟಣೋದ್ಭವನ ಕಂಟದ ಬಮ್ಮನ ಪುತ್ರನಯ್ಯಣಂ*
*ಮರವೆಸೆದೊಪ್ಪು ವಿಟ್ಟಗೆಯ ದನ್ತದ ಚಿತ್ರದ ಶಾಸ್ತ್ರಯುಕ್ತಮಾಗಿರೆ ಬೆಸಗೆಯ್ವ*
*ಕಲುಭರಿವ ಕಮ್ಮಟ ವಿನ್ನಣದೋಜೆಗೆಲ್ಲಿಯುಂ ಪರಕಿಸೆ ವಿಶ್ವಕರ್ಮ್ಮನಿನವಂ*
*ಮಿಗಿಲೆಂಬುದಶೇಷಭೂತಳ ॥'[178]*
*'ಮರವೆಸದೊಳ್ ಕಲ್ವೆಸದೊಳ್ ವರಪತ್ರಚ್ಛೇದ ... ರ್ಮ್ಮಂಗಳೊಳುಂ*
*ದೊರೆ ವಿಶ್ವಕರ್ಮ್ಮನುಳಿದ .... ಶ್ರೀ ಸೂತ್ರಧಾರಿ ಬರ್ಮ್ಮನೊಳೆನ್ತು ॥*
*ಆತನ ಮಗನ ಮಗಂ ವಿಖ್ಯಾ ..... ಶ್ರೀ . ರಿ*
*ಜಾತವಲ್ಲಭ ಪದಸರೋಜ ಭೃಙ್ಗಂ ತೈಲ ॥ ಸ್ವಸ್ತಿ ಶ್ರೀಮದಗ್ರ .....*
*... ಜನ ಮರ್ಮ್ಮನೊಳ್ಪಿಂಗಾರ್ಮ್ಮ ಸರಸ್ವತಿಗಣ ಮಿತ್ರ*
*ಪರನಾರೀಪುತ್ರ ... ಭಾಸ್ವನ್ತ ನೆಣ್ಭತ್ತನಾಲ್ವರ ವಿದ್ಯಾವನ್ತ*
*ಶ್ರೀಮತ್ಸೂತ್ರಧಾರಿ ... '[179]*
*'ಪದಕದ ಮಕುಟದ ಕೇಯೂರದ ಕೆಲಸದೊಳಕ್ಕಸಾಲಿ ಬಸವೋ*
*ಜಸುತಂ ಚದುರಂ ಕೇತೋಜಂ ಮತ್ತಿದೆಂತು ಕಂಡರಿಸಿ ಕಡದನೀ*
*ಶಾಸನಮಂ ॥'[180]*
*'ಸರಸ್ವತೀಗಣದಾಸಿ ಬೆಂಗೋಜನ ಪುತ್ರ ಇಕ್ಕುಡಾಚಾರಿ ಎರಡು*
*ದೇವಾಲಯಮಂ ಮಾಡಿ ಸಾಸನಮಂ ಬರೆದ'[181]*
*'ಪುಟದೊಳು ಗೋಗ್ರಹಣಮನುತ್ಕಟಮಾಗಿರೆ ಬರೆದು ಮೆಚ್ಚಿಪುದಜಿಂ*
*ಕಾಪಿಂ ದಿಟದಿಂ ಮೂಜುಂ ರಾಯರ। ಕಟಕದ ಬಿರುದಗಲೇಖಿಕೋಪಾಧ್ಯಾಯ*
*ಇ ಶಾಸನಮಂ ಮಾಳೋಜನ ಮಗ ರೂವಾರಿ ಮಲ್ಲೋಜ ಖಣ್ಡರಿಸಿದ'[182]*
*'ರಾಯಸೂತ್ರಧಾರಿ ಗೋಪೋಜನ ತಮ್ಮ ಸೂರೋಜ ಕಂಡಳಿಸಿದ*
*ಸರಸತಿಯ ಕೊರಳ ಮುತ್ತು ಪೊಲಿರೆ ವೃತ್ತಂ ಕೋಮಲಂ ಸುಭದ್ರವೆನಿಪ*
*ಕರಮಂದರ ........ ॥'[183]*

ಈ ಮೇಲಿನ ಹೇಳಿಕೆಗಳಲ್ಲಿ ರೂವಾರಿಗಳ ಪರಿಶ್ರಮ, ಕಲಾಭಿಜ್ಞತೆ, ಕಲಾವೈವಿಧ್ಯ ಮತ್ತು ಸೂಕ್ಷ್ಮತೆಗಳು ತುಂಬಿ ತೋರುತ್ತವೆ. ಇಲ್ಲಿ ಒಬ್ಬ ಪದಕ ಮಕುಟ ಕೇಯೂರ ರಚನೆಯಲ್ಲಿ ಪ್ರವೀಣ, ಇನ್ನೊಬ್ಬ ಪುಟದೊಳು ಇಡೀ ಗೋಗ್ರಹಣ ಕಥೆಯನ್ನು ಬಿಡಿಸುವ ಸೂಕ್ಷ್ಮಜ್ಞ, ಮತ್ತೊಬ್ಬ ಸರಸ್ವತಿಯ ಕೊರಳ ಮುತ್ತಿನಂತೆ ಕಲ್ಲಿನಲ್ಲಿ ಮುದ್ದಾದ ಅಕ್ಷರ ಬಿಡಿಸುವವ. ಪುಲಿಗೆರೆಯ ಅಯ್ಯಣನಂತೂ ಕಟ್ಟಿಗೆ, ಇಟ್ಟಿಗೆ, ದಂತಚಿತ್ರ ಇತ್ಯಾದಿ ಶಾಸ್ತ್ರಕೋವಿದ. ಕಾಷ್ಠ, ಶಿಲೆ ಮತ್ತು ಪತ್ರಚ್ಛೇದ ಕಲೆಗಳಲ್ಲಿ ಬಲ್ಲಿದನಾದ ಬರ್ಮನ ವಂಶಜನೊಬ್ಬ ಎಂಭತ್ತುನಾಲ್ವರ ವಿದ್ಯಾವಂತ, ಇಕ್ಕುಡಾಚಾರಿ, ರಾವೋಜ, ಮಾಬೋಜರು ವೈವಿಧ್ಯಪೂರ್ಣ ಶಿಲ್ಪಕಾರ್ಯಗೆಯ್ದವರು.

## 2.9. ಮಾಲೆಗಾರ

ಹೂವುಗಳನ್ನು ಆಯ್ದುತಂದು, ನಾನಾ ನಮೂನೆಯ ಮಾಲೆಗಳನ್ನು ಸಿದ್ಧಪಡಿಸಿ, ಮಾರುವ ವೃತ್ತಿಯೇ 'ಮಾಲೆಗಾರ ವೃತ್ತಿ' ಅಥವಾ ಹೂಗಾರಿಕೆ. ಪೂಜಾದಿಗಳಿಗಾಗಿ ಹೂಗಳನ್ನು ತರುವ ವೃತ್ತಿಯವರು ಎಂಬರ್ಥದಿಂದ ಹೂಗಾರ, ಹೂವಿನ ಎಂಬ ಪದಗಳು ರೂಢಿಯಲ್ಲಿದ್ದರೆ, 'ಮಾಲೆಯನ್ನು ಮಾಡುವವ' ಎಂಬರ್ಥದ ಮಾಲೆಗಾರ ಸರವಂದಿಗ, ಪೂವಡಿಗ ಎಂಬ ಪದಗಳು ಹಳಗನ್ನಡ ಕಾವ್ಯದಲ್ಲಿ ಮತ್ತು ಪುರಾಣಗಳಲ್ಲಿ ಎಡೆಪಡೆದಿವೆ.[184] ಶಾಸನಗಳು 'ಮಾಲೆಗಾಱ'[185], 'ಮಾಲಗಾರ'[186] ಎಂದೆಲ್ಲ ಉಲ್ಲೇಖಿಸಿವೆ. ಹೂವಿನಿಂದ ಮಾಲೆಗಳನ್ನು ಹೆಣೆಯುತ್ತಿದ್ದ ಮಾಲೆಗಾರನ ಉಲ್ಲೇಖ ವಚನವೊಂದರಲ್ಲಿದೆ.[187]

ಸಂಸ್ಕೃತದ 'ಮಾಲಾಕಾರ' ಶಬ್ದದ ಕನ್ನಡ ರೂಪವೇ ಮಾಲೆಗಾರ. ಶಿವನು ತಮ್ಮನ್ನು ಹೂ ಪತ್ರಿಗಳನ್ನು ಕೊಡುವ ಕಾಯಕ ಮಾಡಿಕೊಂಡಿರಲು ತಿಳಿಸಿ ಭೂಲೋಕಕ್ಕೆ ಕಳಿಸಿರುವನು ಎಂಬ ನಂಬಿಕೆ ಹೂಗಾರರಿಗಿದೆ. ಇವರು ತಮ್ಮ ವಂಶದ ಮೂಲಪುರುಷ ಪುಷ್ಪದತ್ತ ಎಂದು ತಿಳಿಯುವರು. ನಂಬಿಯಣ್ಣನ ರಗಳೆಯಲ್ಲಿ ಇರುವ ಪುಷ್ಪದತ್ತನೇ ಇವನಾಗಿರಬೇಕು. ಸಮುದ್ರಮಥನ ಕಾಲದಲ್ಲಿ ಜನಿಸಿದ ಹಾಲಾಹಲವನ್ನು ಶಿವನು ಸ್ವೀಕರಿಸಬೇಕೆಂದು ಕೈಗೆತ್ತಿಕೊಂಡು ಅದರಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ ಅದಕ್ಕೆ ಪುಷ್ಪದತ್ತ ಎಂಬ ಹೆಸರನ್ನಿತ್ತನು. 'ಸಿರಿಮುಡಿಗೆ ಹೂವನಡಕುತ್ತ ಮಿರು' ಎಂದು ಆಜ್ಞಾಪಿಸಿದನು ಎಂಬ ಕಥಾಭಾಗ ಅಲ್ಲಿ ಬರುತ್ತದೆ.[188]

ಬಾದಾಮಿಯ ಮಂಗಲೀಶನ ಶಾಸನ (ಕ್ರಿ.ಶ. 597-609) ಹೂಗಾರರನ್ನು ಉಲ್ಲೇಖಿಸುವ ಕನ್ನಡದ ಮೊಟ್ಟಮೊದಲ ಶಾಸನ ಎಂದು ಶಿರೂರ್‌ರವರು ಅಭಿಪ್ರಾಯಿಸುತ್ತಾರೆ. ಶಾಸನಗಳಲ್ಲಿ ಸಿಗುವ 'ಹೂದೋಟದ ಮಾಲೆಗಾಱಗೆ ಕಮ್ಮ ೨೦,'[189] 'ದೇವರ ಹೂದೋಟವ ಸಾಕುವ ಮಾಲೆಗಾಱಗೆ ಕಂಬ ೨೦ ಗದ್ಯಾ ೨'[190] 'ಮತ್ತರು ೫ ಮಾಲಗಾರಂಗೆ'[191] ಎಂಬ ಉಲ್ಲೇಖಗಳೂ, ಸಂತೆಯ ಆಯ ಪ್ರಸಂಗದಲ್ಲಿ ಬರುವ 'ಹೂವಿನ ಹೆಡಲಿಗೆಗೆ ಮಾಲೆವೊನ್ದು', 'ಮಾಲಗಾರ ನಾಲ್ವತ್ತೊಕ್ಕಲಲು ತಂಮ ಕರಂಡಗೆಗಳಲು ಪ್ರತ್ಯೇಕ ಹೂವಿನ ಸರವೊನ್ದು' ಎಂಬ ಉಕ್ತಿಗಳೂ ದೇವರ ತೋಟ ಇಲ್ಲವೆ ಸ್ವಂತ ತೋಟದಲ್ಲಿ ಹೂವಿನ ಗಿಡಗಳನ್ನು ಬೆಳೆಸಿ, ಬಾಸಿಂಗ ದಂಡೆ ಮಾಲೆಗಳನ್ನು ತಯಾರಿಸಿ ಕರಂಡಿಗೆ ಹೆಡಿಗೆಗಳನ್ನಿಟ್ಟುಕೊಂಡು ಸಂತೆ-ಪೇಟೆಗಳಿಗೆ ಹೋಗಿ ಮಾರಾಟ ಮಾಡುವವರು 'ಮಾಲೆಗಾರ'ರೆಂದು ತಿಳಿಸುತ್ತವೆ. ಹೂಗಾರ ವೃತ್ತಿಯ ಇವರೇ ಆಮೇಲೆ ಜಾತಿವಾಚಿ ಹೂಗಾರರೆನಿಸಿಕೊಂಡರು ಎಂದು ಬಿ.ಆರ್. ಹಿರೇಮಠರವರು ಅಭಿಪ್ರಾಯಪಡುತ್ತಾರೆ.[192]

ಕ್ರಿ.ಶ. 1197ರ ಶಾಸನವೊಂದು[193] 'ಮಾಲಗಾಱರು ಬಿಟ್ಟರು ಹೆಡಗೆ (ಗೆ) ೪ ಕಾಯಿ ಹೆಡಗೆಗೆ ವೊಂದು ಹಿಡಿ ಬಾಡು' ಎಂದು ಉಲ್ಲೇಖಿಸುತ್ತದೆ. ಅಂದರೆ ಇವರು ತೋಟದಲ್ಲಿ ವಿವಿಧ ಹೂವಿನ ಗಿಡಗಳೊಂದಿಗೆ ಬಾಡುಕಾಯಿಗಳನ್ನು ಬೆಳೆಸಿ ಮಾರಾಟ ಮಾಡುತ್ತಿದ್ದುದನ್ನು ತಿಳಿಯಬಹುದು.

ಕ್ರಿ.ಶ. 1237ರ [194] ಹಾಗೂ 1302ರ [195] ಹಳೇಬೀಡಿನ ಶಾಸನಗಳೆರಡು ಇವರು ಮಾಡುತ್ತಿದ್ದ ಧರ್ಮ ಕಾರ್ಯಗಳನ್ನು ಉಲ್ಲೇಖಿಸುತ್ತವೆ. ಅಲ್ಲದೆ ಇವರ ಜೀವಿತಕ್ಕೆ ಬೇರೆಯವರಂತೆ ಇವರಿಗೂ ಇಂತಿಷ್ಟು ಗದ್ಯಾಣ ಹಾಗೂ ಗದ್ದೆಗಳನ್ನು ಕೊಟ್ಟ ವಿಷಯವನ್ನು ಬಸ್ತಿಹಳ್ಳಿ[196] ಹಾಗೂ ಹುಲಿಕೆರೆಯ [197] ಶಾಸನಗಳೆರಡು ತಿಳಿಸುತ್ತವೆ.

ಪಟ್ಟಣಗಳಲ್ಲಿ ಮಾಲೆಗಾರರ ಸಾಲುಗಳೇ ಇರುತ್ತಿದ್ದವು. ಲಲಿತಾಂಗನೆಂಬ ರಾಜಕುಮಾರ, ಮಾಲೆಗಾರರ ಸಾಲನ್ನು ಪ್ರವೇಶಿದ ಕೂಡಲೆ, ಅವರೆಲ್ಲ ಕಾಗೆಯನ್ನು ಕಂಡ ಕೋಗಿಲೆಯಂತೆ ಬೆದರಿ ಓಡಿ ಹೋದರೆಂದೂ, ಅವನು ಪೂವಿನ ಸಂತೆಯನ್ನು ಹೊಕ್ಕು, ಸುರಗಿ, ಮಲ್ಲಿಗೆ, ಜಾಜಿ, ಸಂಪಿಗೆ, ಮೊಲ್ಲೆ ಕೇದಗೆ, ಪಾದರಿ ಮುಂತಾದ ಹೂಗಳನ್ನು ಸೂರೆ ಮಾಡಿದನೆಂದೂ ನಯಸೇನ ತಿಳಿಸಿದ್ದಾನೆ.[198]

ಇನ್ನು ಹಲವು ಹೂಗಾರರ ಉಲ್ಲೇಖ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಬರುತ್ತವೆ. ಅದರಲ್ಲಿ ಪುಷ್ಪದ ಸೋಮಯ್ಯ, ಬಾಹೂರ ಬೊಮ್ಮಯ್ಯ, ನೃಪಸಿಂಗ ಮೊನೆಯಾರ, ಇರಿಭಕ್ತ ಗುಂಡುಗತ್ತರಿಯ ನಾಚಯ್ಯ, ಹೂವಿನ ಅಲ್ಲಮ್ಮ, ಪೂವಿನ ಬಾಚಿದೇವ, ಬಿಲ್ವಪತ್ರೆಯ ವೀರಣಯ್ಯ, ಶರಣ ಹೂಗಾರ ಮಾರಯ್ಯ ಮೊದಲಾದವರು. ನಿತ್ಯವೂ ಶಿವನಿಗೆ ಮದ್ದಳೆ ಬಾರಿಸುವ ಹರಕೃಪೆ ಮಾಡಿದ ಬಾಚಲೆಯೂ ಹೂಗಾರರಿಗೇ ಸಂಬಂಧಿಸಿದವಳಾಗಿರಬೇಕು ಎಂದು ಶಿರೂರುರವರು[199] ಉಲ್ಲೇಖಿಸುತ್ತಾರೆ.

ಮುತ್ತಗಿಯ ಕನಕಬ್ಬೆಯ ಮಗ 'ಮಾಲಗಾರ ದಡ್ಡಿಯಂಣ'[200], ಬಿಜಾಪುರದ 'ಮಾಲಗಾರ ಲಖಂಣ'[201], ಕುಂಟೋಜಿಯ 'ದೇವರ ತೋಟದ ಮಾಲಗಾರ ರೇವಂಣ'[202], ಹಳೇಬೀಡಿನ 'ಮಾಲಗಾಱ ಬಿಟ್ಟಯ್ಯ'[203], ಹುಲಿಕೆರೆಯ 'ಮಾಲಗಾಱ ಚಿಕ್ಕ'[204] ಇವು ಮಾಲೆಗಾರರ ಹೆಸರುಗಳನ್ನು ಹೆಸರಿಸುವ ಶಾಸನಗಳು.

ಈ ಮಾಲೆಗಾರರು ರಚಿಸಿಕೊಂಡ ಸಂಘದ ಹೆಸರು 'ಮಾಲಗಾರಗೊತ್ತಳಿ' [205]. ಈ ಸಂಘದ ಪರ್ಯಾಯ ಪದಗಳು 'ಮಾಲೆಗಾರ ನಾಲ್ವತ್ತೊಕ್ಕಲು'[206], 'ಮಾಲೆಗಾಱ ಕೊತ್ತಳಿ'[207], 'ಮಾಲಿಗಾಱ (ಱ) ಯಿವದಣ್ಬುರು'[208] 'ಮಾಲೆಗಾಱರೊಂದೊಕ್ಕಲಂ'[209], 'ಮಾಲಗಾಱರೊಕ್ಕಲೊಂದು'[210] ಎಂಬುವು ಈ ಸಂಘದ ವಿವಿಧ ಹೆಸರುಗಳಾಗಿವೆ.

ಬಾಗೇವಾಡಿ ಶಾಸನ ಮಾಲಗಾಱ ಗೊತ್ತಳಿವೊಕ್ಕಲೆಂಬ ಐನೂರು ಜನರ ಸಂಘ ಹೊಂದಿರುವುದನ್ನು ತಿಳಿಸಿದೆ.[211] ಮಾಲೆಗಾಱ ನಾಲ್ವತ್ತೊಕ್ಕಲು ಮುಂತಾದ ಉಲ್ಲೇಖಗಳು ಕೆಲವೊಮ್ಮೆ ಬರುವುದರಿಂದ ಆಯಾ ವಸತಿಯಲ್ಲಿ ಮಾಲೆಗಾರರು ರಚಿಸಿಕೊಂಡ ಸಂಘಟನೆಯ ಸದಸ್ಯತ್ವವನ್ನು ಇದು ನಿರ್ದಿಷ್ಟವಾಗಿ ಸೂಚಿಸಿದಂತೆ ತೋರುತ್ತದೆ. ಕ್ರಿ.ಶ. 1082ರ ಕೊಪ್ಪಳ ಜಿಲ್ಲೆಯ ಶಾಸನವೊಂದು[212] 'ಶ್ರೀ ನಖರಂಗಳು ತಂಬುಲಿಗ ಸಾಸಿರ್ವ್ವರು ತೆಲ್ಲಿಗರು .... ತಕರುಂ ಮಾಲೆಗಾಱ . ళ .. ం ಬಾಱಗೊತ್ತಳಿಗಳು ನೂಱ .... ಕೊತ್ತಳಿ' ಎಂದು ಮುಂದುವರಿಯುತ್ತದೆ. ಶಾಸನ ತ್ರುಟಿತವಾದರೂ ಹನ್ನೆರಡು ಕೊತ್ತಳಿಗಳಲ್ಲಿ ಮಾಲೆಗಾರರ ಕೊತ್ತಳಿ ಒಂದಾಗಿದ್ದ ವಿಷಯವನ್ನು ಇದು ವ್ಯಕ್ತಪಡಿಸುತ್ತದೆ.

ಕ್ರಿ.ಶ. 1069ರ ಚಿಂಚ್ಲಿ ಶಾಸನವು[213] 'ನಾಗೇಶ್ವರ ದೇವರ್ಗ್ಗೆ ಬಿಟ್ಟ ಪೂದೋಂಟ ಪತ್ತುಗೇಣ ಕೋಲೊಳು ಮತ್ತರೊಂದು ಆ ತೋಂಟಮ ನಾರೊರ್ವ್ವರ್ಮ್ಮಾಡುವ ಮಾಲಗಾಱ ದ್ದೇವರ್ಗ್ಗೆ ನಡೆಯಿಸುವ ಕಣಗಿಲೆಯ ಗಿಡುವಿರ್ಪ್ಪತ್ತು ಮತ್ತಿನ ಪುಟ್ಟಜಾತಿಯೇನೊಂದಾದಡ ಗಿಡು ಜಾತಿಯೊಳಯ್ದು ದವನಂ ಮರುಗಿನ

ಮಡಿಯೊಂದೊಂದಱಲಯ್ದು ಈ ಧರ್ಮ್ಮಮನಯ್ವತ್ತಱುವರುಂ ಕಾದು ನಡೆಯಿಸುವರ್' ಎಂಬ ಶಾಸನೋಲ್ಲೇಖವು ನಾಗೇಶ್ವರದೇವರಿಗೆ ಇಪ್ಪತ್ತು ಕಣಗಿಲೆ ಹೂಗಳನ್ನು, ದವನ ಮರುಗಗಳನ್ನು ಕೊಡಬೇಕೆಂಬ ನಿಯಮವನ್ನು ಒಬ್ಬ ಮಾಲೆಗಾರ ಹಾಕಿಕೊಂಡಿದ್ದಂತೆ ತಿಳಿಸುತ್ತದೆ.

## 2.10. ಮೇದರು

ಬಿದಿರು ಸೀಳಿ ಬುಟ್ಟಿ ಮರ ಮುಂತಾದವುಗಳನ್ನು ಹೆಣೆಯುವವರೇ ಮೇದರು. ಶಾಸನಗಳು ಕೂಡ ಮೇದ,[214] ಮೇದರು [215] ಅಂತೆಯೇ ಉಲ್ಲೇಖಿಸುತ್ತವೆ.

*'ಬೆಟ್ಟದ ಬಿದಿರೆ, ನೀನು ಆಟ್ಟಕ್ಕೇಣಿಯಾದೆ,*
*ಕಾಲು ಮುಱಿದವರಿಗೂಱುಗೋಲಾದೆ,*
*ಬಿದಿರಿಂ ಭೋ ಆಯ್ಯಾ, ಬಿದಿರಿಂ ಭೋ.*
*ಬಿದಿರಿದ ಫಲವುಂಬಡೆ ಬಿದಿರಿಂ ಭೋ!*
*ಬಿದಿರಲಂದಣವಕ್ಕು ; ಬಿದಿರೆ ಸತ್ತಿಗೆಯಕ್ಕು ;*
*ಬಿದಿರೆ ಗುಡಿಗುಡಾರವಕ್ಕು.*
*ಬಿದಿರದವರ ಮೆಚ್ಚ ನಮ್ಮ ಕೂಡಲ ಸಂಗಯ್ಯನು.'*[216]

ಬಸವಣ್ಣನವರ ಈ ವಚನವು ಬಿದಿರಿನ ವಿವಿಧ ಉಪಯೋಗಗಳು ಹಾಗೂ ಬಿದಿರಿನಿಂದಲೇ ಕೆಲಸ ನಿರ್ವಹಿಸುತ್ತಿರುವ ಮೇದರು ತಯಾರಿಸುತ್ತಿದ್ದ ವಿವಿಧ ವಸ್ತುಗಳನ್ನು ತಿಳಿಸುತ್ತದೆ. 12ನೇ ಶತಮಾನದ ಮತ್ತೊಬ್ಬ ವಚನಕಾರ ಕೂಡ ಬಿದಿರಿನ ಕೆಲಸ ಮಾಡುವವರ ಕುರಿತು ಅವರು ಹೇಗೆ ಕೆಲಸ ಮಾಡುತ್ತಿದ್ದರು ಎಂಬ ವಿವರ ವಚನವೊಂದರಲ್ಲಿ ಕೊಡುತ್ತಾನೆ.[217]

ಒಂದೊಂದು ಕತ್ತಿಗೂ ಐದು ವೀಸಗಳನ್ನು ಮೇದರು ಗವಱೀಶ್ವರ ದೇವರಿಗೆ ಬಿಟ್ಟುಕೊಟ್ಟರೆಂದು ಶಾಸನವೊಂದು ತಿಳಿಸುತ್ತದೆ ಎಂದು ಚಿದಾನಂದಮೂರ್ತಿಯವರು [218] ಹೇಳುತ್ತಾರೆ.

ನೇಕಾರರ ಸಂಘವಾದ ಜೇಡ ಕೊತ್ತಳಿಗಳೊಂದಿಗೆ ಬುಟ್ಟಿ ಹೆಣೆಯುವ ಮೇದರ ಸಂಘ 'ಮೇದರೊಕ್ಕಲ'ವನ್ನು ಮನಗೂಳಿ ಶಾಸನ ಉಲ್ಲೇಖಿಸುತ್ತದೆ. ಇವು ಕೆಲಸ ಮಾಡುವವರು ಒಟ್ಟಾಗಿ ಬದುಕುವ ಗುಂಪುಗಳಾಗಿದ್ದುವೇ ವಿನಃ ಬೇರೆ ಯಾವುದೇ ರೀತಿಯ ಶಕ್ತಿಯನ್ನು ಹೊಂದಿರಲಿಲ್ಲ. ತಾವು ತಯಾರಿಸಿದ ವಸ್ತುಗಳ ಬೆಲೆ ನಿರ್ಧಾರದಿಂದ ಹಿಡಿದು

ವ್ಯಾಪಾರಿ ಸಮುದಾಯದ ಲಾಭಾಂಶವನ್ನು ನಿಯಂತ್ರಿಸಲು ಕೂಡ ಇವುಗಳಿಗೆ ಸಾಧ್ಯವಿರಲಿಲ್ಲ ಎಂದು ಎಸ್.ಕೆ. ಕೊಪ್ಪಾರವರು[219] ಅಭಿಪ್ರಾಯಿಸುತ್ತಾರೆ.

ಧರ್ಮಾಪುರ ಶಾಸನವೊಂದು 'ಮೇದದೆಱ'[220] ಯನ್ನು ಉಲ್ಲೇಖಿಸುತ್ತದೆ.

## 2.11. ಚರ್ಮಕಾರರು ಹಾಗೂ ಇತರೆ ವೃತ್ತಿಕಾರರು

ಊರಿನ ಹೊರಗೆ ವಾಸಿಸುತ್ತಿದ್ದವರು ಹರಿಜನರು ('ಪೊಱಗೆ ಚಂಡಾಲಾಲಯಂ')[221] ಇವರು ಊರಿನ ಸತ್ತ ದನಗಳನ್ನು ಎತ್ತುವವರು, ಜನರಿಗೆ ಚರ್ಮದ ವಸ್ತುಗಳನ್ನು ಮಾಡಿಕೊಡುವವರು. ಇವರನ್ನು 'ಸಂಮ್ಮಗಾಱ' (ಸಂ. ಚರ್ಮಕಾರ) ರೆಂದು ಶಾಸನಗಳು ಕರೆಯುತ್ತವೆ.[222] ಬಾದಾಮಿಯ ಮಹಾಜನರು ಆ ಊರಿನ ಚರ್ಮಕಾರರ ತೆರಿಗೆಗಳನ್ನು ತೆಗೆದುಹಾಕಿದಂತೆ ಒಂದು ಶಾಸನವು ಹೇಳುತ್ತದೆ. 'ಸ್ವಸ್ತಿ ವಿಜಯವಾತಾಪ್ಯಧಿಷ್ಠಾನದಾ ಶ್ರೀ ಮಹಾಚಾತುರ್ವಿದ್ಯ ಸಮುದಯಮಿರ್ಚಾಸಿರ್ವರುಂ ಈ ಊರ ಸಮ್ಮಗಾಱರಾ ಕವಱ್ತಿಯಾನ್ ವಿಟ್ಟಾರ್' (ಕವಱ್ತಿ= ಕವರ್ತೆ ಎಂದರೆ ಕಿತ್ತುಕೊಳ್ಳುವುದು ಎಂದರ್ಥ. ಆದ್ದರಿಂದ ಕವಱ್ತಿ ಎಂದರೆ ಒಂದು ರೀತಿಯ ತೆರಿಗೆ ಎಂದು ಅರ್ಥೈಸಬಹುದು. 'ಪೊಲೆದೆಱ' ಎಂಬ ಹೆಸರಿನ ಒಂದು ತೆರಿಗೆಯಿದ್ದಿತು. ಅದನ್ನು ಚರ್ಮಗಾರರ ಮೇಲೆ ಹಾಕುತ್ತಿದ್ದರೆಂದು ಕಾಣಿಸುತ್ತದೆ). ಸಾಮಾಜಿಕವಾಗಿ ಬಹು ಕೆಳಗಿದ್ದ ಇವರು ಇತರರ ನಿರ್ಲಕ್ಷ್ಯ ಅವಹೇಳನಕ್ಕೆ ತುತ್ತಾಗಿದ್ದ ಅದೃಷ್ಟಹೀನರು ಎಂದು ಡಾ. ಚಿದಾನಂದಮೂರ್ತಿಯವರು ಅಭಿಪ್ರಾಯಿಸುತ್ತಾರೆ.[223] ಕ್ರಿ.ಶ. 1138ರ ಯಲಿಶಿರೂರ ಶಾಸನದಲ್ಲಿ[224] ಹೊಲಗೇರಿಯ ಹೆಸರಿದೆ. ತುಂಬಿಗಿಯ ಶಾಸನದಲ್ಲಿ[225] 'ಹೊಲೆ' ಎಂಬ ಪದವಿದ್ದು ಮುಂದಿನ ಭಾಗ ತ್ರುಟಿತವಾಗಿದೆ. ಕೊಪ್ಪದ 1075ರ [226] ಶಾಸನದಲ್ಲಿ ಇತರರ ಜತೆ ಪರೆಕಾರರಿಗೆ (ತಮಟೆ ಬಾರಿಸುವವ) 30 ಮತ್ತರು ಭೂಮಿ ನೀಡಿದ್ದೂ ಸೇರಿದೆ. ಕೊರ್ಲಹಳ್ಳಿಯ ಕ್ರಿ.ಶ. 1050ರ ಶಾಸನದಲ್ಲೂ[227] ೬ ಮತ್ತರು ಭೂಮಿ ಬಿಟ್ಟದ್ದಿದೆ.

ಕಡ್ಲೇವಾಡದ ಶಾಸನವೊಂದರಲ್ಲಿ[228] "ಶ್ರೀ ಸ್ವಯಂಭು ಸೋಮನಾಥದೇವರ ಅಂಗಭೋಗಕ್ಕೆ ಬಿಟ್ಟ ಧರ್ಮ ಅಂಗಡಿ ಗಾಣ [ಹೆ] ಡಗೆಯಲೆಂಣ್ಣೆ ಉಪ್ಪ ಮಾರುವವರು ಎತ್ತಿನಲು ಹೇಱುವ ಸೆಟ್ಟಿಗಳ್ ಎಲೆಯ ಹೇಱುಂಗೆ ನೂಱಲೆ ಬಡಗಿ ಕಂಮ್ಮಾಱ ಅಕ್ಕಸಾಲೆ ಅಸಗ ಸಂಮ್ಮಗಾಱ ದೆಡ ಹೊಲೆಯರ ಕೂಡೆವೊಳಗಾಗಿ ಪುರದ ಬೀರವಣವಂ ಬಿಟ್ಟರು।" ಎಂಬ ಶಾಸನೋಲ್ಲೇಖವಿದ್ದು ಬಡಗಿ, ಕಮ್ಮಾರ, ಅಕ್ಕಸಾಲೆ, ಅಗಸರ ಜತೆ ಸಮಗಾರ ಹಾಗೂ ಎಡ ಹೊಲೆಯರೂ ಸುಂಕವಾಗಿ 'ಬೀರವಣ'ವನ್ನು ಕೊಡಬೇಕಿತ್ತು. ಸಮಗಾರ ಮತ್ತು ಎಡಹೊಲೆಯರನ್ನು ಇಲ್ಲಿ ಪ್ರತ್ಯೇಕವಾಗಿ ಹೇಳಿದೆ.

ಬಹುಶಃ ಮಾದಿಗರನ್ನೇ ಇಲ್ಲಿ ಎಡಹೊಲೆಯರೆಂದು ಹೇಳುತ್ತಿರಬೇಕು. ಹೊಲೆಯರು ಮಾತ್ರ ಪರಿಚಿತವಿದ್ದ ಕರ್ನಾಟಕದ ಈ ಭಾಗಕ್ಕೆ ಆಂಧ್ರದಿಂದ ಬಂದ ಮಾದಿಗರು ಎಡಹೊಲೆಯರಾಗಿ ಕಂಡಿರುವಂತಿದೆ. ಕರ್ನಾಟಕದ ಹೊಲೆಯರು ಇವರ ಪ್ರಕಾರ 'ಬಲ ಹೊಲೆಯರು'. ಬಲಗೈ, ಎಡಗೈ ಗುಂಪುಗಳಲ್ಲಿ ಮಾದಿಗರನ್ನು ಎಡಗೈನವರೆಂದು ಈಗಲೂ ಹೇಳುವುದಿದೆ.

ಮದಬಾವಿ ಶಾಸನದಲ್ಲಿ[229] 'ಸಂಮಗಾರ'ರ ಉಲ್ಲೇಖವಿದ್ದು, ಶಾಸನ ತುಂಬಾ ತ್ರುಟಿತವಾಗಿರುವುದರಿಂದ ವಿಷಯ ಗ್ರಹಿಕೆ ಕಷ್ಟಸಾಧ್ಯವಾಗಿದೆ. ಕ್ರಿ.ಶ. 1192ರ ಹಿಪ್ಪರಗಿ ಶಾಸನವು[230] 'ಶ್ರೀಕಲಿದೇವ [ದೇ] ವರ ದೇವಕಾರ್ಯಕ್ಕೆಂದು ಬಿಟ್ಟ ಆಯ ದೇವರ ತೋಂಟವುಳ್ಳನಿತುಂ ನಮಷ್ಯಗಾಣ[ವೆ]ರಡು ನಮಷ್ಯ ಬಡಗಿ ೧ ಕಂಮಾಱ ೧ ಸಂಮಗಾಱ ೧ ಅಸಗ ೧ ದೇಡಮಗ್ಗ .. ಪ್ಪಿನಿತೆ ಗಾವಲಿ ೨ ಇನ್ತಿಲಿನತಱ ಬಣ್ಣಿಗೆಸುಂಕಮಂ' ಎಂದು ಶಾಸನ ಮುಂದುವರಿಯುತ್ತದೆ. ಈ ಶಾಸನದಲ್ಲಿ ಕರಕುಶಲವರ್ಗದಲ್ಲಿ ಸಮಗಾರರನ್ನು ಸಮಾನವಾಗಿ ಸ್ಮರಿಸಲಾಗಿದೆ. ಹಾಗೂ ಅವರು (ಸಂಮಗಾಱ) ತೆರುತ್ತಿರುವ ಸುಂಕವು ಕೂಡ ಇತರ ಕುಶಲಕರ್ಮಿಗಳಂತೆ ಸಮವಾಗಿದೆ.

ಸತ್ತ ದನಗಳ ಚರ್ಮವನ್ನು ಸುಲಿದು ಸಾಂಪ್ರದಾಯಿಕ ರೀತಿಯಲ್ಲಿ ಹದಗೊಳಿಸಿ, ಮಿಣಿ, ಜತ್ತಿಗೆ, ಬಾರಕೋಲು ಮೊದಲಾದ ವ್ಯವಸಾಯದ ಉಪಕರಣಗಳನ್ನು ಸಿದ್ಧಗೊಳಿಸುತ್ತಿದ್ದರು. ಚರ್ಮದ ಕೆಲಸವು ಎರಡು ಗುಂಪಿನ ಜನರಿಂದ ನಡೆಯುತ್ತಿತ್ತು, ಚರ್ಮವನ್ನು ಸುಲಿದು ಹದಮಾಡಿ ಅದನ್ನು ಉಪಯೋಗಕ್ಕೆ ಯೋಗ್ಯವಾಗಿ ಮಾಡುವವನು 'ಸಮ್ಮಗಾರ' ಅಥವಾ 'ಚರ್ಮಕಾರ'; ಹದಗೊಳಿಸಲ್ಪಟ್ಟ ಚರ್ಮದಿಂದ ಪಾದರಕ್ಷೆ ಮುಂತಾದ ವಸ್ತುಗಳನ್ನು ತಯಾರಿಸುವವರು 'ಮಚ್ಚಿಗ' ನೆನಿಸಿಕೊಳ್ಳುತ್ತಿದ್ದ. ಇವೆರಡನ್ನೂ ಒಬ್ಬನೇ ಮಾಡುತ್ತಿದ್ದಿರಲೂ ಬಹುದು ಎಂದು ಡಾ. ಪಿ.ವಿ. ನಾರಾಯಣರವರು[231] ಅಭಿಪ್ರಾಯಪಡುತ್ತಾರೆ.

ಇಂಥ ಹೊಲೆಯರ ಶೀಲ, ಸ್ವಭಾವ, ಅವರು ಮಾಡುತ್ತಿದ್ದ ಕಾರ್ಯ ಮತ್ತು ಸಮಾಜದಲ್ಲಿ ಅವರಿಗಿದ್ದ ಸ್ಥಿತಿಗತಿಯನ್ನು ತಿಳಿಯಲು ನಯಸೇನನ[232] ಅನೇಕ ಹೇಳಿಕೆಗಳು ನರವೀಯುತ್ತವೆ.

ಹೊಲೆಯರ ಕೇರಿಗಳು ಮೂಳೆಮಯವಾಗಿರುತ್ತಿದ್ದವು, ಅವರ ಮನೆಗಳು ಅಶುಚಿಯಾಗಿರುತ್ತಿದ್ದವು, 'ಕೊಯ್' ಎಂಬ ಶಬ್ದ ಹೆಚ್ಚಾಗಿ ಅವರ ಬಾಯಿಂದ ಬರುತ್ತಿತ್ತು, ಕುಲಜರನ್ನು ಅವರು ಎಂದೂ ಪೊರ್ದುತ್ತಿರಲಿಲ್ಲ, ಅವರು ಧನಕ್ಕೊಡೆಯರಾಗಿದ್ದರೂ ಮೇಲ್ಜಾತಿಯವರ ಗೌರವ ಅವರಿಗೆ ಸಿಕ್ಕುತ್ತಿರಲಿಲ್ಲ, ಕುಲಜರು ಅವರನ್ನು ಯಾವಾಗಲೂ ಉದಾಸೀನ ಭಾವದಿಂದ ಕಾಣುತ್ತಿದ್ದರು. "ಭೂಪರಂ ಬಿಟ್ಟು ಪೊಲೆಯರಂ ಕೆಳೆಗೊಳ್ಳುವವಂ

ಮರುಳಂ" ಎಂದು ಜನರು ಭಾವಿಸಿದ್ದರು. ಊರನ್ನು ಬಿಟ್ಟು ಹೊಲಗೇರಿಯಲ್ಲಿ ಮಲಗುವವನಿಗೆ ಬೆಲೆ ಇರಲಿಲ್ಲ. "ಪೊಲೆಯರ ಮನೆಯ ಕೂಟುಂ ಬಾಡುಂ" ಪೊಲ್ಲದಾಗಿತ್ತು. ಅವರ ಆರ್ಥಿಕ ಸ್ಥಿತಿ ಚೆನ್ನಾಗಿರಲಿಲ್ಲ. ಆದುದರಿಂದ ಅವರಿಗೆ ಹೊನ್ನು ಸಿಕ್ಕರೆ ಆಗುವ ಆನಂದಕ್ಕೆ ಇತಿ ಮಿತಿ ಇರಲಿಲ್ಲ. ಪೊಲೆಯರ ಮಕ್ಕಳಿಗೆ ಸಮರ್ಥರ ಮಕ್ಕಳಂತೆ ರಕ್ಷಣೆ, ಮನ್ನಣೆಗಳಿರಲಿಲ್ಲ. ಹಿತ್ತಾಳೆಯ ತೊಡವುಗಳೇ ಅವರಿಗೆ ಹೊನ್ನ ತೊಡವುಗಳಾಗಿದ್ದವು. ಯಾರಿಂದಾದರೂ ಮನ್ನಣೆ ಸಿಕ್ಕರೆ ಅವರು ಬಹಳ ಪ್ರೀತರಾಗಿರುತ್ತಿದ್ದರು ಸತ್ತ ದನಗಳನ್ನು ಹೊತ್ತು ತಂದು, ಊರ ಜನರಿಗೆ ಬೇಕಾಗುವ ತೊಗಲಿನ ಮಿಣಿ ಮೊದಲಾದ ವಸ್ತುಗಳನ್ನು ಮಾಡಿಕೊಡುತ್ತಿದ್ದರು. ಸತ್ತವರನ್ನು ಎಳೆದು ಹಾಕುವ ಕೆಲಸವೂ ಅವರದೇ ಆಗಿತ್ತು. ಪಗರಣಗಳಲ್ಲಿ ಅವರು ಪಱೆಗಳನ್ನು ಬಾರಿಸುತ್ತಿದ್ದರು. ಹೊಲೆಯರು ತಮ್ಮ ಆಡುಗಳಿಗೆ 'ಮಾಣಿಕದೇವಿ' ಮೊದಲಾದ ಹೆಸರಿಡುವುದನ್ನು ನಯಸೇನ ಗೇಲಿಮಾಡಿದ್ದಾನೆ. ಹೊಲೆಯರನ್ನು ಕುರಿತು ಒಂದು ಮಹತ್ವದ ಮಾತನ್ನು ಅವನು ಹೇಳಿದ್ದಾನೆ. "ಹೊಲೆಯರು ದುಷ್ಕಲಜರಾದರೂ ಶುದ್ಧಾಚಾರದವರಾಗಿದ್ದರೆ ಅವರನ್ನು ಧರೆ ಹೊಗಳುತ್ತಿತ್ತು". ಇದರಿಂದ ಕುಲಕ್ಕಿಂತ ಆಚಾರಕ್ಕೆ ಬೆಲೆ ಕೊಡುವ ಕೆಲವರಾದರೂ ಆಗ ಇದ್ದಿರಬೇಕು.

ಹೊಲೆಯರಂತೆ ಮಾದೆಗರೂ ಚರ್ಮದ ಕೆಲಸ ಮಾಡುವವರೇ. "ಮಾದೆಗನಂತೆ ಮೆಟ್ಟೆನುತ್ತುಂ". "ಮಾದೆಗನಂತೆ ಬಾರೆತ್ತುವರ್" ಮೊದಲಾದ ನಯಸೇನನ ಹೇಳಿಕೆಗಳು, ಅವರು ತೊಗಲನ್ನು ಹದಮಾಡುವ, ಆದರಿಂದ ತೊಗಲಿನ ಬಾರುಗಳನ್ನು ಸಿದ್ಧಪಡಿಸುವ ಕೆಲಸಗಳನ್ನು ಮಾಡುತ್ತಿದ್ದರೆಂಬುದು ವ್ಯಕ್ತವಾಗುತ್ತದೆ. ಹಣ ಪಡೆದು ಕೂಸುಗಳನ್ನು ಕೊಂದು ಬರುವ ಕೆಲಸವನ್ನೂ ಅವರು ಒಮ್ಮೊಮ್ಮೆ ಮಾಡುತ್ತಿರಬೇಕು. ಈ ರೀತಿಯಾಗಿ ನಯಸೇನ ಅವರ ಸ್ಥಿತಿಗತಿಗಳನ್ನು ತಿಳಿಸುತ್ತಾನೆ.

ಕ್ರಿ.ಶ. 1048ರ ಅಳೀಸಂದ್ರದ ಶಾಸನದಲ್ಲಿ[233] ದತ್ತಿ ನೀಡಿದ ಭೂಮಿಯ ಗಡಿಯನ್ನು ಗುರುತಿಸಿ ಹೇಳುವಾಗ 'ಹೊಲೆಗೆರೆ', 'ಹೊಲೆಗೇರಿ'ಗಳ ಹೆಸರಿವೆ. ಕಸಲಗೆರೆಯ ಶಾಸನದಲ್ಲಿ [234] 'ಹಗಮಗೆಱೆಯ ಹೊಲೆಯರ ಜೀವದ ಸಾಲಿನ .. ಬಾವಲಣಯ ಬಲ್ಲಾಳ ಜೀಯಂಗೆ ಬಿಟ್ಟದತ್ತಿ' ಎಂದು ಶಾಸನ ಮುಂದುವರಿಯುತ್ತದೆ. ಆದರೆ ಇಲ್ಲಿ ಶಾಸನ ಹಾಳಾಗಿರುವುದರಿಂದ ವಿಷಯ ಅಸ್ಪಷ್ಟವಿದೆ.

ಒಟ್ಟಿನಲ್ಲಿ ಈ ಅಧ್ಯಾಯದಲ್ಲಿ ಶಾಸನಗಳು ಹಾಗೂ ಸಾಹಿತ್ಯಾಧಾರಗಳ ಮೂಲಕ ಎಲ್ಲಾ ಕುಶಲಕರ್ಮಿಗಳನ್ನು ಚರ್ಚಿಸಲಾಗಿದೆ.

## ಪರಾಮರ್ಶನ ಗ್ರಂಥಗಳು


1. KI V, ನಂ. 53. ಹಾನಗಲ್, ಹಾನಗಲ್ (ತಾ) ಕ್ರಿ.ಶ. 1120-21, ಪು. 214.
2. EC VIII, ಹಾ 41, ಕ್ರಿ.ಶ. 1200, ಪು. 267.
3. EI XIII, ಬೆಳಗಾವಿ, ಬೆಳಗಾವಿ (ತಾ), ಕ್ರಿ.ಶ. 1204, ಪು. 19-22.
4. KI V, ನಂ. 102. ಮಲ್ಲಿಗವಾಡ, ಹುಬ್ಬಳ್ಳಿ (ತಾ), 12ನೇ ಶ. ಪು. 305.
5. SII XV, ನಂ. 46. ಸಾಲವಾಡಗಿ, ಬಾಗೇವಾಡಿ (ತಾ), ಜಗದೇಕಮಲ್ಲ II, ಪು. 62.
6. EI XIII, ಬೆಳಗಾವಿ, ಬೆಳಗಾವಿ (ತಾ), ಕ್ರಿ.ಶ. 1204, ಪು. 19-22.
7. SII XI(i), ನಂ. 97, ಮುಳುಗುಂದ, ಗದಗ (ತಾ), ಕ್ರಿ.ಶ. 1062, ಪು. 93.
8. SII XI(ii), ನಂ. 121. ಅಮ್ಮಿನಬಾವಿ, ಧಾರವಾಡ (ತಾ), ಕ್ರಿ. ಶ. 1071, ಪು. 139.
9. ಸಂಕೀರ್ಣ ವಚನ ಸಂಪುಟ 2, ಜೇಡರ ದಾಸಿಮಯ್ಯ ವಚನ, 738, ಕ.ಪು.ಪ್ರಾ., ಬೆಂಗಳೂರು, 2001, ಪು. 236.
10. EC VIII, ಹಾ 41, ಕ್ರಿ.ಶ. 1200, ಪು. 267.
11. KI V, ನಂ. 53. ಹಾನಗಲ್, ಹಾನಗಲ್ (ತಾ), ಕ್ರಿ.ಶ. 1120-21, ಪು. 214.
12. SII XVIII, ನಂ. 199. ಬಿಜಾಪುರ, ಬಿಜಾಪುರ (ತಾ), ಕ್ರಿ.ಶ. 1196, ಪು. 280.
13. KI V, ನಂ. 102. ಮಲ್ಲಿಗವಾಡ, ಹುಬ್ಬಳ್ಳಿ (ತಾ), 12ನೇ ಶ. ಪು. 305.
14. KI V, ನಂ. 53. ಹಾನಗಲ್, ಹಾನಗಲ್ (ತಾ) ಕ್ರಿ.ಶ. 1120-21, ಪು. 214.
15. KI V, ನಂ. 102. ಮಲ್ಲಿಗವಾಡ, ಹುಬ್ಬಳ್ಳಿ (ತಾ), 12ನೇ ಶ. ಪು. 305.
16. SII XX, ನಂ. 44. ರೂಗಿ, ಇಂಡಿ (ತಾ) ಕ್ರಿ.ಶ. 1069, ಪು. 49.
17. SII XX, ನಂ. 178. ಹಿಪ್ಪರಗಿ, ಸಿಂದಗಿ (ತಾ), ಕ್ರಿ.ಶ. 1192, ಪು. 225.
18. SII XV, ನಂ. 169. ಕೊಲ್ಹಾರ, ಬಾಗೇವಾಡಿ (ತಾ), ಕ್ರಿ.ಶ. 1223, ಪು. 215.
19. SII XI(ii), ನಂ. 121. ಅಮ್ಮಿನಬಾವಿ, ಧಾರವಾಡ (ತಾ), ಕ್ರಿ. ಶ. 1071, ಪು. 139.
20. SII XX, ನಂ. 78, ಲಕ್ಷ್ಮೇಶ್ವರ, ಶಿರಹಟ್ಟಿ (ತಾ), ಕ್ರಿ.ಶ. 1118, ಪು. 97.
21. SII XX, ನಂ. 304, ಅಣ್ಣಿಗೆರೆ, ನವಲಗುಂದ (ತಾ), 12ನೇ ಶ. ಪು. 337.
22. SII XI(ii), ನಂ. 121, ಅಮ್ಮಿನಬಾವಿ, ಧಾರವಾಡ (ತಾ), ಕ್ರಿ. ಶ. 1071, ಪು. 139.

ಅದು ಗಾಣದ ಸುತ್ತಲೂ ಸುತ್ತುವಾಗ ಇದೂ ಸುತ್ತಿ ಬೀಜಗಳನ್ನು ಅರೆಯುತ್ತಿತ್ತು. ಎತ್ತುಗಳನ್ನು ಕಟ್ಟಿ ಗಾಣವಾಡಿಸುವಾಗ ಗಾಣಿಗನು ಗಾಣದ ಕತ್ತರಿಯ ಮೇಲೆ ಕುಳಿತುಕೊಳ್ಳುತ್ತಿದ್ದ. ಇದಕ್ಕೆ ನಗೆಯ ಮಾರಿತಂದೆಯ ವಚನವನ್ನು[100] ಗಮನಿಸಬಹುದು. 'ಭೂಮಿಯ ಮಧ್ಯದಲ್ಲಿ ಒಬ್ಬ ಗಾಣಿಗ ಸ್ಥಾಣುವ ನೆಟ್ಟು, ಮೊದಲೊಂದು, ಬಾಯಿ ಮೂರು, ಕೊಂತವಾರು, ಎಂಟೆತ್ತು, ನೊಗ ಹದಿನಾರು, ಕೊರಳಕಣ್ಣಿ ನೂರೊಂದು, ಇಂತಿವ ಕೂಡಿ ಹೊಡೆಯಲಾಗಿ, ಒರಳ ಬಾಯಿಗೆ ಏರಿದ ಹಲಗೆಗೆ ಮೇಲೆ ಏತದ ಸೂತ್ರಕ್ಕೆ ಒಂದೆ, ಇದ ಹೇಳು, ಆತುರವೈರಿ ಮಾರೇಶ್ವರಾ ||' ಈ ವಚನವು ಗಾಣಿಗನ ಕೆಲಸದ ಚಿತ್ರಣವನ್ನು ನಮಗೆ ತಿಳಿಸುವುದು.

ಗಾಣಗಳಲ್ಲಿ ಮೂರು ಪ್ರಕಾರದ ಗಾಣಗಳಿದ್ದವು. ಅವು ಕೈಗಾಣ, ಎತ್ತುಗಾಣ ಹಾಗೂ ಮೆಟ್ಟುಗಾಣ.

**ಕೈಗಾಣ :** ಈ ಗಾಣವನ್ನು ಗಾಣಿಗರೇ ಕೈಯಿಂದ ತಿರುಗಿಸುತ್ತಿದ್ದುದು ಸ್ಪಷ್ಟ. ಕ್ರಿ.ಶ. 1184 ರ ಎರಡನೇ ವೀರ ಬಲ್ಲಾಳನ ಅರಸೀಕೆರೆಯ ಶಾಸನಗಳೆರಡು[101] ಕೈಗಾಣದ ಬಗ್ಗೆ ತಿಳಿಸುತ್ತವೆ. ಇದರಲ್ಲಿಯೇ ಕಲ್ಲಿನ ಕೈಗಾಣವಿದ್ದುದರ ಬಗ್ಗೆ ಕ್ರಿ.ಶ. 1165 ರ ನಾಗಮಂಗಲದ ಲಾಲನಕೆರೆ ಶಾಸನ[102] 'ದೇವರ ನಂದಾದೀವಿಗೆಗೆ ಬಿಟ್ಟ ಕಲ್ಲ ಕೈಗಾಣ' ಎಂದು ತಿಳಿಸುತ್ತದೆ. ಇದರಿಂದ ಕೈಗಾಣಗಳಲ್ಲಿ ಕಲ್ಲ ಕೈಗಾಣವಿದ್ದುದು ಸ್ಪಷ್ಟ.

***ಎತ್ತುಗಾಣ :*** ಎತ್ತನ್ನು ಗಾಣಕ್ಕೆ ಹೂಡಿ ತಿರುಗಿಸುತ್ತಿದ್ದ ಗಾಣ. ಕ್ರಿ.ಶ. 1175 ರ ಮೈಸೂರಿನ ಶಾಸನ,[103] ಕ್ರಿ.ಶ. 1101 ರ ವಿಷ್ಣುವರ್ಧನನ ಅರಸೀಕೆರೆಯ ಶಾಸನ [104], ಕ್ರಿ.ಶ. 1173 ರ ಬಲ್ಲಾಳನ ಅರಸೀಕೆರೆಯ ಶಾಸನ[105] ಹೀಗೆ ಅನೇಕ ಶಾಸನಗಳು ಎತ್ತುಗಾಣಗಳಿದ್ದುದರ ಬಗ್ಗೆ ತಿಳಿಸುತ್ತವೆ. ಕೇವಲ ಶಾಸನಾಧಾರಗಳಲ್ಲದೆ ವಚನ ಸಾಹಿತ್ಯದ ಮೂಲಕವು ಎತ್ತುಗಾಣವಿದ್ದುದರ ಬಗ್ಗೆ ತಿಳಿಯಬಹುದು. ಬಸವಣ್ಣನವರ 'ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತ್ತೆನ್ನ ಭಕ್ತಿ' [106] ಎಂಬ ವಚನ, 'ಮಾಣದೆ ಅರಳೆಯ ತಿಟ್ಟನೆ ತಿರುಗುವ ಗಾಣದೆತ್ತಿನಂತೆ '[107] ಎಂಬಂಥಹ ವಚನಗಳು ಎತ್ತುಗಾಣದ ಬಗ್ಗೆ ತಿಳಿಸುತ್ತವೆ.

ಈ ಎತ್ತುಗಾಣದಲ್ಲಿ ಒಂದೆತ್ತು ಗಾಣ ಹಾಗೂ ಒಂದಕ್ಕಿಂತ ಹೆಚ್ಚು ಎತ್ತುಗಳನ್ನು ಗಾಣಕ್ಕೆ ಹೂಡಿ ಎಣ್ಣೆಯನ್ನು ಉತ್ಪಾದಿಸುತ್ತಿದ್ದುದನ್ನು ತಿಳಿಯಬಹುದು. ಕ್ರಿ.ಶ. 1174ರ ಎರಡನೇ ಬಲ್ಲಾಳನ ಪಾಂಡವಪುರದ ತೊಣ್ಣೂರು ಶಾಸನವು [108] 'ದೇವರ ಮಜ್ಜನದ ಪಡಿಯ ಕೈಯಿದೀವಿಗೆಗೆ ವೊಂದೆತ್ತು ಗಾಣದ ಸು[ಂ]ಕ್ಕದ' ಎಂದು ತಿಳಿಸುವುದರಿಂದ ಒಂದೆತ್ತು ಗಾಣವಿದ್ದುದು ಸ್ಪಷ್ಟ.

ಬಹುಶಃ ಎತ್ತುಗಳ ಸಂಖ್ಯೆ ಹೆಚ್ಚಾದಂತೆ ಉತ್ಪಾದಿಸುತ್ತಿದ್ದ ಎಣ್ಣೆಯ ಪ್ರಮಾಣವೂ ಅಧಿಕವಾಗಿ ಉತ್ಪಾದನೆಯಾಗುತ್ತಿರಬಹುದೆಂದು ತಿಳಿಯಬಹುದು.

***ಮೆಟ್ಟುಗಾಣ :*** ಈ ಗಾಣವು ಬಹುಶಃ ತುಳಿತದ ಮೂಲಕ ಕಾರ್ಯ ನಿರ್ವಹಿಸುವ ಗಾಣವೆಂದು ಅದರ ಹೆಸರಿನಿಂದ ಊಹಿಸಬಹುದಾಗಿದೆ. ಈ ಗಾಣದ ಬಗ್ಗೆ ಕೆಲವೇ ಶಾಸನಗಳು ತಿಳಿಸುತ್ತವೆ. ಅವುಗಳಲ್ಲಿ ಕ್ರಿ.ಶ. 1173ರ ಹೊಯ್ಸಳ ದೊರೆ ಮೊದಲನೇ ನರಸಿಂಹನ ಹಳೇಬೀಡು ಶಾಸನ[109] 'ಮೆಟ್ಟುಗಾಣದೊಕ್ಕಲೈವತ್ತು' ಎಂದು ತಿಳಿಸುತ್ತದೆ. ಅಂದರೆ ಈ ಮೆಟ್ಟುಗಾಣದ ತೆಲ್ಲಿಗರ ಐವತ್ತು ಒಕ್ಕಲುಗಳಿದ್ದುದು ಸ್ಪಷ್ಟ. ಹೀಗೆ ಕೆಲವೇ ಶಾಸನಗಳು ಮೆಟ್ಟುಗಾಣದ ಬಗ್ಗೆ ತಿಳಿಸುತ್ತವೆ.

ಒಟ್ಟಿನಲ್ಲಿ ಶಾಸನ ಹಾಗೂ ಸಾಹಿತ್ಯಾಧಾರಗಳ ಹಿನ್ನೆಲೆಯಲ್ಲಿ ಈ ಮೂರು ರೀತಿಯ ಗಾಣಗಳಲ್ಲಿ ಎತ್ತುಗಾಣಗಳೇ ಅಧಿಕವಾಗಿದ್ದವೆಂಬುದನ್ನು ನಿಸ್ಸಂಶಯವಾಗಿ ಹೇಳಬಹುದು.

### 3.7.2. ಉಪಕರಣಗಳು

1. ಕಲ್ಲು : ಗಾಣದ ಕಲ್ಲು, ಎಣ್ಣೆಕಾಳುಗಳನ್ನು ಬೇಳೆಯಾಗುವಂತೆ ಮಾಡಲು ಬಳಕೆಯಾಗುವ ಕಲ್ಲು. ಇದು ಬೀಸುಕಲ್ಲಿನ ಆಕಾರದಂತಿದ್ದು ಗಾತ್ರದಲ್ಲಿ ಅದಕ್ಕಿಂತ ದೊಡ್ಡದಿರುತ್ತದೆ.
2. ಒರಳು : ಗಾಣದ ಕಲ್ಲಿನ ಮಧ್ಯಭಾಗ. ಗಾಣದ ಕಲ್ಲಿನ ಮಧ್ಯದಲ್ಲಿ $1^1/_2$, 2 ಅಡಿ ಆಳದ ರಂಧ್ರ ಇರುತ್ತದೆ. ಅದರೊಳಗೆ ಕಣೆ ಇಳಿಸಿರುತ್ತಾರೆ. ಗಾಣದ ಕ್ರಿಯೆ ಮುಗಿದ ನಂತರ ಇದರೊಳಗೆ ಎಣ್ಣೆ ಶೇಖರವಾಗುತ್ತದೆ. ಒರಳು > ಒಳ್ಳು.
3. ಕಣೆ : ವರ್ತುಲಾಕಾರವಾಗಿರುವ ಕಟ್ಟಿಗೆಯ ತುಂಡು. ಇದು ತುಂಬ ಬಿರುಸಾಗಿರುತ್ತದೆ.
4. ಕತ್ತರಿ : ಗಾಣದ ಭಾರವನ್ನು ಹೋರುವ ಚೌಕಾಕಾರದ ಕಟ್ಟಿಗೆಯ ಕೊರಡು. ಇದು 5,6 ಅಡಿ ಉದ್ದವಾಗಿದ್ದು 1 ಮಳಾ ಅಗಲವಾಗಿರುತ್ತದೆ. ಎತ್ತು ಮತ್ತು ಕಣೆಗೆ ಇದನ್ನು ಸೇರಿಸಿರುತ್ತಾರೆ.
5. ಡೊಂಕಿ : ಕಣೆ ಮತ್ತು ಕತ್ತರಿಕಟ್ಟಿಗೆಯನ್ನು ಹಗ್ಗದ ಸಹಾಯದಿಂದ ಜೋಡಿಸುವ ವಕ್ರವಾಗಿರುವ ಮರದ ದುಂಡು. ಹಿರೇಕೆರೂರ್‌ನ ಶಾಸನವೊಂದರಲ್ಲಿ ಇದಕ್ಕೆ ತೆರಿಗೆ ಹಾಕಿದ್ದು ಇದೆ.
6. ನೊಗ : ಗಾಣದ ಎತ್ತುಗಳ ಹೆಗಲ ಮೇಲೆ ಹೇರುವ ಮರದ ದಿಂಡು.

7. ಮಾಲಗಂಬ : ಕತ್ತರಿಕಟ್ಟಿಗೆಯನ್ನು ಆಳದ ಹಗ್ಗಕ್ಕೆ ಸೇರಿಸುವ ಕಟ್ಟಿಗೆಯ ತುಂಡು.

8. ಜದಿಮಿಣಿ : ಗಾಣದ ಕಲ್ಲಿನ ಸುತ್ತಲು ತಿರುಗುವ ದಪ್ಪ ಹಗ್ಗ. ಇದು ಕತ್ತರಿ ಕಟ್ಟಿಗೆಯ ಸಮತೋಲನತೆಯನ್ನು ಕಾಪಾಡುತ್ತದೆ.

9. ಸರಡಬ್ಬಿ : ಗಾಣದ ಸುತ್ತಲೂ ಎತ್ತು ತಿರುಗುವಾಗ ಅದರ ಬಾಯಿಯ ಜೊಲ್ಲು ಗಾಣಬರಿಯಲ್ಲಿ ಬೀಳದಂತೆ ಎತ್ತುಗಳ ಬಾಯಿಗೆ ಹಾಕುವ ಡಬ್ಬಿ

10. ಸರಪಳಿ : ಕೊಂಡಿಗಳಿಂದ ಕೂಡಿದ ಲೋಹದ ಹಗ್ಗ. ನೊಗ ಹಾಗೂ ಕತ್ತರಿ ಕಟ್ಟಿಗೆಗೆ ಇದನ್ನು ಸೇರಿಸಿರುತ್ತಾರೆ.

11. ಹಗ್ಗ : ನೂಲನ್ನು ಹೊಸೆದು ತಯಾರಿಸಿದ ಹುರಿ.

12. ಒರಸಗ್ಗ : ಎತ್ತು ಹಾಗೂ ಕತ್ತರಿ ಕಟ್ಟಿಗೆಯನ್ನು ಸೇರಿಸುವ ಹಗ್ಗ. ಇದಕ್ಕೆ ಎಣ್ಣೆಯನ್ನು ಹಚ್ಚಿರುತ್ತಾರೆ.

13. ಹಾರಿ : ಒಂದು ಬಗೆಯ ಕಬ್ಬಿಣದ ಉಪಕರಣ. ಗಾಣದ ಕ್ರಿಯೆ ಮುಗಿದ ನಂತರ ಒರಳಿನಲ್ಲಿರುವ ಹಿಂಡಿಯನ್ನು ತೆಗೆಯಲು ಇದನ್ನು ಉಪಯೋಗಿಸುತ್ತಾರೆ.

ಈ ಎಲ್ಲಾ ಉಪಕರಣಗಳನ್ನು ಗಾಣಿಗ ತನ್ನ ಕಾರ್ಯದಲ್ಲಿ ಉಪಯೋಗಿಸಿಕೊಳ್ಳುತ್ತಾನೆ.

### 3.7.3. ಉತ್ಪಾದನಾ ಪ್ರಕ್ರಿಯೆ

ಗಾಣದ ಒರಳು 3 ರಿಂದ 4 ಅಡಿ ಸುತ್ತಳತೆ, 5 ರಿಂದ 6 ಅಡಿ ಆಳದಲ್ಲಿರುತ್ತದೆ. ಒಂದು ಸಲಕ್ಕೆ ಸು. 30–40 ಕಿಲೋ ಎಣ್ಣೆ ಕಾಳುಗಳನ್ನು ಹಿಡಿಯುವ ಗಾತ್ರದ್ದು. ಮೇಲಿನ ನೊಗ ಮತ್ತು ಒರಳಿನಲ್ಲಿರುವ ದಪ್ಪನೆಯ ಸು. 5 ರಿಂದ 6 ಅಡಿ ಉದ್ದನೆಯ ಕಣೆಯನ್ನು ಗಟ್ಟಿಯಾಗಿ ಜೋಡಿಸಿ ಕಟ್ಟಲಾಗುತ್ತದೆ. ಗಾಣ ತಿರುಗಿದಂತೆಲ್ಲಾ ಕಾಳು ಸಣ್ಣಾಗಿ ಎಣ್ಣೆಯನ್ನು ಒಂದು 'ಹೊಂಡ' ಅಥವಾ ಪಾತ್ರೆಯಲ್ಲಿ ಬಸಿಯುತ್ತಾರೆ. ಕಾಳಿನಲ್ಲಿ ಎಣ್ಣೆಯ ಅಂಶ ಮುಗಿದಾಗ ಒರಳಿನಲ್ಲಿ ಕಣೆಯ ತುದಿಗೆ ಅದು ಗಟ್ಟಿಯಾಗಿ 'ಹಿಂಡಿ'ಯಾಗುತ್ತದೆ. ಕಣೆಯ ಮೇಲ್ಭಾಗದಲ್ಲಿ ಕಲ್ಲಿನ ಭಾರ ಹೇರಿ ಕಣೆ ಒರಳಲ್ಲಿ ಒತ್ತುಕೊಟ್ಟಾಗ ನೊಗಕ್ಕೆ ಹೂಡಿದ ಎತ್ತು ಗಾಣದ ಸುತ್ತ ಚಲಿಸುತ್ತದೆ. ಸುತ್ತು ತೀವ್ರವಾದಂತೆ ಎಣ್ಣೆ ಮತ್ತು ಹಿಂಡಿಗಳು ಸಹಜವಾಗಿ ಬೇರೆಯಾಗುತ್ತದೆ.

ನಮಗೆ ಈ ಕುರಿತು ಅಲ್ಲಲ್ಲಿ ಸಾಹಿತ್ಯೋಲ್ಲೇಖಗಳು ಸಿಗುತ್ತವೆ. [110] ಲೋಕೋಪಕಾರಂವು ಎಳ್ಳಿನಿಂದ ಎಣ್ಣೆ ಉತ್ಪಾದಿಸುವುದನ್ನು ಹೀಗೆ ಉಲ್ಲೇಖಿಸುತ್ತದೆ. 'ಎಳ್ಳನ್ನು ಚೆನ್ನಾಗಿ ಸಿಪ್ಪೆ ಕಳೆಯುವಂತೆ ತೊಳೆದು ಒಣಗಿಸಿ ಅದಕ್ಕೆ

ಯಾವುದಾದರೊಂದು ಪರಿಮಳ ಪುಷ್ಪದ ವಾಸನೆ ಕೊಟ್ಟು ಆ ಎಳ್ಳನ್ನು ಗಾಣ ಆಡಿಸಬೇಕು. ಬಳಿಕ ಆ ತೈಲಕ್ಕೆ ಪುನಃ ಸುಗಂಧ ಕುಸುಮಗಳ ಸುವಾಸನೆ ಬೆರೆಸಲು, ಆ ಸುಗಂಧ ತೈಲಕ್ಕೆ ಅದೇ ಹೂವಿನ ಹೆಸರುಬರುವುದು ಎಂದಿದ್ದಾನೆ.

### 3.7.4. ತಾಂತ್ರಿಕ ಶಿಕ್ಷಣ

ಇದು ಕೂಡ ವಂಶಪಾರಂಪರ್ಯವಾಗಿ ಬಂದ ವೃತ್ತಿಯಾದ್ದರಿಂದ ಮನೆಯ ಹಿರಿಯರೇ ತಮ್ಮ ಮಕ್ಕಳು, ಮೊಮ್ಮಕ್ಕಳಿಗೆ ಈ ವೃತ್ತಿಯ ಕುರಿತು ಕಲಿಸಿರುತ್ತಾರೆ.

## 3.8. ಶಿಲ್ಪಿಗಳು

### 3.8.1. ಶಿಲ್ಪಿಯ ತಾಂತ್ರಿಕ ವಿವರಗಳು

ನಮ್ಮ ಒಬ್ಬಿಬ್ಬರು ರೂಪಾರಿಗಳು ಕನ್ನಡ ಅಕ್ಷರಗಳನ್ನು ಕೊರೆಯುವಲ್ಲಿ ರೂವಾರಿ ಅರಿತಿರಬೇಕಾದ ಕೆಲವು ಸಂಗತಿಗಳನ್ನು ಹೀಗೆ ಹೇಳುತ್ತಾರೆ.

*ಪೊಕ್ಕುಳು ತಲೆಕಟ್ಟು ಮನ /*
*ನ್ನಕ್ಕರದವಯವಮನಱಿದು ಖಣ್ಡರಿಸಲು ಕೀ /*
*ಇಕ್ಕುಡನೆ ಬಲ್ಲನಱಿಯ /*
*ಮ್ಮಿರ್ಕ್ಕವರೆನ್ದೊಸೆದು ಧರಣಿ ಬಣ್ಣಿಸು ತಿರ್ಕ್ಕು೦ //*[111]

ಪೊಕ್ಕಳು ಎಂದರೆ ಅಕ್ಷರದ ಮುಖ್ಯಭಾಗ, ತಲೆಕಟ್ಟು ಮತ್ತು ಇತರ ಅವಯವ ಇವು ಕನ್ನಡ ಅಕ್ಷರಗಳ ಅಂಗತ್ರಯ. ಅಕ್ಷರಗಳನ್ನು ಬಿಡಿಸುವಲ್ಲಿ ರೂವಾರಿ ಅವಶ್ಯ ಅರಿತಿರಬೇಕಾದ ಅಂಶಗಳಿವು ಎಂದು ಇಕ್ಕುಡನೆಂಬ ರೂವಾರಿಯ ಅಭಿಪ್ರಾಯ. ಕನ್ನಡ ನಾಡಿನ ಸುಪ್ರಸಿದ್ಧ ಶಿಲ್ಪಿಗಳಲ್ಲೊಬ್ಬನಾದ ಈತನ ಈ ಹೇಳಿಕೆ ಶಾಸ್ತ್ರಶುದ್ಧವಾಗಿದೆ.

*ಬಹುರೇಖೆಯಾಗಿ ಬಾರದೆ /*
*ಯತಿ ನಿಬಿಡಂ ನೇರ್ಪಡೆಲ್ಲರುಂ ಪೊಗಳಲು ಕೀ /*
*ವಸ್ಥಿತಿಯೊಳು ಕಣ್ಗೊಳಿಸಲು /*
*ಕತಿ ಬಲ್ಲಂ ದಾಸೋಜನಗ್ರತನಯಮ್ಮಸಣಂ //*[112]

ಇನ್ನೊಬ್ಬ ರೂವಾರಿ, ದಾಸೋಜನ ಹಿರಿಯ ಮಗ ಮಸಣನ ಹೇಳಿಕೆಯಿದು. ಕನ್ನಡ ಅಕ್ಷರಗಳು ಬಹುರೇಖೆಯಾಗಿ ಬಾರದೆ ಅಂದರೆ ವರ್ತುಲಗೊಂಡು ಬರಬೇಕು, ಯತಿ ನಿಬಿಡಂ ನೇರ್ಪಡೆ ಅಂದರೆ ಅಕ್ಷರ ಮತ್ತು

ಪದಗಳ ಮಧ್ಯ ಯೋಗ್ಯ ಸ್ಥಳವಿರಬೇಕು ಎಂದು ಹೇಳುವಲ್ಲಿ ಕನ್ನಡದ ಅಕ್ಷರವಿನ್ಯಾಸ, ಪದವಿನ್ಯಾಸಗಳನ್ನು ಸ್ಪಷ್ಟಪಡಿಸಿರುವನು. ಇವು ಕನ್ನಡ ಲೇಖನ ಶಾಸ್ತ್ರಕ್ಕೆ (Calligraphy) ರೂವಾರಿಗಳು ನೀಡಿದ ಎರಡು ಅಪರೂಪ ಹೇಳಿಕೆಗಳಾಗಿವೆ.

### 3.8.2. ಶಿಕ್ಷಣ ವ್ಯವಸ್ಥೆ

ಪ್ರಾಚೀನ ದೇವಸ್ಥಾನಗಳ ಗೋಡೆಗಳ ಮೇಲೆ ಕೆತ್ತಿರುವ ಪುರಾಣದ ಕಥೆಗಳನ್ನು ಗಮನಿಸಿದಾಗ ಆಗಿನ ಕಾಲದ ಶಿಲ್ಪಿಗಳು ಆಯಾ ಪುರಾಣಗಳನ್ನು ಓದಿಕೊಂಡಿದ್ದರು ಎಂದೂ, ಶಿಲಾಬಾಲಿಕೆಯರೆ ಮೊದಲಾದ ಶಿಲ್ಪಗಳ ನೃತ್ಯಭಂಗಿಗಳನ್ನು ನೋಡಿದಾಗ ಶಿಲ್ಪಿಗಳು ನಾಟ್ಯಶಾಸ್ತ್ರವನ್ನು ಅಧ್ಯಯನ ಮಾಡಿರಬಹುದು ಎಂದು ಊಹಿಸಬಹುದು.

ಶಿಲ್ಪಿಗಳು ಭರತಮುನಿಯ ನಾಟ್ಯಶಾಸ್ತ್ರವನ್ನು ತಿಳಿದುಕೊಂಡಿಲ್ಲದೆ ಬೇಲೂರು ಶಿಲಾಬಾಲಿಕೆಯರಂತಹ ಶಾಸ್ತ್ರೀಯ ನೃತ್ಯಭಂಗಿಗಳನ್ನು ಒಳಗೊಂಡ ಕಲಾಕೃತಿಗಳನ್ನು ರಚಿಸಲು ಬಹುಶಃ ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ ಬೇಲೂರು, ಹಳೇಬೀಡು, ಬಳ್ಳಿಗಾವೆ ಮೊದಲಾದ ದೇವಸ್ಥಾನಗಳ ಗೋಡೆಯಲ್ಲೂ ಕಂಬಗಳಲ್ಲೂ ಇರುವ ನೃತ್ಯ ಭಂಗಿಯ ಶಿಲ್ಪಗಳು ಶಿಲ್ಪಿಗಳಿಗೆ ನಾಟ್ಯಶಾಸ್ತ್ರದಲ್ಲಿದ್ದ ಪಾಂಡಿತ್ಯವನ್ನು ಸಾರುತ್ತವೆ ಎಂಬ ವಿದ್ವಾಂಸರ ಮಾತುಗಳು ಸತ್ಯವಾದವು. ಇದರಿಂದ ಶಿಲ್ಪಿಗಳು ಕೇವಲ ದೇಹಶ್ರಮವಷ್ಟೇ ಅಲ್ಲದೆ ಬೌದ್ಧಿಕ ಪರಿಶ್ರಮ ಪಡುತ್ತಿದ್ದುದು ಗೊತ್ತಾಗುತ್ತದೆ.

ಶಿಲ್ಪಶಾಸ್ತ್ರ ಗ್ರಂಥಗಳು ಶಿಲ್ಪಿಯು ತನ್ನ ಶಿಲ್ಪಕರ್ಮಕ್ಕೆ ಸಂಬಂಧಿಸಿದಂತೆ ಅನೇಕ ಪೂರಕವಾದ ವಿಷಯಗಳನ್ನು ತಿಳಿದವನಾಗಿರಬೇಕೆಂದು ಹೇಳುತ್ತವೆ. ಗಣಿತ, ಪುರಾಣ, ಛಂದಸ್ಸು, ಚಿತ್ರ, ಸಾಮುದ್ರಾ, ಜ್ಯೋತಿಷ್ಯ, ಉಪಕರಣಗಳ ಶಾಸ್ತ್ರ ಆಲೇಖ್ಯ, ದಾರುಕರ್ಮ, ಪಾಷಾಣ ವಿಧಿ, ಹೇಮಕರ್ಮ, ಯಂತ್ರಕರ್ಮ ಹೀಗೆ ಅನೇಕ ವಿಷಯಗಳ ಪಟ್ಟಿಯನ್ನು ಕೊಡುತ್ತವೆ.[113] ಶಿಲಾಶಾಸನಗಳು ಇದಕ್ಕೆ ಪೂರಕವಾಗಿ ಶಿಲ್ಪಿಯಾದವನು ತಿಳಿದುಕೊಂಡಿರುತ್ತಿದ್ದ ವಿಷಯಗಳನ್ನು ಹೀಗೆ ತಿಳಿಸುತ್ತವೆ.

ಕ್ರಿ.ಶ. 776-77ರ ದೇವರಹಳ್ಳಿಯ ಶಾಸನ[114] 'ಸರ್ವ್ವಕಲಾಧಾರಭೂತ ಚಿತ್ರಕಲಾಭಿಜ್ಞೇನ ವಿಶ್ವಕರ್ಮ್ಮಾಚಾರ್ಯ್ಯೇಣೇದಂ ಶಾಸನಮ್ ಲಿಖಿತಮ್' ಎಂದು, ಕ್ರಿ.ಶ. 1082ರ ಕುರ್ತುಕೋಟಿ ಶಾಸನ [115] 'ಪುರಿಕರಪಟ್ಟಣೋದ್ಭವನ ಕಂಟದ ಬಮ್ಮನ ಪುತ್ರನಯ್ಯಣಂ ಮರವೆಸೆದೊಪ್ಪು ವಿಟ್ಟಗೆಯ ದನ್ತದ ಚಿತ್ರದ ಶಾಸ್ತ್ರಯುಕ್ತಮಾಗಿರೆ ಬೆಸೆಗೆಯ್ವ ಕಲುಭರಿವ ಕಮ್ಮಟಿ ವಿನ್ನಣದೋಜೆಗೆಲ್ಲಿಯುಂ ಪರಿಕಿಸೆ ವಿಶ್ವಕರ್ಮ್ಮನಿನವಂ

ಮಿಗಿಲೆಂಬುದಶೇಷಭೂತಳ' ಎಂದು, ಕ್ರಿ.ಶ. 1102ರ ಬೆಳವಂಕಿ ಶಾಸನವು[116] 'ಮರವೆಸದೊಳ್ ಕಲ್ವೆಸದೊಳ್ ವರಪತ್ರಚ್ಛೇದ ... ರ್ಮ್ಮಂಗಳೊಳುಂ ದೊರೆ ವಿಶ್ವಕರ್ಮ್ಮನುಳಿದ' ಎಂದೂ ಕ್ರಿ.ಶ. 1117 ರ ಮಾಳಗೂರು ಶಾಸನವು[117] 'ವಿಶ್ವಕರ್ಮ ತೋಟಕಾಚಾರ್ಯರಪ್ಪ ಹಸ್ತಕುಸಳತೆಯೊಳು ಹೇಮಕರ್ಮ್ಮ ಲೋಹಕರ್ಮ್ಮ ಶಿಲಾಕರ್ಮ್ಮ ರತ್ನಕರ್ಮ ಕಾಷ್ಟಕರ್ಮ್ಮ ಚಿತ್ರಕರ್ಮ್ಮ ಪತ್ರಕರ್ಮ ಪ್ರತಿಮಾ ಲಕ್ಷಣ ಸಮಸ್ತ ಹಸ್ತ ಕುಶಲತೆಯುಳ್ಳ ವಿಶ್ವಕರ್ಮ ನಿರ್ಮಿತಮಪ ' ಎಂದೂ ಉಲ್ಲೇಖಿಸುತ್ತವೆ.

ಹೀಗೆ ಮೇಲಿನ ಶಾಸನೋಲ್ಲೇಖಗಳಿಂದ ಹಾಗೂ ಅವರು ರಚಿಸಿದ ದೇವಸ್ಥಾನಾದಿ ಕೃತಿಗಳಿಂದ ಎಲ್ಲ ವಿಧವಾದ ಶಿಲ್ಪ ಕರ್ಮ ಸಂಬಂಧಿ ವಿಷಯಗಳಲ್ಲಿ ಪರಿಣಿತಿಯನ್ನು ಸಾಧಿಸಿದ್ದರು ಎಂದು ತಿಳಿಯಬಹುದಾಗಿದೆ.

ಈ ಪರಿಣತಿಯ ಹಿಂದೆ ಅವರಿಗೆ ಪುಸ್ತಕ ಜ್ಞಾನ ಇತ್ತೆ? ಸಂಸ್ಕೃತ ಶಿಲ್ಪಶಾಸ್ತ್ರ ಗ್ರಂಥಗಳನ್ನು ಓದಿಕೊಂಡಿದ್ದರೆ? ಯಾವ ಯಾವ ಶಾಸ್ತ್ರ ಗ್ರಂಥಗಳನ್ನು ಓದಿಕೊಂಡು ಅನುಸರಿಸಿ ಕೃತಿ ರಚನೆ ಮಾಡುತ್ತಿದ್ದರು? ಶಿಕ್ಷಣವನ್ನು ಹೇಗೆ ಪಡೆಯುತ್ತಿದ್ದರು? ಅನುವಂಶಿಕವಾಗಿ ತಂದೆಯು ಮಗನಿಗೆ ಮನೆಯಲ್ಲೇ ಹೇಳಿಕೊಡುತ್ತಿದ್ದನೆ? ಮೊದಲಾದ ಪ್ರಶ್ನೆಗಳು ನಮ್ಮ ಮನಸ್ಸಿನಲ್ಲಿ ಉದ್ಭವಿಸುತ್ತವೆ.

ಈ ದೃಷ್ಟಿಯಿಂದ ಶಾಸನಗಳನ್ನು ಪರೀಕ್ಷಿಸಿದಾಗ ಶಾಸನಗಳಲ್ಲಿ ಎಲ್ಲಿಯೂ ಯಾವ ಶಿಲ್ಪಶಾಸ್ತ್ರವನ್ನೂ ಹೆಸರಿಸಿಲ್ಲ. ಪ್ರಸಿದ್ಧ ಶಿಲ್ಪಗ್ರಂಥವಾದ ಮಾನಸಾರದ ಹೆಸರೂ ಇಲ್ಲ. ಒಂದೇ ಒಂದು ಕಡೆ 'ಗುಣಪಾ ... ರ್ಯ' ಎಂಬುವನ 'ಶಾಸ್ತ್ರ'ವನ್ನು, ತಾನು ಶಾಸನವನ್ನು ಕೆತ್ತುವುದರಲ್ಲಿ ಅನುಸರಿಸಿರುವುದಾಗಿ ಒಬ್ಬ ಶಿಲ್ಪಿ (ಗುಲಗೋಜ) ಯು ಹೇಳಿದ್ದಾನೆ. ಈ 'ಗುಣಪಾ ... ರ್ಯ 'ನ ವಿಷಯದಲ್ಲಿ ನಮಗೆ ಏನೂ ತಿಳಿಯದು ಎಂದು ಡಾ. ಚಿದಾನಂದಮೂರ್ತಿಯವರು[118] ಅಭಿಪ್ರಾಯಿಸುತ್ತಾರೆ.

ಆದರೆ ಯಾವುದೇ ಶಾಸನದಲ್ಲೂ ನೇರವಾಗಿ ಶಿಲ್ಪಶಾಸ್ತ್ರವನ್ನು ಉಲ್ಲೇಖಿಸುವ ಶಾಸನೋಲ್ಲೇಖಗಳು ನಮಗೆ ಇದುವರೆಗೂ ದೊರೆತಿಲ್ಲ.

ಕ್ರಿ.ಶ. 1129ರ ಮೂಡಗೆರೆ ಶಾಸನವು[119] 'ನಾಗರಾದಿನಾಗರಿಕದ್ರಾವಿಳ ಸಮುದ್ಧರಣನಪ್ಪ ಮಾಣಿಮೋಜನ ಮಗಂ ಬಿರುದರೂವಾರಿ ವೇಶ್ಯಾಭುಜಂಗ ಬಲಕೋಜ ಕಣ್ಡರಿಸಿದಂ ಮಂಗಳಂ' ಎಂಬ ಶಾಸನೋಲ್ಲೇಖವು ಮಾಣಿಮೋಜನೆನ್ನುವವನು ನಾಗರ, ಆದಿನಾಗರ, ದ್ರಾವಿಡ ಮೊದಲಾದ ಭಾರತೀಯ ಸಾಂಪ್ರದಾಯಿಕ ಶಿಲ್ಪ

ಪದ್ಧತಿಯನ್ನು ತಿಳಿದವನಾಗಿದ್ದು, ನಾಗರ ಮತ್ತು ದ್ರಾವಿಡ ಶಿಲ್ಪ ಪರಂಪರೆಯನ್ನು ಎತ್ತಿಹಿಡಿದು ಪ್ರಚುರಪಡಿಸಿದ ಮಹಾಶಿಲ್ಪಿಯಾಗಿದ್ದಿರಬೇಕು ಎಂಬುದನ್ನು ನಮಗೆ ತಿಳಿಯಪಡಿಸುತ್ತದೆ.

ಹೀಗೆ ಅಲ್ಲಲ್ಲಿಯೇ ವಿರಳವಾಗಿ ಸಿಗುವ ಕೆಲವಾರು ಶಾಸನಗಳ ಆಧಾರದ ಮೇಲೆ ಶಿಲ್ಪಿಗಳು ಗುಣಪಾರ್ಯಾದಿಗಳು ವಿರಚಿಸಿದ ಶಾಸ್ತ್ರಗಳನ್ನು ಓದಿಕೊಂಡಿದ್ದರು. ಓಜುಗಳು ಶಿಲ್ಪಶಾಸ್ತ್ರಗಳಲ್ಲಿರುವ ಶ್ಲೋಕಗಳನ್ನು ಸಮಯೋಚಿತವಾಗಿ ಉಲ್ಲೇಖಿಸುತ್ತಿದ್ದರು. ಶಾಸ್ತ್ರೀಯವಾಗಿ ಕಟ್ಟುತ್ತಿದ್ದರು. ನಾಗರ, ಆದಿನಾಗರ, ದ್ರಾವಿಡಾದಿ ಪ್ರಸಿದ್ಧ ಭಾರತೀಯ ಶಿಲ್ಪ ಪದ್ಧತಿಯನ್ನು ಪ್ರಚುರಪಡಿಸುವಷ್ಟು ಪ್ರೌಢರಾಗಿದ್ದರು ಎಂದು ನಾವು ವಿವೇಚಿಸಬಹುದು.

ಕ್ರಿ.ಶ. 1138ರ ಯಲಿಶಿರೂರ್ ಶಾಸನವು[120] 'ಹೊಸವುರ ಮೊರಕೇಶ್ವರ ದೇವರ ಓಜನ ಮಗ ಸಿಂಗೋಜನ ಪುತ್ರ ಗಣಪೋಜನ ಬರೆಪಂ' ಎಂದು, ಕುರ್ತುಕೋಟೆ ಶಾಸನವು[121] 'ಬಮ್ಮನ ಪುತ್ರನಯ್ಯಣಂ' ಎಂದು, ಕ್ರಿ.ಶ. 1045ರ ಮೋರಿಗೆರೆ ಶಾಸನವು[122] 'ಅಗ್ಗಳೋಜನ ಮಗಂ ರೂವಾರಿ ಮುಚ್ಚೋಜಂ ಬೆಸಗೆಯ್ದ' ಎಂದು, ಬೇಲೂರು ಶಾಸನವು[123] ಸರಸ್ವತೀ ಪಾದಾಂಭೋಜ ರೂವಾರಿ ಜಗದಳ ಕಾಡೋಜನ ಪುತ್ರ ನಾಗೋಜನ ಹಸ್ತಕೌಶಳ ಮಂಗಳಮಹಾಶ್ರೀ ಹಾಗೂ 'ರೂವಾರಿ ದಾಸೋಜನ ಪುತ್ರ ಚಾವಾಣ ಮಾಡಿದ ಪುತ್ತಳಿ ಮಚ್ಚರಿಪ ಬಿರುದ ರೂವಾರಿ ಮದನ ಮಹೇಶ್ವರ ಕೇಶವದೇ [ವ] ಮಾಡಿಸಿದ'[124] ಎಂಬ ಉಲ್ಲೇಖಗಳು ತಂದೆಯ ಜೊತೆಯಲ್ಲಿ ಕೆಲಸವನ್ನು ಮಾಡುತ್ತಾ ಶಿಲ್ಪವಿದ್ಯೆಯನ್ನು ಕಲಿಯುತ್ತಿದ್ದುದು ಗೊತ್ತಾಗುತ್ತದೆ.

ನಮಗೆ ಅಲ್ಲಲ್ಲಿಯೇ ಅಪರೂಪಕ್ಕೆ ಗುರುಗಳ ಬಳಿಗೆ ಹೋಗಿ ಶಿಷ್ಯತ್ವವನ್ನು ಸ್ವೀಕರಿಸಿ ಶಿಲ್ಪವಿದ್ಯೆಯನ್ನು ಕಲಿತ ಉದಾಹರಣೆಗಳು ಕೂಡ ಶಾಸನಗಳಿಂದ ಗೊತ್ತಾಗುತ್ತದೆ. ಒಬ್ಬ ಶಿಲ್ಪಿಯು ತಾನು 'ನಾಗವರ್ಮ್ಮನ ಛಾತ್ರ[ಂ]'[125] ಎಂದು, ಶಿಲ್ಪಿ ಪೊಯ್ಸಳಾಚಾರಿಯು ತಾನು 'ಉಳಿಬಳ್ಳಿಡಿವರ ಚಟ್ಟಂ ಶ್ರೀ'[126] ಎಂದು ಮಾಚೋಜ ಎಂಬ ಶಿಲ್ಪಿಯು ತಾನು 'ಕಲುಕಣಿನಾಡ ಆಚಾರ್ಯ'[127] ಎಂದು ಹೇಳಿಕೊಂಡಿದ್ದಾರೆ.

ಈ ಆಧಾರಗಳ ಮೇಲೆ ಶಿಷ್ಯವೃತ್ತಿಯು ಅಲ್ಲಲ್ಲಿಯೇ ಇತ್ತು ಎನ್ನಲು ಅಡ್ಡಿ ಇಲ್ಲ.

ಒಟ್ಟನಲ್ಲಿ ಹೆಚ್ಚಿನ ಶಾಸನಗಳು ತಂದೆಯಿಂದ ಮಗನಿಗೆ ಈ ವೃತ್ತಿಯು ಅನುವಂಶೀಯವಾಗಿ ಮುಂದುವರಿದುದನ್ನು ತಿಳಿಸುತ್ತವೆ.

### 3.8.3. ಶಿಲಾಶಾಸನಗಳ ನಿರ್ಮಾಣ ಕಾರ್ಯ

ಶಿಲಾಶಾಸನವನ್ನು ರಚನೆ ಮಾಡುವಲ್ಲಿ ಸಾಮಾನ್ಯವಾಗಿ ಮೂವರು ಕೆಲಸ ಮಾಡುತ್ತಾರೆ.

1. ಕವಿ ಅಥವಾ ಸೇನಬೋವ : ಈತನು ಶಾಸನ ಪಾಠವನ್ನು ರಚಿಸುತ್ತಾನೆ.

2. ಲಿಪಿಕಾರ : ಈತನು ಶಾಸನ ಪಾಠವನ್ನು ಕಲ್ಲಿನ ಹಲಗೆಯ ಮೇಲೆ ಬಳಪದಿಂದ ಬರೆಯುತ್ತಾನೆ.

3. ಕಂಡರಣೆಕಾರ : ಈತನು ಲಿಪಿಕಾರ ಬರೆದ ಶಾಸನ ಪಾಠವನ್ನು ಉಳಿಯಿಂದ ಕೆತ್ತುತ್ತಾನೆ.

ಕ್ರಿ.ಶ. 1099ರ ಶಾಸನದ[128] 'ದ್ರುಹಿಣವಿರ್ಮ್ಮಿತಮನೆ .. ಣ ಯುತಂ ಬಾಣಗದ್ಯ [ವಾ] ಲಿಖಿತ ಪಿತಾಮಹನೆನ್ದೊರೆಯೊಳೊಪ್ಪಿರಲಹರ್ಣ್ನಿಶಂ ಬರೆದನೆ ... ಯ ಮಲ್ಲಂ' ಎಂಬ ಉಲ್ಲೇಖವು ಮಲ್ಲನೆಂಬ ಕವಿ ಶಿಲ್ಪಿಯು ತನ್ನನ್ನು ದ್ರುಹಿಣನೆಂಬ ಕವಿಯ ರಚನೆಯಂತೆ ಮತ್ತು ಗದ್ಯ ಸಂಸ್ಕೃತ ಕಾದಂಬರಿ ಕೃತಿಯ ಕರ್ತೃವಾದ ಕವಿ ಬಾಣನ ಗದ್ಯದಂತೆಯೂ ಮಿಗಿಲಾಗಿ ಬರೆದಿರುವೆನೆಂದು ಹೇಳಿಕೊಳ್ಳುತ್ತಾನೆ. ಇದರಿಂದ ಮಲ್ಲನು ಉತ್ತಮ ವಿದ್ವಾಂಸನಾಗಿದ್ದನೆಂದು ತಿಳಿಯಬಹುದು.

ಕ್ರಿ.ಶ. 1276ರ ಹೊಸಬೂದನೂರು ಶಾಸನವು[129] 'ಪತ್ರಸಾಸನವ ನೋಡಿ ಬರದ ಆಚಾರಿ ಮಸಣೋಜ' ಎಂದು ಉಲ್ಲೇಖಿಸುತ್ತದೆ. ಅಂದರೆ ಮಸಣೋಜನು ಪತ್ರದಲ್ಲಿರುವ ಶಾಸನ ಪಾಠವನ್ನು ನೋಡಿ ಅದನ್ನು ಶಿಲಾಫಲಕದ ಮೇಲೆ ಬರೆದುಕೊಟ್ಟಿದ್ದಾನೆ.

ಕ್ರಿ.ಶ. 1184ರ ಡಂಬಳ ಶಾಸನವು[130] 'ವರವರದ ಪರಮನಿರುಪಮ ಗಿರಿಜೇಶನ ಚರಣ ಶರಣ ನೀ ಶಾಸನಮಂ ವಿರಚಿಸಿ ಬರದಂ ಕವಿ ಬಮ್ಮರಸನ ಸುತ ನಾಗದೇವಭಟ್ಟವರಿಷ್ಟಂ'. ಅಂದರೆ ಬಮ್ಮರಸನ ಮಗನಾದ ನಾಗದೇವಭಟ್ಟವರಿಷ್ಟನು ಶಾಸನ ಪಾಠವನ್ನು ರಚಿಸಿದುದಲ್ಲದೆ ತಾನೇ ಅದನ್ನು ಕಲ್ಲಿನ ಮೇಲೆ ಬರೆದಿರುವ ವಿಷಯವನ್ನು ಇದು ತಿಳಿಸುತ್ತದೆ.

ಕ್ರಿ.ಶ. 1118ರ ಬಾಳಂಬೀಡ ಶಾಸನವು[131] 'ಹುಲಿಗೆಱೆಯ ಬಮ್ಮೋಜ ತಾನೆ ಬರೆದು ಕಂಡರಿಸಿದ ಸಾಸನ' ಎಂದು ಉಲ್ಲೇಖಿಸುತ್ತದೆ. ಈ ಶಾಸನದಲ್ಲಿ ಬಮ್ಮೋಜನು ತಾನೆ ಬರೆದು ಶಾಸನದ ಕಂಡರಣೆಕಾರ್ಯವನ್ನು ನಿರ್ವಹಿಸಿದ್ದು ಗೊತ್ತಾಗುತ್ತದೆ.

ಈ ಮೇಲಿನ ಶಾಸನಾಧಾರಗಳ ಹಿನ್ನೆಲೆಯಲ್ಲಿ ಕೆಲವೊಮ್ಮೆ ಕೇವಲ ಬರೆದು, ಕೆಲವೊಮ್ಮೆ ಕೇವಲ ಲಿಪಿಕಾರ್ಯವನ್ನು, ಕೆಲವೊಮ್ಮೆ ಬರೆದು, ಕಂಡರಣೆ ಕಾರ್ಯವನ್ನು ಹಾಗೂ ಕೆಲವೊಮ್ಮೆ ಲಿಪಿಕಾರ್ಯ ಹಾಗೂ ಕಂಡರಣೆಕಾರ್ಯವನ್ನು ಹೀಗೆ ಅವರವರ ಬೌದ್ಧಿಕತೆಯನ್ನು ಆಧರಿಸಿ ಶಿಲ್ಪಿಗಳು ಶಿಲ್ಪಕಾರ್ಯ ಮಾಡಿರುವುದನ್ನು ಕಾಣಬಹುದು. ಇದರಿಂದ ಇವರು ಸಾಕ್ಷರರಾಗಿದ್ದರೆಂದು ಯಾವುದೇ ಅನುಮಾನಗಳಿಲ್ಲದೆ ಒಪ್ಪಿಕೊಳ್ಳಬಹುದು ಹಾಗೂ ಸರಸ್ವತಿ ಗಣದಾಸಿಗಳು, ಸರಸ್ವತಿ ಗಣಛಾತ್ರರು ಎಂಬ ಇವರ ಪ್ರಶಸ್ತಿಗಳು ಇದನ್ನು ಘೋಷಿಸುತ್ತವೆ.

## 3.9. ಮೇದಾರರು

### 3.9.1. ತಾಂತ್ರಿಕ ವಿವರಗಳು

ಬಿದಿರಿನಿಂದ ಮೊರ, ತೊಟ್ಟಿಲು, ಏಣಿ, ಬುಟ್ಟಿ ಮೊದಲಾದ ಅಗತ್ಯ ವಸ್ತುಗಳನ್ನು ತಯಾರು ಮಾಡುವ ಕಸುಬಿನವರೆ ಮೇದಾರರು. ಮೇದಾರರು ಬಿದಿರಿನಿಂದ ಅಟ್ಟಕ್ಕೇಣಿ, ಕಾಲು ಮುರಿದವರಿಗೆ ಊರುಗೋಲು, ಅಂದಣ (ಪಲ್ಲಕ್ಕಿ), ಸತ್ತಿಗೆ (ಛತ್ರಿ), ಗುಡಿಗುಡಾರ (ತಡಿಕೆ = ಗುಡಿಸಲಿಗೆ ಮುಚ್ಚುವ ಚಾಪೆ) ಮುಂತಾದವುಗಳನ್ನು ತಯಾರಿಸುತ್ತಿದ್ದರೆಂದು ಬಸವಣ್ಣನವರ [132] ವಚನವೊಂದು ಉಲ್ಲೇಖಿಸಿದೆ.

ಮೇದರ ಕೇತಯ್ಯನೆಂಬ ವಚನಕಾರ ಇದೇ ವೃತ್ತಿಯನ್ನು 12ನೇ ಶತಮಾನದಲ್ಲಿ ಮಾಡುತ್ತಿದ್ದುದನ್ನು ಇಲ್ಲಿ ಸ್ಮರಿಸಬಹುದು. ಈತನ

*'ಒಂದು ಬಿದಿರಿಂಗೆ ಕವೆ ಮೂರು, ಆ ಕವೆಯ ಒಳಗೆ ಲಕ್ಷ ಸಿಬಿರು.*
*ಮೂರು ಕವೆಯ ಕೊಚ್ಚಿಸಿ, ಬಿಲ್ಲ ಸಿಕ್ಕ ಬಿಡಿಸಿ, ಸೀಳಿದ ಬಿದಿರ*
*ಹೊರೆಹೊರೆಯಲ್ಲಿ ನೆಯಿದೆ, ತೊಟ್ಟಿಲ ಸಂದ ಕಾಣದಂತೆ*
*ನಾಲ್ಕು ಕಾಲನಿಕ್ಕಿ, ಅಂದ ಅಂದವಾದ ತೊಟ್ಟಿಲ ದಂಡೆಯನಿಕ್ಕಿ,*
*ಕಟ್ಟುವುದಕ್ಕೆ ಶ್ರುತ ದೃಷ್ಟವೆಂಬೆರಡು ದಾರದಲ್ಲಿ ತೊಟ್ಟಿಲ ಕಟ್ಟಿ,*
*ಗವರೇಶ್ವರ ಲಿಂಗಕ್ಕೆ ಹುಟ್ಟುಗೆಟ್ಟು, ಹೋಗೋ*
*ಎಂದು ಜೋಗುಳವಾಡಿದೆ.*[133] ಹಾಗೂ
*'ಮೊರನ ಹೆಣೆವ ಗೌರ, ನಾನೆತ್ತ ಬಲ್ಲೆನಯ್ಯಾ'*[134]

ಈ ವಚನಗಳು ಇವರು ತಯಾರಿಸುತ್ತಿದ್ದ ತೊಟ್ಟಿಲು, ಮೊರಗಳನ್ನು ತಿಳಿಸುತ್ತವೆ.

ಕವೆಗಳು ಒಡೆದಿರುವೆಡೆ ಬಿದಿರನ್ನು ಕೊಚ್ಚಿ, ಅದರ ಸಿಕ್ಕನ್ನು ಬಿಡಿಸಿ ಸೀಳಿ ಸಂದು ಕಾಣದ ಹಾಗೆ ನೆಯಿದು (ಹೆಣೆದು) ಅದಕ್ಕೆ ನಾಲ್ಕು ಕಾಲುಗಳನ್ನಿಟ್ಟು ತೊಟ್ಟಿಲನ್ನು ತಯಾರಿಸುವ ವಿಧಾನವನ್ನು ಕೇತಯ್ಯ ಹೇಳುತ್ತಾನೆ. ಬಿದಿರ ಮೇಳೆಯು ಏತಕ್ಕೆ ಗಳೆಯಾಗುವಂತೆ, ಸಮುದ್ರದ ಆಳವನ್ನು ನೋಡಲು ಏಣಿಯನ್ನು ತಯಾರಿಸುವುದಕ್ಕೆ ಬರುವಂತೆ ಎತ್ತರಕ್ಕೆ ಬೆಳೆದಿತ್ತೆಂದು 'ಕಾವ್ಯಾವಲೋಕನ'ದ ಒಂದು ಪದ್ಯವು ವರ್ಣಿಸುತ್ತದೆ.

### 3.9.2. ಉಪಕರಣಗಳು

1. ಕತ್ತಿ: ತೆಳುವಾದ ಬಾಯುಳ್ಳದ್ದು, ಬಿದಿರು ಸೀಳಲು ಬಳಸುವುದು.

### 3.9.3. ಉತ್ಪಾದನಾ ಪ್ರಕ್ರಿಯೆ

ಹಸಿಬಿದಿರು ಕೆಲಸಕ್ಕೆ ಸೂಕ್ತವಾದುದು. ಅದನ್ನು ಸುಲಭವಾಗಿ ಸೀಳಬಹುದು. ಅದೇ ಬಿದಿರು ಒಣಗಿದರೆ ಸೀಳುವಾಗ ಮಧ್ಯೆ ಮಧ್ಯೆ ತುಂಡಾಗುತ್ತದೆ. ಆದ್ದರಿಂದ ಒಣಗಿದ ಬಿದಿರು ದೊರೆತಾಗ ಅದನ್ನು ನೀರಿನಲ್ಲಿ ನೆನೆಸಿ ಸೀಳಿಕೊಳ್ಳುತ್ತಾರೆ. ತಯಾರಿಸುವ ವಸ್ತುವಿನ ಅಳತೆಗೆ ತಕ್ಕಂತೆ ಪದರನ್ನು ತೆಗೆಯಬೇಕು. ಹೆಚ್ಚು ಗೆಣ್ಣುಗಳಿದ್ದಾಗ ಬಿದಿರು ತುಂಡಾಗುವ ಸಾಧ್ಯತೆಗಳಿರುವುದರಿಂದ ಎಚ್ಚರಿಕೆ ವಹಿಸಬೇಕಾಗುತ್ತದೆ. ಆದ್ದರಿಂದಲೆ ಗೆಣ್ಣುಗಳ ಅಂತರ ಹೆಚ್ಚಾಗಿರುವ ಬಿದಿರನ್ನು ಮೇದಾರರು ಆಯ್ಕೆ ಮಾಡಿಕೊಳ್ಳುತ್ತಾರೆ.

ಏಣಿ ತಯಾರಿಸುವಾಗ ಮಾತ್ರ ಟೊಳ್ಳಾಗಿರುವ ಎರಡು ಬೊಂಬುಗಳನ್ನು ಬಳಸಿಕೊಳ್ಳುತ್ತಾರೆ.

## 3.10. ಚರ್ಮಗಾರಿಕೆ

### 3.10.1. ತಾಂತ್ರಿಕ ವಿವರಗಳು

ಸತ್ತ ದನಗಳ ಚರ್ಮವನ್ನು ಸುಲಿದು ಸಾಂಪ್ರದಾಯಿಕ ರೀತಿಯಲ್ಲಿ ಹದಗೊಳಿಸಿ, ಮಿಣಿ, ಜತ್ತಿಗೆ, ಬಾರಕೋಲು ಮೊದಲಾದ ವ್ಯವಸಾಯದ ಉಪಕರಣಗಳನ್ನು ಸಿದ್ಧಗೊಳಿಸುವುದಕ್ಕೆ ಚರ್ಮಗಾರಿಕೆ ಅಥವಾ ಚಮ್ಮಾರಿಕೆ ಎನ್ನುವರು. ಚರ್ಮದ ಕೆಲಸವು ಎರಡು ಗುಂಪಿನ ಜನರಿಂದ ನಡೆಯುತ್ತಿತ್ತು. ಚರ್ಮವನ್ನು ಸುಲಿದು ಹದಮಾಡಿ ಅದನ್ನು ಉಪಯೋಗಕ್ಕೆ ಯೋಗ್ಯವಾಗಿ ಮಾಡುವವನು 'ಸಮ್ಮಗಾರ' ಅಥವಾ 'ಚರ್ಮಕಾರ'; ಹದಗೊಳಿಸಲ್ಪಟ್ಟ ಚರ್ಮದಿಂದ

ಪಾದರಕ್ಷೆ ಮುಂತಾದ ವಸ್ತುಗಳನ್ನು ತಯಾರಿಸುವವನು 'ಮಚ್ಚಿಗ 'ನೆನಿಸಿಕೊಳ್ಳುತ್ತಿದ್ದ. ಇವೆರಡನ್ನೂ ಒಬ್ಬನೇ ಮಾಡುತ್ತಿದ್ದಿರಲೂ ಬಹುದು.

ಮಾದಾರ ಧೂಳಯ್ಯನೆಂಬ ವಚನಕಾರನ ಕಾಯಕವೂ ಚಪ್ಪಲಿಗಳನ್ನು ತಯಾರಿಸುವುದಾಗಿತ್ತು. ಅಟ್ಟೆ (ಪಾದರಕ್ಷೆಯ ತಳದ ಹಲ್ಲೆ)ಯನ್ನು ಹೊಲಿದು ಹೆಬ್ಬೆರಳು ಹಿಡಿಸುವಂತೆ ಒಂದು ಉಂಗುರವನ್ನು ಹೊಲಿದು ಮೆಟ್ಟಿದಾಗ ಕಾಲಿನಿಂದ ಪಾದರಕ್ಷೆಯು ಜಾರಿ ಹೋಗದಂತೆ ಮಾಡಲಾಗುತ್ತಿತ್ತು. ಇದನ್ನು ದುಡ್ಡಿಗೆ ಮಾರುತ್ತಿದ್ದರು ಎಂಬುದನ್ನು ಈ ಕೆಳಗಿನ ವಚನವು[135] ಸ್ಪಷ್ಟಪಡಿಸುತ್ತದೆ.

*'ಕಟ್ಟಿದೆ ಘಟದಟ್ಟೆಯ ಹೊಲಿದು,*
*ಇಕ್ಕಿದೆ ಚತುರ್ವಿಧದ ನಾಲ್ಕು ಗುಂಟವ ಬಲಿದು.*
*ಗುಂಟದ ದ್ವಾರದಲ್ಲಿ, ಉಭಯ ಸಂಚದ ಬಾರ ತೆಗೆದು,*
*ತೊಡಕು ಬಂಧವನಿಕ್ಕಿ,*
*ಅಡಿಯ ಬಿಡದಂತೆ, ಹಿಂದಣ ಮಡ*
*ಮುಂದಣ ಉಂಗುಷ್ಠಕ್ಕೆ ಒಂದನೊಂದು ಜಾರದಂತೆ ಬಂಧಿಸಿ,*
*ಸಕಲೇಂದ್ರಿಯವೆಂಬ ಉಭಯವ ಸಂಧಿಸಿ ಕುಣಿಕೆಯನಿಕ್ಕಿ*
*ಕಾಮದ ಒಡಲ ಮಾದಿಗ ಬಂದೆ,*
*ಘಟ ತೋಕುಳು ತೊಗಲು ಹದಬಂದಿತ್ತು,*
*ಹೊತ್ತು ಹೋದಿಹಿತಣ್ಣಾ*
*ಮೆಟ್ಟಡಿಯ ಕೊಂಡ ರೊಕ್ಕವ ಕೊಡಿ.*
*ಒಪ್ಪಿದರಿರಲಿ, ಒಪ್ಪದಿದ್ದಡೆ*
*ಮೂರು ಮುಖದಪ್ಪಗೆ ಕೊಟ್ಟೆಹೆ.*
*ತಪ್ಪಡಿಯ ಮೆಟ್ಟಿ ಹೋಗುತ್ತಿದ್ದೇನೆ,*
*ಚನ್ನಯ್ಯಪ್ರಿಯ ಧೂಳನ ಧೂಳಿಗೊಳಗಾಗಿ ||'*

ಚರ್ಮವನ್ನು ಹೊಲಿಯಲು ಬಳಸುತ್ತಿದ್ದ ಉಪಕರಣಕ್ಕೆ 'ಉಳಿ' ಎಂದು ಕರೆಯುತ್ತಿದ್ದರು.[136] ಪಾದರಕ್ಷೆಗಳನ್ನು ವಚನಗಳು ಹಾವುಗೆ ಎಂದು ಉಲ್ಲೇಖಿಸುತ್ತವೆ. ಚರ್ಮದಿಂದ ತಯಾರಿಸಿದ ಪಾದರಕ್ಷೆಗಳು 'ಚಮ್ಮಾವುಗೆ' ಎನಿಸಿಕೊಳ್ಳುತ್ತವೆ.[137]

ಡೋರರ ಮುಖ್ಯ ಕೆಲಸ, ತೊಗಲು ಹದಗೊಳಿಸಿ, ಅದಕ್ಕೆ ಬಣ್ಣ ಹಾಕುವುದು. ಚರ್ಮಕ್ಕೆ ಬಣ್ಣ ಕೊಡುವ ಡೋರ ವೃತ್ತಿಯನ್ನು 12 ನೇ ಶತಮಾನದಲ್ಲಿ 'ಡೋಹರ ಕಕ್ಕಯ್ಯ' ಕೈಕೊಂಡಿದ್ದು ಇಲ್ಲಿ ಗಮನಾರ್ಹ.

'ಮಾದೆಗನಂತೆ ಮೆಟ್ಟಿನುತ್ತುಂ' [138], 'ಮಾದೆಗನಂತೆ ಬಾರೆತ್ತುವರ್'[139] ಮೊದಲಾದ ನಯಸೇನನ ಹೇಳಿಕೆಗಳು, ಅವರು ತೊಗಲನ್ನು ಹದಮಾಡುವ, ಅದರಿಂದ ತೊಗಲಿನ ಬಾರುಗಳನ್ನು ಸಿದ್ಧಪಡಿಸುವ ಕೆಲಸಗಳನ್ನು ಮಾಡುತ್ತಿದ್ದರೆಂಬುದು ವ್ಯಕ್ತವಾಗುತ್ತದೆ.

### 3.10.2. ಉಪಕರಣಗಳು

1. ಅಡಿಗಲ್ಲು : ಒಣಗಿದ ಚರ್ಮವು ಒಂದು ಆಕಾರಕ್ಕೆ ಬರುವಂತೆ ಜಜ್ಜಲು ಬಳಕೆಯಾಗುವ ಚೌಕಾಕಾರದ ಕಲ್ಲು.
2. ಅರಾ : ಚಮ್ಮಾರರು ಸಾಧನ ಸಲಕರಣೆಗಳನ್ನು ಹರಿತಮಾಡಲು ಬಳಸುವ ಸಾಧನ.
3. ಇಕ್ಕಳ : ಮೊಳೆ ತೆಗೆಯಲಿಕ್ಕೆ ಬಳಸುವ ಸಾಧನ.
4. ಉಳಿ : ಚರ್ಮವನ್ನು ಕತ್ತರಿಸಲು, ತೂತು ಮಾಡಲು, ಹೊಲಿಯಲು ಉಪಯೋಗಿಸುವ ಒಂದು ಲೋಹದ ಉಪಕರಣ.
5. ಕೊಡಲಿ : ಕಬ್ಬಿಣದ ಸುತ್ತಿಗೆ, ಕೆಳಭಾಗ ಉಕ್ಕಿನಿಂದ ಕೂಡಿರುತ್ತದೆ. ಚರ್ಮದಿಂದ ಉತ್ಪಾದಿಸುವ ವಸ್ತುಗಳನ್ನು ಮಾಡುವಾಗ ಬಡಿಯಲು, ಜಜ್ಜಲು ಇದು ಮುಖ್ಯವಾಗುತ್ತದೆ. ಕೊಡಂತಿ > ಕೊಡತಿ.
6. ಕತ್ತಿ : ಚಮ್ಮಾರರು ತಮ್ಮ ಉಪಕರಣಗಳನ್ನು ಹರಿತಮಾಡಲು ಇದನ್ನು ಉಪಯೋಗಿಸುತ್ತಾರೆ.

### 3.10.3. ಉತ್ಪಾದನಾ ಪ್ರಕ್ರಿಯೆ

ಚರ್ಮವನ್ನು ಹದ ಮಾಡುವ ಕ್ರಮವನ್ನು ಮಾದಾರ ಚನ್ನಯ್ಯನೆಂಬ ವಚನಕಾರನ ಒಂದು ವಚನವು ಸೊಗಸಾಗಿ ನೀಡಿದೆ.[140]

*'ಸ್ಥೂಲ ಸೂಕ್ಷ್ಮ ಕಾರಣವೆಂಬ ಮೂರು ಕಂಬವ ನೆಟ್ಟು,*<br>
*ಆಗುಚೀಗೆಯೆಂಬ ದಡಗೋಲಿನಲ್ಲಿ*<br>
*ಅಗಡದ ಎಮ್ಮೆಯ ಚರ್ಮವ ತೆಗೆದು,*<br>
*ಉಭಯನಾಮವೆಂಬ ನಾರಿನಲ್ಲಿ ತಿತ್ತಿಯನೊಪ್ಪವ ಮಾಡಿ,*<br>
*ಭಾವವೆಂಬ ತಿಗುಡಿನಲ್ಲಿ*<br>
*ಸರ್ವಸಾರವೆಂಬ ಖಾರದ ನೀರ ಹೊಯಿದು,*<br>
*ಅಟ್ಟೆಯ ದುರ್ಗುಣ ಕೆಟ್ಟು,*<br>
*ಮೆಟ್ಟಡಿಯವರಿಗೆ ಮುಟ್ಟಸಬಂದೆ.*<br>
*ಮೆಟ್ಟಡಿಯ ತಪ್ಪಲ ಕಾಯದೆ*<br>
*ಮೆಟ್ಟಡಿಯ ಬಟ್ಟೆಯ ನೋಡಿಕೊಳ್ಳಿ*<br>
*ಕೈಯುಳಿ ಕತ್ತಿ ಅಡಿಗೂಂಟಕ್ಕಡಿಯಾಗಬೇಡ,*<br>
*ಅರಿ ನಿಜಾ(ತ್ಮಾ)ರಾಮ ರಾಮನಾ।।'*

ಈ ವಚನವು ಸತ್ತ ಎಮ್ಮೆಯನ್ನು ಮೂರು ಕಂಬಗಳಿಗೆ ಕಟ್ಟಿ ದಡಿಗೋಲಿನಿಂದ ಅದರ ಚರ್ಮವನ್ನು ತೆಗೆದು, ಲವಣದ ನೀರಿನಲ್ಲಿ ನೆನೆಸಿ ಹದಮಾಡುತ್ತಿದ್ದ ರೀತಿಯನ್ನು ಸ್ಥೂಲವಾಗಿ ತಿಳಿಸುತ್ತದೆ. ಇದು ಈಗಲೂ ಹಳ್ಳಿಗಳಲ್ಲಿ ಚರ್ಮ ಹದ ಮಾಡುವಾಗ ಸಮಗಾರರು ಅನುಸರಿಸುವ ವಿಧಾನವನ್ನೇ ಹೋಲುತ್ತದೆ. ಅವರು ಹದ ಮಾಡುವ ಕ್ರಮವು ಈ ರೀತಿಯಿದೆ : ದೊಡ್ಡ ದೊಡ್ಡ ಮಣ್ಣಿನ ಬಾನಿಗಳಲ್ಲಿ ಸುಣ್ಣದ ನೀರನ್ನು ಹಾಕಿ ಅದರಲ್ಲಿ ಕಚ್ಚಾ ಚರ್ಮವನ್ನು ಸುಮಾರು ಒಂದು ತಿಂಗಳ ಕಾಲ ನೆನೆಯಿಡುತ್ತಾರೆ. ಅನಂತರ ಚರ್ಮವನ್ನು ತೆಗೆದು ಅದರಲ್ಲಿನ ಸುಣ್ಣದ ಅಂಶವು ಹೋಗುವಂತೆ ಒಳ್ಳೆಯ ನೀರಿನಲ್ಲಿ ಮತ್ತೆ ಮೂರು ದಿನಗಳ ಕಾಲ ನೆನೆಸುತ್ತಾರೆ. ಆಮೇಲೆ ಮತ್ತೊಂದು ಪಾತ್ರೆಯಲ್ಲಿ ನೆಲ್ಲಿಯ ಎಲೆಗಳನ್ನು ಮಿಶ್ರ ಮಾಡಿರುವ ನೀರಿನಲ್ಲಿ ಪುನಃ ಹನ್ನೆರಡು ದಿನಗಳಷ್ಟು ಕಾಲ ನೆನಸುತ್ತಾರೆ. ಅನಂತರ ಚರ್ಮವನ್ನು ನೀರಿನಿಂದ ತೆಗೆದು ಹಿಂಡಿ ಒಂದು ತಿಂಗಳ ಕಾಲ ಹಾಗೆಯೇ ಬಿಡುತ್ತಾರೆ. ಅದಾದ ನಂತರ ಚರ್ಮವನ್ನು ತೊಳೆದು ಹಿಂಡಿ ಅದನ್ನು ಹೊಲಿದು ಅದರಲ್ಲಿ ಗೋಡಂಬಿ, ದದ್ದಾಲ ಮತ್ತು ನೇರಳೆ ಮರಗಳ ತೊಗಟೆಯನ್ನು ತುಂಬಿ ಒಂದು ದಿನದ ಮಟ್ಟಿಗೆ ತೂಗು ಹಾಕುತ್ತಾರೆ ('ತಿತ್ತಿಯನೊಪ್ಪಹ ಮಾಡಿ ತಿಗುಡಿನಲ್ಲಿ'). ಆಮೇಲೆ ಹೊಲಿಗೆಯನ್ನು ಬಿಚ್ಚಿ ಚರ್ಮವನ್ನು ತೊಳೆದು ಶುದ್ಧಿಮಾಡಿ ಒಂದು ದಿನ ಬಿಸಿಲಿನಲ್ಲಿ ಒಣಗಿಸಿದರೆ ಚರ್ಮವು ಪಾದರಕ್ಷೆಯನ್ನು ತಯಾರಿಸಲು ಯೋಗ್ಯವಾಗುತ್ತದೆ.[141]

ಹೀಗೆ ಎಲ್ಲಾ ಕುಶಲಕರ್ಮಗಳ ತಾಂತ್ರಿಕತೆಯನ್ನು ತಿಳಿಯಬಹುದು.

## ಪರಾಮರ್ಶನ ಗ್ರಂಥಗಳು


1. *ಶಿವಶರಣೆಯರ ವಚನ ಸಂಪುಟ*, ಕದಿರ ರೆಮ್ಮವ್ವೆಯ ವಚನ 747, ಕ.ಪು.ಪ್ರಾ. ಬೆಂಗಳೂರು, 2001, ಪು. 232.
2. ನಯಸೇನ ವಿರಚಿತ *ಧರ್ಮಾಮೃತಂ* ಗದ್ಯಾನುವಾದ : ವೆಂಕಟರಾಮಪ್ಪ ಕೆ., ಕ.ಸಾ.ಪ. ಬೆಂಗಳೂರು, 1977, ಪು. 411.
3. *ಶಿವಶರಣೆಯರ ವಚನ ಸಂಪುಟ*, ಕದಿರಕಾಯಕದ ಕಾಳವ್ವೆಯ ವಚನ 743, ಪೂರ್ವೋಕ್ತ, ಪು. 232.
4. *ಅಲ್ಲಮನ ವಚನ ಚಂದ್ರಿಕೆ*, (ಸಂ) ಬಸವರಾಜು, ಎಲ್., ವಚನ 330, ಲೋಹಿಯಾ ಪ್ರಕಾಶನ, ಬಳ್ಳಾರಿ, 2001, ಪು. 74.
5. *ಬಸವಣ್ಣನವರ ವಚನ ಸಂಪುಟ* , ವಚನ 590, ಕ.ಪು.ಪ್ರಾ. ಬೆಂಗಳೂರು, 2001, ಪು. 148.
6. *ಸಂಕೀರ್ಣ ವಚನ ಸಂಪುಟ*, ಸಂಪುಟ 2, ಜೇಡರ ದಾಸಿಮಯ್ಯನ ವಚನ 29, ಕ.ಪು.ಪ್ರಾ. ಬೆಂಗಳೂರು, 2001, ಪು. 236.
7. *ಸಂಕೀರ್ಣ ವಚನ ಸಂಪುಟ*, ಸಂಪುಟ 2, ಗುಪ್ತಮಂಚಣ್ಣನ ವಚನ 100, ಪೂರ್ವೋಕ್ತ, ಪು. 130.
8. *ಸಂಕೀರ್ಣ ವಚನ ಸಂಪುಟ*, ಸಂಪುಟ 2, ಜೇಡರ ದಾಸಿಮಯ್ಯನ ವಚನ 29, ಪೂರ್ವೋಕ್ತ
9. ನಯಸೇನ ವಿರಚಿತ *ಧರ್ಮಾಮೃತಂ*, ಪೂರ್ವೋಕ್ತ, ಪು. 797.
10. *ಸಂಕೀರ್ಣ ವಚನ ಸಂಪುಟ*, ಸಂಪುಟ 3, ಮೋಳಿಗೆ ಮಾರಯ್ಯನ ವಚನ 757, ಕ.ಪು.ಪ್ರಾ. ಬೆಂಗಳೂರು, 2001, ಪು. 699.
11. *ಸಂಕೀರ್ಣ ವಚನ ಸಂಪುಟ*, ಸಂಪುಟ 2, ಜೇಡರ ದಾಸಿಮಯ್ಯನ ವಚನ 29, ಪೂರ್ವೋಕ್ತ
12. ಅದೇ.
13. *ಸಂಕೀರ್ಣ ವಚನ ಸಂಪುಟ*, ಸಂಪುಟ 3, ಮೋಳಿಗೆ ಮಾರಯ್ಯನ ವಚನ 615, ಪೂರ್ವೋಕ್ತ, ಪು. 657.
14. SII XV, ನಂ. 46, ಸಾಲವಾಡಗಿ, ಬಾಗೇವಾಡಿ (ತಾ), ಜಗದೇಕಮಲ್ಲ II, ಪು. 62.
15. *ಸಂಕೀರ್ಣ ವಚನ ಸಂಪುಟ*, ಸಂಪುಟ 2, ಜೇಡರ ದಾಸಿಮಯ್ಯನ ವಚನ 29, ಪೂರ್ವೋಕ್ತ
16. *ಶಿವಶರಣೆಯರ ವಚನ ಸಂಪುಟ*, ಅಕ್ಕಮಹಾದೇವಿಯ ವಚನ 253, ಪೂರ್ವೋಕ್ತ, ಪು. 74.
17. Krishnappa, M.V., *Social and Economic Conditions of Karnataka*, Prasaranga, Mysore University, Mysore, 1994, pp. 147.
18. *ಚೆನ್ನಬಸವಣ್ಣನವರ ವಚನ ಸಂಪುಟ*, ವಚನ 995, (ತೊತ್ತು ಲಕ್ಷಣವಿರಲು ನಾಣ್ಯವ ನುಡಿಸಿ, ನವರತ್ನಾಭರಣಂಗಳ ತೊಡಿಸಿ), ಕ.ಪು. ಪ್ರಾ. ಬೆಂಗಳೂರು, 2001, ಪು. 328.

19. ***ಶರಣ ಚರಿತ ಮಾನಸಂ***, (ಸಂ) ದೇವೀರಪ್ಪ, ಎಚ್., ಅಮರ ನೀತಿಗಳು, ಶ್ರೀ ಗೌರಿಶಂಕರ ಬುಕ್ ಡಿಪೋ, ಮೈಸೂರು, 1968, ಪು. 82.

20. ***ಬಸವಣ್ಣನವರ ವಚನ ಸಂಪುಟ***, ವಚನ 436 (ಸೀರೆಯೊಳಗೊಂದೆಳೆಯ), ಪೂರ್ವೋಕ್ತ, ಪು. 106.

21. ***ಅಲ್ಲಮನ ವಚನ ಚಂದ್ರಿಕೆ***, (ಸಂ) ಬಸವರಾಜು, ಎಲ್., ವಚನ 16, ಪೂರ್ವೋಕ್ತ, ಪು. 5.

22. ***ನಯಸೇನ ವಿರಚಿತ ಧರ್ಮಾಮೃತಂ***, ಪೂರ್ವೋಕ್ತ, ಪು. 662.

23. ***ಅಲ್ಲಮನ ವಚನ ಚಂದ್ರಿಕೆ***, (ಸಂ) ಬಸವರಾಜು, ಎಲ್., ಪೂರ್ವೋಕ್ತ, ಪು. 194.

    ***ಸಂಕ್ಷಿಪ್ತ ಕನ್ನಡ ನಿಘಂಟು***, ಕ.ಸಾ.ಪ. ಬೆಂಗಳೂರು, 1977, ಪು. 204.

24. ಸರ್ವಪುರಾತನರ ವಚನ 631.

25. ***ಪಂಪ ಭಾರತ ದೀಪಿಕೆ***, (ಸಂ) ನರಸಿಂಹಚಾರ್, ಡಿ.ಎಲ್., ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., 1971, ಪು. 340.

    ಹಂಪೆಯ ಹರಿಹರ ವಿರಚಿತ ***ಬಸವರಾಜದೇವರ ರಗಳೆ***, (ಸಂ) ದೇವೀರಪ್ಪ, ಎಚ್., (ಕುಪ್ಪಸದ ಬೀರಣೆಯ ಬಿನ್ನಣದ ಹಸನಿಗಂ ಟೊಪ್ಪಿಗೆಯ ಹೊಅವೇಷದಿಹ ಪರದ ಲೆಕ್ಕಿಗಂ), ಶಿವಕುಮಾರ ಪ್ರಕಾಶನ, ಬೆಂಗಳೂರು, 1981, ಪು. 26.

26. ***ಅಲ್ಲಮನ ವಚನ ಚಂದ್ರಿಕೆ***, (ಸಂ) ಬಸವರಾಜು, ಎಲ್., ಪೂರ್ವೋಕ್ತ, ಪು. 60.

27. ***ಚನ್ನಬಸವಣ್ಣನವರ ವಚನಗಳು***, ವಚನ 200, (ಸಂ) ಹಿರೇಮಠ, ಆರ್.ಸಿ., ಕರ್ನಾಟಕ ವಿ.ವಿ., ಧಾರವಾಡ, (ಕೇಶ ಕಾಷಾಯಾಂಬರ ವೇಷ ಲಾಂಛನವಾದಡೇನೂ!), 1971, ಪು. 91.

28. ***ಬಸವಣ್ಣನವರ ವಚನಗಳು***, ವಚನ 1287, (ಸಂ) ಹಿರೇಮಠ, ಆರ್.ಸಿ., ಕರ್ನಾಟಕ ವಿ.ವಿ., ಧಾರವಾಡ, (ದಿಗಂಬರಂಗೆ ಒಲಿದವರಿಗೆ ಕೌಪೀನದ ಹಂಗುಂಟೆ?), 1968, ಪು. 535.

29. ***ಬಸವಣ್ಣನವರ ವಚನ ಸಂಪುಟ***, ವಚನ 412, ಪೂರ್ವೋಕ್ತ, ಪು. 99.

30. ***ಸಂಕೀರ್ಣ ವಚನ ಸಂಪುಟ***, ಸಂಪುಟ 3, ಮೋಳಿಗೆ ಮಾರಯ್ಯನ ವಚನ 2175, ಪೂರ್ವೋಕ್ತ, ಪು. 699.

31. (ಲೇ) ಗುರುರಾಜಾಚಾರ್, ಎಸ್., 'ಕರ್ನಾಟಕದ ಕೆಲವು ಕೈಗಾರಿಕೆಗಳು', ಮಾನವಿಕ ಕರ್ನಾಟಕ, ಸಂಪುಟ-4, ಸಂಚಿಕೆ-2, 1974, ಪು. 42.

32. ಶಿವಕೋಟ್ಯಾಚಾರ್ಯನ ***ವಡ್ಡಾರಾಧನೆ***, ಗದ್ಯಾನುವಾದ : ಕೇಶವಭಟ್ಟ, ಬಿ., ಕ.ಸಾ.ಪ. ಬೆಂಗಳೂರು, 2003, ಪು. 49.

33. ನಯಸೇನ ವಿರಚಿತ ***ಧರ್ಮಾಮೃತಂ***, ಪೂರ್ವೋಕ್ತ, ಪು. 123.

34. ಅದೇ, ಪು. 190.

35. ಅದೇ.

36. ***ಸಂಕೀರ್ಣ ವಚನ ಸಂಪುಟ,*** ಸಂಪುಟ 3, ಬಾಚಿ ಕಾಯಕದ ಬಸವಣ್ಣನ ವಚನ 224, ಪೂರ್ವೋಕ್ತ, ಪು. 91.

37. ***ಶಿವಶರಣೆಯರ ವಚನ ಸಂಪುಟ,*** ಬಾಚಿ ಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆಯ ವಚನ 1091, ಪೂರ್ವೋಕ್ತ, ಪು. 223.

38. ***ಸಂಕೀರ್ಣ ವಚನ ಸಂಪುಟ,*** ಸಂಪುಟ 3, ಬಾಚಿ ಕಾಯಕದ ಬಸವಣ್ಣನ ವಚನ 211, ಪೂರ್ವೋಕ್ತ, ಪು. 85.

39. ***ಪಂಪ ಭಾರತ ದೀಪಿಕೆ,*** (ಸಂ) ನರಸಿಂಹಚಾರ್, ಡಿ.ಎಲ್., (ವಜ್ರಕೀಟಂಗಳ್ ಕರ್ಣನೆರಡುಂ ತೊಡೆಯು ಮನುಳಿಯನೂಱ್ ಕೊಡಂತಿಯೊಳ್ ಬೆಟ್ಟದಂತತ್ತಮಿತ್ತ ಮುರ್ಚಿ ಪೋಗೆಯುಂ), ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., ಮೈಸೂರು, 1971, ಪು. 38.

40. ನಯಸೇನ ವಿರಚಿತ ***ಧರ್ಮಾಮೃತಂ,*** ಪೂರ್ವೋಕ್ತ, ಪು. 123.

41. ***ಸಂಕೀರ್ಣ ವಚನ ಸಂಪುಟ,*** ಸಂಪುಟ 3, ಬಾಚಿ ಕಾಯಕದ ಬಸವಣ್ಣನ ವಚನ 224, ಪೂರ್ವೋಕ್ತ, ಪು. 91.

42. ***ಪಂಪ ಭಾರತ ದೀಪಿಕೆ,*** (ಸಂ) ನರಸಿಂಹಚಾರ್, ಡಿ.ಎಲ್., ಪೂರ್ವೋಕ್ತ, ಪು. 38.

43. EC VIII, ಹಾ 160, ಕ್ರಿ.ಶ. 1215, ಪು. 392.

44. EC XI, ಚಿಮ 21, ಕ್ರಿ.ಶ. 1077, ಪು. 14.

45. ನಯಸೇನ ವಿರಚಿತ ***ಧರ್ಮಾಮೃತಂ,*** ಪೂರ್ವೋಕ್ತ, ಪು. 190.

46. EC VI, ಕೃಪೇ 66, ಕ್ರಿ.ಶ. 1117, ಪು. 49.

47. SII XI, ನಂ. 127, ಕುರ್ತುಕೋಟಿ, ಗದಗ (ತಾ), ಕ್ರಿ.ಶ. 1082, ಪು. 149.

48. ಶಿವಕೋಟ್ಯಾಚಾರ್ಯನ ***ವಡ್ಡಾರಾಧನೆ,*** ಪೂರ್ವೋಕ್ತ, ಪು. 250.

49. ***ಬಸವಣ್ಣನವರ ವಚನ ಸಂಪುಟ,*** ವಚನ 590, ಪೂರ್ವೋಕ್ತ, ಪು. 148.

50. ***ಚನ್ನಬಸವಣ್ಣನವರ ವಚನ ಸಂಪುಟ,*** ವಚನ 192, (ಕಬ್ಬುನವ ಕಮ್ಮಾರ ಮಾಡುವನೆಂದರೆ, ಆ ಕಬ್ಬುನ ತಾ ಕಮ್ಮಾರನೆ?), ಪೂರ್ವೋಕ್ತ, ಪು. 57.

51. ***ಬಸವಣ್ಣನವರ ವಚನ ಸಂಪುಟ,*** ವಚನ 155, ಪೂರ್ವೋಕ್ತ, ಪು. 45.

52. ನಯಸೇನ ವಿರಚಿತ ***ಧರ್ಮಾಮೃತಂ,*** ಪೂರ್ವೋಕ್ತ, ಪು. 190.

53. ಕೇಶಿರಾಜಕೃತ ***ಶಬ್ದಮಣಿದರ್ಪಣ,*** (ವ್ಯಾಖ್ಯಾನ) ಪದ್ಮನಾಭಶರ್ಮ, ಡಿ., ಪದ್ಮಾಂಬ ಪ್ರಕಾಶನ, ಬೆಂಗಳೂರು, 1976, ಪು. 224.

54. ಚಿದಾನಂದ ಮೂರ್ತಿ, ಎಂ., ***ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,*** ಪ್ರಸಾರಾಂಗ, ಮೈಸೂರು ವಿ.ವಿ., ಮೈಸೂರು, 1979, ಪು. 436.

55. ನಯಸೇನ ವಿರಚಿತ ***ಧರ್ಮಾಮೃತಂ,*** ಪೂರ್ವೋಕ್ತ, ಪು. 253.

56. ***ಚನ್ನಬಸವಣ್ಣನವರ ವಚನಗಳು***, ವಚನ 889, (ಸಂ) ಹಿರೇಮಠ, ಆರ್.ಸಿ., ಪೂರ್ವೋಕ್ತ, ಪು. 422.

57. ***ಬಸವಣ್ಣನವರ ವಚನಗಳು***, ವಚನ 197, (ಸಂ) ಹಿರೇಮಠ, ಆರ್.ಸಿ., ಪೂರ್ವೋಕ್ತ, ಪು. 84.

58. ***ಸಿದ್ಧರಾಮೇಶ್ವರರ ವಚನ ಸಂಪುಟ***, ವಚನ 1390 ಹಾಗೂ ವಚನ 1928, ಕ.ಪು.ಪ್ರಾ. ಬೆಂಗಳೂರು, 2001, ಪು. 401 ಹಾಗೂ 551.

59. ನಯಸೇನ ವಿರಚಿತ ***ಧರ್ಮಾಮೃತಂ***, ಪೂರ್ವೋಕ್ತ, ಪು. 841.

60. ***ಬಸವಣ್ಣನವರ ವಚನಗಳು***, ವಚನ 125, (ಸಂ) ಹಿರೇಮಠ, ಆರ್.ಸಿ., ಪೂರ್ವೋಕ್ತ, ಪು. 58.

61. ನಯಸೇನ ವಿರಚಿತ ***ಧರ್ಮಾಮೃತಂ***, ಪೂರ್ವೋಕ್ತ, ಪು. 191.

62. ಅದೇ, ಪು. 403.

63. ***ಚನ್ನಬಸವಣ್ಣನವರ ವಚನಗಳು***, ವಚನ 502, (ಸಂ) ಹಿರೇಮಠ, ಆರ್.ಸಿ., ಪೂರ್ವೋಕ್ತ, ಪು. 228.

64. ***ಸಕಲ ಪುರಾತನರ ವಚನಗಳು***, ಸಂಪುಟ-2, ನಗೆಯ ಮಾರಿತಂದೆಯ ವಚನ, ವಚನ 1250, (ಸಂ) ಸುಂಕಾಪುರ, ಎಂ.ಎಸ್., (ಹಿಂದೆ ನಾ ಬಂದ ಭವಕ್ಕೆ ಕಟ್ಟಣೆಯಿಲ್ಲ ಉದಯದಲ್ಲಿ ಕಮ್ಮಾರನ ಮನೆಗೆ ಬಂದು ಬೇಸತ್ತೆ), ಕನ್ನಡ ಅಧ್ಯಯನ ಸಂಸ್ಥೆ ಕರ್ನಾಟಕ ವಿ.ವಿ., ಧಾರವಾಡ, 1976, ಪು. 450.

65. ***ಬಸವಣ್ಣನವರ ವಚನ ಸಂಪುಟ***, ವಚನ 1250, (ನಿನ್ನಾಳಿ ಕುಂಬಾರನ ಕೆಲಸದೋಪಾದಿ), ಪೂರ್ವೋಕ್ತ, ಪು. 344.

    ***ಚೆನ್ನಬಸವಣ್ಣನವರ ವಚನ ಸಂಪುಟ***, ವಚನ 192, (ಮಡಕೆಯ ಕುಂಬಾರ ಮಾಡುವನೆಂದರೆ ಆ ಮಡಕೆ ತಾ ಕುಂಬಾರನೆ?), ಪೂರ್ವೋಕ್ತ, ಪು. 57.

    ***ಸಿದ್ಧರಾಮೇಶ್ವರರ ವಚನ ಸಂಪುಟ***, ವಚನ 1878, (ಕುಂಬಾರನ ಆವಿಗೆಯಲ್ಲಿ ಕುಂಬಾರನಿಲ್ಲ), ಪೂರ್ವೋಕ್ತ, ಪು. 538.

66. ನಯಸೇನ ವಿರಚಿತ ***ಧರ್ಮಾಮೃತಂ***, ಪೂರ್ವೋಕ್ತ, ಪು. 192.

67. ***ಶಿವಶರಣೆಯರ ವಚನ ಸಂಪುಟ***, ಗುಂಡಯ್ಯಗಳ ಪುಣ್ಯಸ್ತ್ರೀ ಕೇತಲದೇವಿಯ ವಚನ 772, ಪೂರ್ವೋಕ್ತ, ಪು. 245.

68. ***ಬಸವಣ್ಣನವರ ವಚನ ಸಂಪುಟ***, ವಚನ 870, ಪೂರ್ವೋಕ್ತ, ಪು. 277.

69. ಅದೇ, ವಚನ 70, ಪು. 20.

70. ***ಚೆನ್ನಬಸವಣ್ಣನವರ ವಚನ ಸಂಪುಟ***, ವಚನ 192, (ಮಡಕೆಯ ಕುಂಬಾರ ಮಾಡುವನೆಂದರೆ ಆ ಮಡಕೆ ತಾ ಕುಂಬಾರನೆ?), ಪೂರ್ವೋಕ್ತ, ಪು. 57.

71. ಕವಿಚಕ್ರವರ್ತಿ ಕವಿರನ್ನ ವಿರಚಿತ ***ಸಾಹಸ ಭೀಮ ವಿಜಯಂ*** (ಗದಾಯುದ್ಧಂ), (ಸಂ) ಕುಲಕರ್ಣಿ, ಆರ್.ವಿ., ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1998, ಪು. 92.

72. ***ಬಸವಣ್ಣನವರ ವಚನ ಸಂಪುಟ,*** ವಚನ 1250, ಪೂರ್ವೋಕ್ತ, ಪು. 344.

73. ಪಂಪಮಹಾಕವಿ ವಿರಚಿತ ***ಆದಿಪುರಾಣಂ,*** ಗದ್ಯಾನುವಾದ : ನರಸಿಂಹಶಾಸ್ತ್ರಿ ಕೆ.ಎಲ್., ಕ.ಸಾ.ಪ. ಬೆಂಗಳೂರು, 1999, ಪು. 565.

74. ***ಹರಿಹರನ ರಗಳೆಗಳು,*** ಕುಂಬಾರ ಗುಂಡಯ್ಯನ ರಗಳೆ, (ಸಂ) ಕಲಬುರ್ಗಿ, ಎಂ.ಎಂ., ಕನ್ನಡ ವಿ.ವಿ., ಹಂಪಿ, 1999, ಪು. 270.

75. ***ಶಿವಶರಣೆಯರ ವಚನ ಸಂಪುಟ,*** ಅಕ್ಕಮಹಾದೇವಿಯ ವಚನಗಳು, ವಚನ 139, (ಸುಟ್ಟ ಮಡಕೆ ಮುನ್ನಿನಂತೆ ಮರಳಿ, ಧರೆಯನಪ್ಪಬಲ್ಲದೆ), ಪೂರ್ವೋಕ್ತ, ಪು. 44.

    ***ಚೆನ್ನಬಸವಣ್ಣನವರ ವಚನ ಸಂಪುಟ,*** ವಚನ 169, (ಹಸಿಯ ಮಣ್ಣಿನಲ್ಲಿ ಮಾಡಿದ ಮಡಕೆ ಅಗ್ನಿ ಮುಖದಿಂದಾದ ಬಳಿಕ ಅದು ತನ್ನ ಪೂರ್ವಕುಲವ ಬೆರಸುವುದೆ?), ಪೂರ್ವೋಕ್ತ, ಪು. 50.

76. ***ಬಸವಣ್ಣನವರ ವಚನ ಸಂಪುಟ,*** ವಚನ 16, (ಆವಿಗೆಯಲೊದಗಿದ ಪುತ್ಥಳಿಯ ರೂಹಿನಂತೆ ಆಯಿತು), ಪೂರ್ವೋಕ್ತ, ಪು. 8.

77. ಶಿವಕೋಟ್ಯಾಚಾರ್ಯನ ***ವಡ್ಡಾರಾಧನೆ,*** (ಸಂ) ನರಸಿಂಹಚಾರ್, ಡಿ.ಎಲ್., ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಮೈಸೂರು, 2003, ಪು. 300.

78. ***ಸಂಕೀರ್ಣ ವಚನ ಸಂಪುಟ-1,*** ಅಂಬಿಗರ ಚೌಡಯ್ಯನ ವಚನ 33, ಕ.ಪು.ಪ್ರಾ. ಬೆಂಗಳೂರು, 2001, ಪು. 14.

79. ಚಿದಾನಂದ ಮೂರ್ತಿ, ಎಂ., ಪೂರ್ವೋಕ್ತ, ಪು. 439.

80. ***ಅಕ್ಕನ ವಚನಗಳು,*** ವಚನ 326, (ಸಂ) ಬಸವರಾಜು, ಎಲ್., ಗೀತಾ ಬುಕ್ ಹೌಸ್, ಮೈಸೂರು, 1990, ಪು. 170.

81. Gururajachar, S., *Some Aspects of Economic and Social Life in Karnataka*, Prasaranga, University of Mysore, 1974, pp. 79.

82. ನಯಸೇನ ವಿರಚಿತ ***ಧರ್ಮಾಮೃತಂ,*** ಪೂರ್ವೋಕ್ತ, ಪು. 152.

83. ***ಸಿದ್ಧರಾಮೇಶ್ವರರ ವಚನ ಸಂಪುಟ,*** ವಚನ 1455, ಪು. 420.

84. ***ಬಸವಣ್ಣನವರ ವಚನಗಳು,*** ವಚನ 962, (ಕಲ್ಲೊಳಗೆ ಹೊನ್ನುಂಟು ಮರದೊಳಗೆ ಅಗ್ನಿಯುಂಟು), (ಸಂ) ಹಿರೇಮಠ, ಆರ್.ಸಿ., ಪೂರ್ವೋಕ್ತ, ಪು. 403.

85. ***ಚನ್ನಬಸವಣ್ಣನವರ ವಚನಗಳು,*** ವಚನ 295, (ಭೂಮಿಯ ಜಲಗುಗರ್ಚೆ ಹೇಮವನರಸುವಂತೆ), (ಸಂ) ಹಿರೇಮಠ, ಆರ್.ಸಿ., ಪೂರ್ವೋಕ್ತ, ಪು. 129.

86. ***ಬಸವಣ್ಣನವರ ವಚನಗಳು,*** ವಚನ 965, (ಸಂ) ಹಿರೇಮಠ, ಆರ್.ಸಿ., ಪೂರ್ವೋಕ್ತ, ಪು. 405.

87. ***ಬಸವಣ್ಣನವರ ವಚನ ಸಂಪುಟ***, ವಚನ 251, ಪೂರ್ವೋಕ್ತ, ಪು. 62.

88. ನಯಸೇನ ವಿರಚಿತ ***ಧರ್ಮಾಮೃತಂ***, ಪೂರ್ವೋಕ್ತ, ಪು. 609.

89. ಅದೇ, ಪು. 811.

90. ಮ.ಮಾ.ವಚನ 144, (ಸಂ) ಉಮಾಪತಿ, ಪು. 55.

91. ***ಚನ್ನಬಸವಣ್ಣನವರ ವಚನಗಳು***, ವಚನ 71, (ಅಕ್ಕಸಾಲೆಯ ಭಕ್ತಿ ಅಗ್ಗಿಷ್ಟಿಗೆಯಲ್ಲಿ ಹೋಯಿತು), (ಸಂ) ಹಿರೇಮಠ, ಆರ್.ಸಿ., ಪೂರ್ವೋಕ್ತ, ಪು. 33.

92. ಅದೇ, ವಚನ 357, (ಆವಂಗೆ ಇಕ್ಕುಳ, ಅಡಿಗಲ್ಲು, ಚಿಮ್ಮಟಿಗೆ ಮೊದಲಾದ ಸಂಪಾದನೆಗಳ ಕೊಟ್ಟವರಾರು?), ಪು. 162.

93. ಅದೇ.

94. ***ಬಸವಣ್ಣನವರ ವಚನ ಸಂಪುಟ***, ವಚನ 362, (ಕಾಗೆ ವಿಷ್ಟಿಸುವ ಹೊನ್ನಕಳಸವಹುದರಿಂದ), ಪೂರ್ವೋಕ್ತ, ಪು. 87.

95. ಅದೇ, ವಚನ 693, (ಎನ್ನ ಹೆಣನ ಮೇಲೆ ಕಂಚಿಟ್ಟುಂಡಡೆಯೂ ಮಾಣೆ), ಪೂರ್ವೋಕ್ತ, ಪು. 174.

96. ಅದೇ, ವಚನ 861, (ಉಂಬ ಬಟ್ಟಲು ಬೇರೆ ಕಂಚಲ್ಲ, ನೋಡುವ ದರ್ಪಣ ಬೇರೆ ಕಂಚಲ್ಲ, ಭಾಂಡ ಒಂದೆ ಭಾಜನ ಒಂದೆ, ಬೆಳಗೆ ಕನ್ನಡಿಯೆನಿಸಿತ್ತಯ್ಯಾ), ಪೂರ್ವೋಕ್ತ, ಪು. 224.

97. (ಲೇ) ಗುರುರಾಜಾಚಾರ್, ಎಸ್., ಕರ್ನಾಟಕದ ಕೆಲವು ಕೈಗಾರಿಕೆಗಳು, ಪೂರ್ವೋಕ್ತ, ಪು. 47.

98. ***ಶಿವಶರಣೆಯರ ವಚನ ಸಂಪುಟ***, ಮೋಳಿಗೆ ಮಹಾದೇವಿಯ ವಚನ 1, (ಅಂಗಕ್ರಿಯೆಯನರಿವಲ್ಲಿ ಸ್ಥಾಣುವಿನ ಬಾಯ ತಿಲದಂತೆ), ಪೂರ್ವೋಕ್ತ, ಪು. 336.

99. ***ಬಸವಣ್ಣನವರ ವಚನ ಸಂಪುಟ***, ವಚನ 579, (ಮಾಣದೆ ಅರಳೆಯ ತಿಟ್ಟನೆ ತಿರುಗುವ ಗಾಣದೆತ್ತಿನಂತೆ), ಪೂರ್ವೋಕ್ತ, ಪು. 114.

100. ***ಸಂಕೀರ್ಣ ವಚನ ಸಂಪುಟ-2***, ನಗೆಯ ಮಾರಿತಂದೆಯ ವಚನ 1240, ಪೂರ್ವೋಕ್ತ, ಪು. 393.

101. EC X, ಅಕೆ 39, ಕ್ರಿ.ಶ. 1184, ಪು. 53.

     EC X, ಅಕೆ 23, ಕ್ರಿ.ಶ. 1173, ಪು. 30.

102. EC VII, ನಾಮಂ 63, ಕ್ರಿ.ಶ. 1165, ಪು. 44.

103. EC V, ಮೈ 215, ಕ್ರಿ.ಶ. 1175, ಪು. 317.

104. EC X, ಅಕೆ 57, ಕ್ರಿ.ಶ. 1101, ಪು. 83.

105. EC X, ಅಕೆ 23, ಕ್ರಿ.ಶ. 1173, ಪು. 30.

106. *ಬಸವಣ್ಣನವರ ವಚನ ಸಂಪುಟ*, ವಚನ 384, ಪೂರ್ವೋಕ್ತ, ಪು. 92.

107. ಅದೇ, ವಚನ 579, ಪು. 144.

108. EC VI, ಹಾಪು 63, ಕ್ರಿ.ಶ. 1174, ಪು. 140.

109. EC IX, ಬೇ 317, ಕ್ರಿ.ಶ. 1173, ಪು. 294.

110. ರಂಗಸ್ವಾಮಿ, ಎ., *ಚಾವುಂಡರಾಯನ ಲೋಕೋಪಕಾರ ಒಂದು ಅವಲೋಕನ*, ದರ್ಶನ ಕೀರ್ತಿ ಪ್ರಕಾಶನ, ಮೈಸೂರು, 1996, ಪು. 266.

111. EC XI (Old), ದಾಗೆ 149, ಕ್ರಿ.ಶ. 1113, ಪು. 201.

112. EC V(Old), ಅಕೆ 127, ಕ್ರಿ.ಶ. 1185, ಪು. 519.

113. ಕುಮಾರಸ್ವಾಮಿ, ಕೆ.ಎಸ್., *ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರಿಯರು*, ಕ.ಸಾ.ಪ. ಬೆಂಗಳೂರು, 1996, ಪು. 117.

114. EC VII, ನಾಮಂ 149, ಕ್ರಿ.ಶ. 776, ಪು. 147.

115. SII XI, ನಂ. 127, ಕುರ್ತುಕೋಟಿ, ಗದಗ (ತಾ), ಕ್ರಿ.ಶ. 1082, ಪು. 149.

116. SII XI, ನಂ. 151, ಬೆಳವಣಿಕಿ, ರೋಣ (ತಾ), ಕ್ರಿ.ಶ. 1102, ಪು. 189.

117. EC VI, ಕೃಪೇ 66, ಕ್ರಿ.ಶ. 1117, ಪು. 49.

118. ಚಿದಾನಂದಮೂರ್ತಿ, ಎಂ., ಪೂರ್ವೋಕ್ತ, ಪು. 435.

119. EC XI, ಮೊಗೆ 18, ಕ್ರಿ.ಶ. 1129, ಪು. 162.

120. SII XI, ನಂ. 50, ಯಲಿಶಿರೂರ್, ಗದಗ (ತಾ), ಕ್ರಿ.ಶ. 1138, ಪು. 38.

121. SII XI, ನಂ. 127, ಕುರ್ತುಕೋಟಿ, ಗದಗ (ತಾ), ಕ್ರಿ.ಶ. 1082, ಪು. 149.

122. SII IX(i), ನಂ. 101, ಮೋರಿಗೆರೆ, ಹಡಗಲಿ (ತಾ), ಕ್ರಿ.ಶ. 1045, ಪು. 74.

123. EC IX, ಬೇ 88, ಕ್ರಿ.ಶ. ?, ಪು. 47.

124. EC IX, ಬೇ 72, ಕ್ರಿ.ಶ. ?, ಪು. 44.

125. SII XI, ನಂ. 97, ಮುಳುಗುಂದ, ಗದಗ (ತಾ), ಕ್ರಿ.ಶ. 1062, ಪು. 94.

126. EC XI, ಮೊಗೆ 25, ಕ್ರಿ.ಶ. 1063, ಪು. 166.

127. EC VII, ನಾಮಂ 170, 12ನೇ ಶ, ಪು. 170.

128. SII XI(ii), ನಂ. 147, ಚಿಕ್ಕಹಂದಿಗೋಳ, ಗದಗ (ತಾ), ಕ್ರಿ.ಶ. 1099, ಪು. 182.

129. EC VII, ಮಂಡ್ಯ 56, ಕ್ರಿ.ಶ. 1276, ಪು. 238.

130. SII XV, ನಂ. 57, ಡಂಬಳ, ಮುಂಡರಗಿ (ತಾ), ಕ್ರಿ.ಶ. 1184, ಪು. 78.

131. SII XX, ನಂ. 76, ಬಾಳಂಬೀಡ, ಹಾನಗಲ್ (ತಾ), ಕ್ರಿ.ಶ. 1118, ಪು. 95.

132. ***ಬಸವಣ್ಣನವರ ವಚನಗಳು***, ವಚನ 1098, (ಸಂ) ಹಿರೇಮಠ, ಆರ್.ಸಿ., ಪೂರ್ವೋಕ್ತ, ಪು. 460.

133. ***ಸಂಕೀರ್ಣ ವಚನ ಸಂಪುಟ-3***, ಮೇದರ ಕೇತಯ್ಯನ ವಚನ 1405, ಪೂರ್ವೋಕ್ತ, ಪು. 478.

134. ಅದೇ, ವಚನ 1395, ಪು. 475.

135. ***ಸಂಕೀರ್ಣ ವಚನ ಸಂಪುಟ-3***, ಮಾದಾರ ಧೂಳಯ್ಯನ ವಚನ 38 ಪೂರ್ವೋಕ್ತ, ಪು. 421.

136. ಅದೇ, ವಚನ 7, (ಅಟ್ಟೆಯ ಚುಚ್ಚುವ ಉಳಿಯ ಮೊನೆಯಲ್ಲಿ), ಪು. 411.

137. ***ಬಸವಣ್ಣನವರ ವಚನ ಸಂಪುಟ***, ವಚನ 604, (ನಿಮ್ಮ ಶರಣರ ಚಮ್ಮಾವುಗೆಗೆ ಪೃಥ್ವಿ ಸಮಬಾರದು), ಪೂರ್ವೋಕ್ತ, ಪು. 151.

138. ನಯಸೇನ ವಿರಚಿತ ***ಧರ್ಮಾಮೃತಂ***, ಪೂರ್ವೋಕ್ತ, ಪು. 124.

139. ಅದೇ, ಪು. 609.

140. ***ಸಂಕೀರ್ಣ ವಚನ ಸಂಪುಟ-3***, ಮಾದಾರ ಚನ್ನಯ್ಯನ ವಚನ 9, ಪೂರ್ವೋಕ್ತ, ಪು. 408.

141. **Thurston Edgar, *Castes and Tribes of Southern India*, Asian Educational Services, New Delhi, 1909, pp. 280.**

# ಅಧ್ಯಾಯ -4

# ಆರ್ಥಿಕ ಅಂಶಗಳು

---

**4.1. ಉತ್ಪಾದಿತ ವಸ್ತುಗಳು**

- 4.1.1. ನೇಕಾರರು
- 4.1.2. ಬಡಗಿಗಳು
- 4.1.3. ಕಮ್ಮಾರರು
- 4.1.4. ಕುಂಬಾರರು
- 4.1.5. ಅಕ್ಕಸಾಲಿಗರು
- 4.1.6. ಕಂಚುಗಾರರು
- 4.1.7. ಚಮ್ಮಾರರು
- 4.1.8. ಮೇದಾರರು
- 4.1.9. ಗಾಣಿಗರು

**4.2. ವ್ಯಾಪಾರಿ ವಸ್ತುಗಳು**

**4.3. ಮಾರುವ ವ್ಯವಸ್ಥೆ**

**4.4. ವಸ್ತುಗಳ ಸಾಗಾಟ**

**4.5. ತೂಕಗಳು ಮತ್ತು ಅಳತೆಗಳು**

- 4.5.1. ತೂಕಗಳು
- 4.5.2. ಅಳತೆ ಮತ್ತು ಮಾಪನಗಳು
- 4.5.3. ಎಣಿಕೆ
- 4.5.4. ಹೊರೆ, ಗಂಟು, ಮೊಟ್ಟೆ, ತಲೆಹೊರೆ ಇತ್ಯಾದಿ

**4.6. ವೃತ್ತಿ ತೆರಿಗೆಗಳು**

---

**4.7. ವರ್ತಕರು**

- 4.7.1. ಉತ್ಪಾದಕ – ವಿನಿಮಯ ವರ್ತಕರು
- 4.7.2. ವಿನಿಯಮ ವರ್ತಕರು

**4.8. ವೇತನ ದತ್ತಿಗಳು**

- 4.8.1. ಆಯ : ಅರ್ಥ, ಪ್ರಾಚೀನತೆ, ಆಯ ಹಾಗೂ ಆಯಗಾರರನ್ನು ಕುರಿತ ಸಾಮಾನ್ಯ ವಿವರಣೆ

**4.9. ಹಣದ ವಿನಿಯೋಗ**

- 4.9.1. ವೈಯಕ್ತಿಕ ದಾನ
- 4.9.2. ಸಾಮೂಹಿಕ ದಾನ
  - 4.9.2.1. ಒಂದೇ ಪ್ರಕಾರದ ಕುಶಲಕರ್ಮಿಗಳು ನೀಡಿದ ದಾನಗಳು
  - 4.9.2.2. ವಿವಿಧ ಪ್ರಕಾರದ ವರ್ತಕ ಕುಶಲಕರ್ಮಿಗಳು ನೀಡಿದ ದಾನಗಳು

**4.10. ಸಂಘಟನೆಗಳು**

- 4.10.1. ವೃತ್ತಿಸಂಘಗಳು

## 4.1. ಉತ್ಪಾದಿತ ವಸ್ತುಗಳು

### 4.1.1. ನೇಕಾರರು

ಪ್ರಾಚೀನ ಭಾರತದ ಪ್ರಧಾನ ಕುಶಲಕಲೆಗಳಲ್ಲಿ ನೆಯ್ಗೆಯೂ ಒಂದಾಗಿತ್ತು. ಭಾರತದ ಹಲವಾರು ಪ್ರಾಂತ್ಯಗಳು ಈ ಕುಶಲಕಲೆಗೆ ಹೆಸರಾಗಿದ್ದವು. ಸೋಮೇಶ್ವರ[1] 'ವಸ್ತ್ರೋಪಭೋಗ ಪ್ರಕರಣದಲ್ಲಿ ಪ್ರೋದ್ದಾಲಪುರ, ಚೀರಪಲ್ಲಿ, ನಾಗಪಟ್ಟಣ, ಚೋಲದೇಶ, ಅಲ್ಲಿಕಾರ್ಕುಲ, ಸಿಂಹಳ, ಅಣಿಲಾವಾಡ, ಮೂಲಸ್ಥಾನ, ತೋಂಡೀದೇಶ, ಪಚ್ಚಪಟ್ಟಣ, ಮಹಾಚೀನ, ಕಲಿಂಗ, ವಂಗಗಳಲ್ಲಿ ಸಿದ್ಧವಾದ ಬಟ್ಟೆಗಳು ರಾಜಯೋಗ್ಯವೆಂದು ಹೆಸರಿಸುವುದು ಗಮನಾರ್ಹವಾದುದು.

#### ಪ್ರಾಚೀನ ಮಗ್ಗಗಳು

ಉಪಯೋಗಿಸುವ ಕಚ್ಚಾಮಾಲುಗಳನ್ನು ಆಧರಿಸಿ ಕೈಮಗ್ಗಗಳನ್ನು ನಾಲ್ಕು ವಿಧವಾಗಿ ವಿಂಗಡಿಸಬಹುದು. ಹತ್ತಿ ಬಟ್ಟೆ ನೇಯುವ ಮಗ್ಗ, ರೇಷ್ಮೆ ನೇಯುವ ಮಗ್ಗ, ಉಣ್ಣೆ ಬಟ್ಟೆ ನೇಯುವ ಮಗ್ಗ, ಇತರ ವಸ್ತುಗಳನ್ನು ಉಪಯೋಗಿಸಿ ನೇಯುವ ಮಗ್ಗ.

#### ಉತ್ಪಾದಿತ ವಸ್ತುಗಳು

ಇವರು ಹತ್ತಿ ರೇಷ್ಮೆ ಮತ್ತು ಉಣ್ಣೆ ಬಟ್ಟೆಗಳನ್ನು ನೇಯುತ್ತಿದ್ದರು. ಹತ್ತಿಯ ಬೆಳೆಗೆ ಕರ್ನಾಟಕ ಮೊದಲಿನಿಂದಲೂ ಹೆಸರಾಗಿತ್ತು. ಅದರಲ್ಲೂ ಬಿಜಾಪುರ ಹಾಗೂ ಬೆಳಗಾಮ್ ಜಿಲ್ಲೆಗಳು ಹೆಚ್ಚು ಪ್ರಸಿದ್ಧವಾದವು. ವಿಧವಿಧವಾದ ಹತ್ತಿಯ ಬಟ್ಟೆಗಳನ್ನು ತಯಾರಿಸುತ್ತಿದ್ದರು.[2] ರೇಷ್ಮೆ ಕೈಗಾರಿಕೆಯೂ ಸಾಕಷ್ಟು ಪ್ರಗತಿ ಸಾಧಿಸಿತ್ತು. 'ಬಿಜ್ಜಳನ ಭಂಡಾರದ ಚಿನಿಮಹಾಚಿನಿ ದೇವಾಂಗ ಲತಾವಳಿ ಹಂಸಾವಳಿ ಗಜಾವಳಿ ಮೊದಲಾದ ಪಟ್ಟಾವಳಿಯ ದಿಂಡುಗಳಂ ತರಿಸಿ [ಚಿ]ಂದದೊಳಿರಿಸಿ ತರತರದಿಂ ಬಿಡಿಸಿ ಪರಿಪರಿಯ ದಿವ್ಯವಸ್ತ್ರಂಗಳಂ' ಎಂಬ ಬಸವರಾಜ ರಗಳೆ[3]ಯ ಉಲ್ಲೇಖವು ಹಲವು ಬಗೆಯ ರೇಷ್ಮೆ ವಸ್ತ್ರಗಳನ್ನು ಹೆಸರಿಸುತ್ತದೆ.

ಸೋಮೇಶ್ವರ ತನ್ನ (ಐತಿಹಾಸಿಕ ಚಂಪೂ ಎಂದು ಪರಿಗಣಿಸಲ್ಪಟ್ಟಿರುವ) ವಿಕ್ರಮಾಂಕಾಭ್ಯುದಯದಲ್ಲಿ[4] ಕಲ್ಯಾಣ ನಗರದ ಪೇಟೆಯನ್ನು (ವಿಪಣಿಸದನ ವರ್ಣನಂ) ವರ್ಣಿಸುತ್ತ ಅಲ್ಲಿ ಉಪಲಬ್ಧವಾಗಿದ್ದ ಅತ್ಯುತ್ತಮ ಹಾಗೂ ಸುಂದರವಾದ ವಸ್ತ್ರಗಳ ಬಗ್ಗೆ ಹೇಳುವ ಮಾತುಗಳನ್ನು ಗಮನಿಸಬಹುದು. ಆ ಬಟ್ಟೆಗಳು ಎಷ್ಟು ಸುಂದರ ಹಾಗೂ ಸೂಕ್ಷ್ಮವಾಗಿದ್ದುವೆಂದರೆ, ಅವು ಕೇವಲ ಸ್ಪರ್ಶದಿಂದ ಮಾತ್ರ ತಿಳಿಯಲು ಸಾಧ್ಯವೇ ಹೊರತು ದೃಷ್ಟಿ ಮಾತ್ರಕ್ಕೆ ಅಗೋಚರವಾಗಿದ್ದವು. ಅತಿ ಹಗುರವಾಗಿದ್ದರೂ ಬಹಳ ಬೆಲೆ ಬಾಳುವುವು. ಅವು ಎಷ್ಟು ತೆಳುವು ಹಾಗೂ ಪಾರದರ್ಶಕವಾಗಿದ್ದುವೆಂದರೆ, ಧರಿಸಿದವರ ಅಂಗಾಂಗಗಳು ಸ್ಪಷ್ಟವಾಗಿ ಕಾಣುತ್ತಿದ್ದುವಂತೆ ! ಇಂತಹುದೇ ವರ್ಣನೆ, ದಖನ್ನಿನ ಬಟ್ಟೆಗಳ ಬಗ್ಗೆ ಮಾರ್ಕೋಪೋಲೋ [5] ಮಾಡಿರುವುದನ್ನು ಇಲ್ಲಿ ಸ್ಮರಿಸಬಹುದು.

ಸೆಣಬು (hemp) ಮುಂತಾದವುಗಳಿಂದ ಕೆಲವು ಬಗೆಯ ನಾರುಬಟ್ಟೆ(linen)ಗಳನ್ನೂ ಮಾಡುತ್ತಿದ್ದರು.[6] 2ನೆಯ ನಾಗವರ್ಮ ('ದುಕೂಲ')[7], ವಿಜ್ಞಾನೇಶ್ವರ, ಸೋಮೇಶ್ವರ ('ಕ್ಷೌಮ')[8] ಇವರ ಕೃತಿಗಳಲ್ಲಿ ಇದರ ಪ್ರಸ್ತಾಪವಿದೆ. ಬಹುಶಃ ಚಿತ್ರದುರ್ಗ ಜಿಲ್ಲೆಯ ಬುದೇಹಾಳ್ ಎಂಬಲ್ಲಿ ನಾರುವಸ್ತ್ರಗಳನ್ನು ಮಾಡುತ್ತಿದ್ದರು ಎನ್ನಲಾಗಿದೆ.[9]

ತುಪ್ಪಟಗಳನ್ನು ನೆಯ್ದು ಉಣ್ಣೆಯ ಬಟ್ಟೆಗಳನ್ನು ಮಾಡುತ್ತಿದ್ದರು. 'ಕುತಪ'ವನ್ನು ಅಂದರೆ ಬೆಟ್ಟಗುಡ್ಡಗಳಲ್ಲಿಯ ಟಗರುಗಳ ತುಪ್ಪಟದಿಂದ ಮಾಡಿದ ಕಂಬಳಿಯನ್ನು ವಿಜ್ಞಾನೇಶ್ವರ [10] ಹೆಸರಿಸುತ್ತಾನೆ. ಕಂಬಳಿಗಳ ಪ್ರಸ್ತಾಪ ಕೆಲವು ಶಾಸನಗಳಲ್ಲಿ[11] ಹಾಗೂ ವಚನಗಳಲ್ಲಿರುವುದುಂಟು.[12] ದಾವಣಗೆರೆ, ದೊಡ್ಡ ಬುಳ್ಳಾಪುರ ಮುಂತಾದ ಸ್ಥಳಗಳಲ್ಲಿ ಕಂಬಳಿಗಳನ್ನು ನೆಯ್ಯುತ್ತಿದ್ದಂತೆ ಕಾಣುತ್ತದೆ. ಹಲವು ಬಗೆಯ ಕಂಬಳಿಗಳನ್ನು ಮಾಡುತ್ತಿದ್ದಿರಬೇಕು.[13] ಸ್ವಲ್ಪ ಒರಟಾದ ತುಪ್ಪಟವನ್ನು ಕಂಬಳಿಗಳಿಗೆ ಉಪಯೋಗಿಸುತ್ತಿದ್ದರೆನ್ನಬಹುದು.[14]

ವಿಜ್ಞಾನೇಶ್ವರ [15] ತಿಳಿಸುವಂತೆ, 'ರೋಮಬದ್ಧವೆಂಬುದು ಮೇಲೆ ಧರಿಸುವ ಒಂದು ಉಣ್ಣೆಯ ವಸ್ತ್ರ. ಆತನೇ ಹೇಳುವಂತೆ, 'ವಾಲವಾಸಾ' ಎಂಬುದು ಹಸುವಿನ ಕೂದಲಿನಿಂದ ಮಾಡಿದ ಒಂದು ಬಟ್ಟೆ, ರೇಷ್ಮೆ ಉಣ್ಣೆ ಮುಂತಾದ ಬಟ್ಟೆಗಳ ವರ್ಗೀಕರಣ ಅವುಗಳಿಗೆ ಉಪಯೋಗಿಸಿದ್ದ ಒರಟು, ಮಧ್ಯಮ ಹಾಗೂ ಉತ್ತಮ ದರ್ಜೆಯ ನೂಲಿನ ಆಧಾರದ ಮೇಲೆ ಮಾಡುತ್ತಿದ್ದುದರ ಸೂಚನೆ ಮಿತಾಕ್ಷರಾದಲ್ಲಿದೆ.

ಹೀಗೆ ನೇಕಾರರು ಹತ್ತಿ ರೇಷ್ಮೆ ಉಣ್ಣೆ ಹಾಗೂ ನಾರಿನ ಬಟ್ಟೆಗಳನ್ನು ನೇಯುತ್ತಿದ್ದುದರ ಬಗ್ಗೆ ನಮಗೆ ಶಾಸನ ಹಾಗೂ ಸಾಹಿತ್ಯಾಧಾರಗಳಿವೆ.

### 4.1.2. ಬಡಗಿಗಳು

ಹಳ್ಳಿಯ ನೆರೆಹೊರೆಗಳಲ್ಲಿ, ತಮ್ಮ ಹೊಲಗಳಲ್ಲಿ ಸಿಕ್ಕುವ ಗಿಡಮರಗಳನ್ನು ಕಡಿದು, ಕೆಲವೊಮ್ಮೆ ರೈತರು ತಂದು ಕೊಟ್ಟ ಕಟ್ಟಿಗೆಯಲ್ಲಿ ಅವರಿಗೆ ಬೇಕಾದ ಗೃಹೋಪಯೋಗಿ, ವ್ಯವಸಾಯೋಪಯೋಗಿ ಉಪಕರಣಗಳನ್ನು ತಯಾರಿಸಿಕೊಡುವುದು ಬಡಗಿಗಳ ಕೆಲಸವಾಗಿದೆ. ಇದಕ್ಕಾಗಿ ಒಂದು ಹಳ್ಳಿಯಲ್ಲಿ ತಮ್ಮ ತಮ್ಮ ಆಯದ ಬಡಗಿಗಳನ್ನು ಒಕ್ಕಲಿಗರು ನೇಮಿಸಿಕೊಳ್ಳುವರು. ಇವರನ್ನು 'ಮನೆ ಬಡಗಿ' ಎಂದು ಕರೆಯುತ್ತಾರೆ. ಬಡಗಿಯು ಮಾವು, ಹಲಸು, ಬೇವು [16] ಮುಂತಾದ ಮರಗಳನ್ನು ಮರಗೆಲಸಕ್ಕೆ ಹೆಚ್ಚಾಗಿ ಉಪಯೋಗಿಸಲಾಗುತ್ತಿತ್ತು.

**ಉತ್ಪಾದಿತ ವಸ್ತುಗಳು**

ಬಡಗಿಗಳು ಸಿದ್ಧಪಡಿಸುವ ಮರಮುಟ್ಟುಗಳನ್ನು ಗಮನಿಸಿ ಗೃಹೋಪಯೋಗಿ ವಸ್ತುಗಳು, ವ್ಯವಸಾಯೋಪಯೋಗಿ ವಸ್ತುಗಳು ಹಾಗೂ ಇತರೆ ವಸ್ತುಗಳು ಎಂದು ವಿಭಾಗಿಸಲಾಗಿದೆ.

**ಗೃಹೋಪಯೋಗಿ ವಸ್ತುಗಳು**

ಒನಕೆ, ಕಡಗೋಲು, ಮಣೆ, ಲಟ್ಟಣಿಗೆ, ಹುಟ್ಟು, ಹೊರಸು, ತೊಟ್ಟಿಲು ಮೊದಲಾದ ಮರದಿಂದ ಮಾಡಲಾಗುತ್ತಿದ್ದ ಗೃಹ ಬಳಕೆಯ ಎಲ್ಲಾ ವಸ್ತುಗಳನ್ನು ಬಡಗಿಯು ತಯಾರಿಸುತ್ತಿದ್ದನು.

**ವ್ಯವಸಾಯೋಪಯೋಗಿ ವಸ್ತುಗಳು**

ನೇಗಿಲು, ಕವೆ, ಕವಲಿ, ಕೊಡಲಿ, ದಿಂಡು[17], ತಾಳ, ಹುಗುಲು, ಈಯ, ಮೇಳಿ, ಜಿಗುಳಿ, ಕಣಿ, ನೊಗ, ಎಡಗೋಲಕಾರಿ, ಬಲಗೋಲು, ಬೆಳ್ಳಿ, ಬಿತ್ತವಟ್ಟ (ಬಿತ್ತುವ ಸಾಧನವಾದ ಶೆಡ್ಡಿಯ ಬಟ್ಟಲು)[18] ಮೊದಲಾದ ವ್ಯವಸಾಯದ ಉಪಕರಣಗಳನ್ನು ಒಕ್ಕಲಿಗ ಮುದ್ದಣ್ಣಗಳ ಎರಡು ವಚನಗಳು ಉಲ್ಲೇಖಿಸುತ್ತವೆ. ಬೀಜಗಳನ್ನು ಬಿತ್ತಲು ಬಳಸುವ ಸಾಧನವಾದ 'ಶಡ್ಡೆ 'ಯ ಚಿತ್ರವೊಂದನ್ನು ವಚನ ಭಂಡಾರಿ ಶಾಂತರಸನ ವಚನದಲ್ಲಿ[19] ಕಾಣಬಹುದು. ದಾಸಿಮಯ್ಯನ ವಚನ [20] 'ಬಂಡಿ' ಹಾಗೂ ಅದಕ್ಕೆ ಆಧಾರವಾದ ಕಡೆಗೀಲುಗಳನ್ನು ಉಲ್ಲೇಖಿಸುತ್ತದೆ.

**ಇತರೆ ವಸ್ತುಗಳು**

ಗೃಹೋಪಯೋಗಿ ಹಾಗೂ ವ್ಯವಸಾಯೋಪಯೋಗಿ ಉಪಕರಣಗಳಲ್ಲದೆ ಕುಶಲಕರ್ಮಿಯಾದ ಬಡಗಿಯು ಮನೆಗೆ ಬೇಕಾಗುವ ಇತರೆ ವಸ್ತುಗಳಾದ ಬಾಗಿಲು, ಚೌಕಟ್ಟು, ಹೊಸ್ತಿಲು, ಕಿಡಕಿ, ಕದ, ತೊಲಿ, ಜಂತಿ, ಕಂಭ, ಅಗಳಿ, ಮೇಜು, ಕುರ್ಚಿ, ಕಪಾಟು, ತೊಟ್ಟಿಲು, ಮಂಚ ಮುಂತಾದವುಗಳನ್ನು ತಯಾರಿಸುತ್ತಿದ್ದನು.

ಇವಲ್ಲದೆ ಊರ ದೇವದೇವತೆಯರ ವಿಗ್ರಹ ಕೆತ್ತುವುದು, ರಥ (ತೇರು), ಪಲ್ಲಕ್ಕಿ, ದೇವಾಲಯದ ಬಾಗಿಲು, ಕದ ಇತ್ಯಾದಿ ಮರದ ಇತರ ವಸ್ತುಗಳು ಹಾಗೂ ಕುಂಬಾರನಿಗೆ ಅತೀ ಅವಶ್ಯಕವಾಗಿ ಬೇಕಾದ ತಿಗುರಿ (ಕುಂಬಾರನ ಚಕ್ರ)ಯನ್ನು ತಯಾರಿಸಿ ಕೊಡುವ ಮೂಲಕ ಕುಂಬಾರನು ಬಡಗಿಯ ಸಹಾಯವನ್ನು ಪಡೆಯುತ್ತಾನೆ.

### 4.1.3. ಕಮ್ಮಾರರು

ಕೃಷಿಕ ಮತ್ತು ಕಮ್ಮಾರರಿಬ್ಬರು ಹಿಂದೆ ಪರಸ್ಪರ ಅವಲಂಬಿಗಳಾಗಿದ್ದುದು ತಿಳಿದುಬರುತ್ತದೆ. ಕಮ್ಮಾರರು ಕೃಷಿಕರಲ್ಲಿ ಆಯಗಾರರಾಗಿ ಕೆಲಸ ಮಾಡುತ್ತಿದ್ದರು. ವ್ಯವಸಾಯಕ್ಕೆ ಬೇಕಾದ ಉಪಕರಣಗಳನ್ನು ತಯಾರಿಸಿಕೊಟ್ಟು ಅದಕ್ಕೆ ಪ್ರತಿಯಾಗಿ ಬೆಳೆದ ಧಾನ್ಯದ ಒಂದು ಭಾಗವನ್ನು ಪಡೆಯುತ್ತಿದ್ದರು. ರೈತನಿಗೆ ಕಮ್ಮಾರನ ಹೊರತು ಕೃಷಿ ಮಾಡುವುದು ಅಸಾಧ್ಯವಾಗಿದ್ದ ಕಾರಣದಿಂದ ತಾನು ಬೆಳೆದ ಧಾನ್ಯದಿಂದ ಕಮ್ಮಾರನನ್ನು ಸಂತೋಷಪಡಿಸಿ ಅವನ ಸಹಕಾರವನ್ನು ಅಗತ್ಯಬಿದ್ದಾಗ ಪಡೆಯುತ್ತಿದ್ದನು.

**ಉತ್ಪಾದಿತ ವಸ್ತುಗಳು**

ಕಮ್ಮಾರನು ವ್ಯವಸಾಯಕ್ಕೆ, ಮನೆಯ ಬಳಕೆಗೆ ಹಾಗೂ ಇತರೆ ವೃತ್ತಿಯವರೆಗೆ ಉಪಯುಕ್ತವಾದ ಕಬ್ಬಿಣ ಸಾಧನವನ್ನು ಸಿದ್ದಮಾಡಿಕೊಡುವನು. ಒಕ್ಕಲುತನಕ್ಕೆ ಬೇಕಾಗುವ ಚಕ್ಕಡಿಯ ಹಾರಿ, ಕೀಲು ಇತ್ಯಾದಿ ಹೊಲ ಕೆಲಸಕ್ಕೆ ಬೇಕಾಗುವ ಪಾಳು, ಕುಡಾ, ಕೂರಿಗೆಯ ಹೊಂಬಲದುದಿ, ಕುಡಗೋಲು, ಕುರುಪಿ, ಗುದ್ದಲಿ, ಸಲಿಕೆ, ಕೊಡಲಿ, ಬೆಲ್ಲದ ಗಾಣಕ್ಕೆ ಬೇಕಾಗುವ ಘಮೆ, ಚಾಣಗಿ (ಸಾಣಗಿ) ಇತ್ಯಾದಿ ಹಾಗೂ ಎತ್ತಿನ ಕಾಲಿಗೆ ಬೇಕಾಗುವ ನಾಲುಗಳನ್ನೂ ಮಾಡಿಕೊಡುತ್ತಾನೆ. ಬಂಡಿಯ ಗಾಲಿಗೆ ಹಳಿಯನ್ನು ಬಿಗಿದು ಕೊಡುತ್ತಾನೆ.

ವ್ಯವಸಾಯಕ್ಕೆ ಬೇಕಾಗುವ ಸಲಕರಣೆಗಳನ್ನಲ್ಲದೆ ಬಡಗಿತನಕ್ಕೆ ಬೇಕಾಗುವ ಬಾಚಿ, ಉಳಿ, ಗುಡುಕಿ (ರಂಧ್ರ ತೆಗೆಯಲು), ಅಕ್ಕಸಾಲಿಗಳಿಗೆ ಬೇಕಾಗುವ ಇಕ್ಕಳ, ಸುತ್ತಿಗೆ, ಚಿಮಟಗಳನ್ನು, ಕ್ಷೌರಿಕನಿಗೆ ಬೇಕಾಗುವ ಕತ್ತಿ, ಕತ್ತರಿಗಳನ್ನು, ಸಮಗಾರನಿಗೆ ಬೇಕಾಗುವ ಅರಿ (ತೊಗಲು ಜಜ್ಜಲು), ಡಬ್ಬಣದುಳಿಗಳನ್ನು, ಇವುಗಳಲ್ಲದೆ ಮನೆಬಳಕೆಗೆ ಬೇಕಾಗುವ ಊದುಗೊಳವೆ, ಈಳಿಗೆ, ಕಡತಾರ, ಹಾರಿ, ಒನಕೆಯ ಬಳಿ, ಇಕ್ಕಳ, ಚಿಮಟಾ, ಚಿಲಕ, ಕೊಂಡಿ ಇವೇ ಮೊದಲಾದವುಗಳನ್ನು ಮಾಡಿಕೊಡುತ್ತಾನೆ.

ಪ್ರಾಚೀನ ಹಾಗೂ ಅರ್ವಾಚೀನ ಕಾಲದಲ್ಲಿ, ಕಮ್ಮಾರಿಕೆಯ ವೃತ್ತಿ ವ್ಯವಸಾಯದ ದೃಷ್ಟಿಯಿಂದ ಎಷ್ಟು ಮಹತ್ವದ ವೃತ್ತಿಯೋ ಯುದ್ಧದ ದೃಷ್ಟಿಯಿಂದಲೂ ಅಷ್ಟೇ ಮಹತ್ವದ ವೃತ್ತಿಯಾಗಿದೆ. ಜನಾಂಗದ ಉಪಜೀವನಕ್ಕೆ ವ್ಯವಸಾಯ ಎಷ್ಟು ಮುಖ್ಯವೋ ಆತ್ಮ ಸಂರಕ್ಷಣೆಗಾಗಿ ಯುದ್ಧವೂ ಅಷ್ಟೇ ಮಹತ್ವದ್ದಾಗಿದ್ದರಿಂದ ರಾಜ ಮಹಾರಾಜರು ಯುದ್ಧದ ಸಲಕರಣೆಗಳಿಗಾಗಿ ಕಮ್ಮಾರನನ್ನೇ ಸಂಪೂರ್ಣವಾಗಿ ಅವಲಂಬಿಸಿರಬೇಕಾಗುತ್ತಿತ್ತು.

'ಕಮ್ಮಋರಿಲ್ಲದೆ ಖಡ್ಗಾದಿ ಶಸ್ತ್ರಂಗಳಾಗದು' ಎಂಬ ನಯಸೇನನ [21] ಮಾತನ್ನು ಈ ಸಂದರ್ಭದಲ್ಲಿ ಗಮನಿಸಬಹುದಾಗಿದೆ. ಯುದ್ಧದಲ್ಲಿ ಹೋರಾಡಲು ಬೇಕಾದ ಖಡ್ಗ ಕತ್ತಿ ಕಠಾರಿ, ಭರ್ಚಿ, ಈಟಿ, ಭಲ್ಯ, ಪರೀಘ, ಭಿಂಡಿವಾಳ, ಶಕ್ತಿ ಮೊದಲಾದ ಆಯುಧಗಳನ್ನು ರಕ್ಷಣೆಗೆ ಬೇಕಾಗುವ ರಾವುತರ ಎದೆಗವಚ, ಶಿರಸ್ತ್ರಾಣಗಳನ್ನು, ಅಶ್ವಗಳಿಗೆ ತೊಡಿಸುತ್ತಿದ್ದ ಕವಚ, ಲೋಹವಕ್ಕರೆ, ಕಡಿವಾಣ, ಆನೆಯ ಕಾಲಿಗೆ ಕಟ್ಟುವ ಸರಪಣಿ ಇವೇ ಮೊದಲಾದವುಗಳಿಗೆ ಕಮ್ಮಾರನನ್ನು ಅವಲಂಬಿಸಬೇಕಾಗುತ್ತಿತ್ತು.[22] 'ಕಮ್ಮರನಂಬು ಕಮ್ಮಋಂಗೆ' ಎಂಬ ಗಾದೆಯೂ ಕಂಬಾರರು ಬಾಣಗಳನ್ನೂ ತಯಾರಿಸುತ್ತಿದ್ದರು ಎನ್ನುವುದಕ್ಕೆ ಒಂದು ನಿದರ್ಶನವಾಗಿದೆ.

### 4.1.4. ಕುಂಬಾರರು

ಕುಂಬಾರಿಕೆ ಅತಿ ಕಡಿಮೆ ಬಂಡವಾಳದಲ್ಲಿ ಸಾಮಾನ್ಯ ಜನರಿಗೆ ಅವಶ್ಯಕವಾದ ವಸ್ತುಗಳನ್ನು ತಯಾರಿಸುವಂತ ಪ್ರಮುಖ ಕುಶಲಕಲೆಗಳಲ್ಲಿ ಒಂದಾಗಿದೆ. ಮಡಿಕೆಗಳು, ಬೋಗುಣಿಗಳು, ಗುಡಾಣಗಳು, ಹೆಂಚುಗಳು ಮತ್ತು ಇಟ್ಟಿಗೆಗಳನ್ನು ಕೈಯಿಂದ ಹಲವು ಬಣ್ಣಗಳಲ್ಲಿ, ಹಲವು ಆಕಾರಗಳಲ್ಲಿ ಮತ್ತು ಹಲವು ವಿನ್ಯಾಸಗಳಲ್ಲಿ ತಯಾರಿಸುತ್ತಿದ್ದರು.[23]

**ಉತ್ಪಾದಿತ ವಸ್ತುಗಳು**

ಇವರು ಉತ್ಪಾದಿಸುವ ಮಡಕೆಗಳು ಅನೇಕ ಮಾದರಿಯ ಗಾತ್ರ, ಆಕಾರಗಳಲ್ಲಿ ಲಭ್ಯವಿದ್ದಿರಬೇಕು. ಅವುಗಳನ್ನು ಸಾಹಿತ್ಯಾಧಾರಗಳ ಮೂಲಕ ತಿಳಿಯಬಹುದು.

ಮಡಕೆ[24] : ಮಣ್ಣಿನ ಪಾತ್ರೆ

ಹರವಿ[25] : ಇದು ಗಾತ್ರದಲ್ಲಿ ದೊಡ್ಡದಾದ ಮಾದರಿಯ ಮಡಕೆ

ಭಾಂಡ[26] : ಅಡುಗೆ ಪಾತ್ರೆ

ಭಾಜನ[27] : ಊಟದ ಪಾತ್ರೆ

ಕೊಳಗ[28] : ಧಾನ್ಯವನ್ನು ಅಳೆಯಲು ಬಳಸುತ್ತಿದ್ದ ಮಣ್ಣಿನ ಗುಡಾಣದಂತಿದ್ದ ಗಡಿಗೆ. ಇದೊಂದು ಮಾಪನವಾಗಿ ಬಳಕೆಯಲ್ಲಿತ್ತು.

ಕಂದಲು[29] : ಹೈನಕ್ಕಾಗಿ ಬಳಸುವ ಮಣ್ಣಿನ ಪಾತ್ರೆ

ಕೊಡ : ನೀರು ತರುವ ಗಡಿಗೆ. ಇದರ ಒಡಲು ದೊಡ್ಡದಾಗಿದ್ದು, ತಳದ ಅಗಲ ಕಡಿಮೆಯಾಗಿರುತ್ತದೆ. ಚಿಕ್ಕದಾದ ಕಂಠ ಉಳ್ಳ ಬಾಯಿ ಇರುತ್ತದೆ. ಸಕ್ಕರೆ ಮೊದಲಾದ ವಸ್ತುಗಳನ್ನು ತುಂಬಿಡಲು ಬಳಸುತ್ತಿದ್ದಿರಬೇಕು.[30]

ಗಿಣ್ಣಲು[31] : ಗಿಂಡಿ, ಸಣ್ಣ ಸಣ್ಣ ಪದಾರ್ಥಗಳಿಡುವ ಪಾತ್ರೆ ಬಟ್ಟಲು

ಗಡಿಗೆ[32] : ಮಡಕೆ

ಘಟ[33] : ಮಣ್ಣಿನ ಪಾತ್ರೆ, ಗಡಿಗೆ, ಕೊಡ

ಹಂಚು[34] : ಛಾವಣಿಗೆ ಹೊಂದಿಸುವ ಹಂಚು, ಕುಂಬಾರನ ಆವಿಗೆಯಲ್ಲಿ ಒಡೆದ ಮಡಿಕೆಯ ತುಂಡಿಗೂ ಕೂಡ ಹಂಚು ಎನ್ನುವರು.

ಪ್ರಣತೆ[35] : ಹಣತೆ

ಕುಡಿಕೆ[36] : ಮಣ್ಣಿನಿಂದ ಮಾಡಿದ ಚಿಕ್ಕ ಪಾತ್ರೆ

ಬಾನಿ : ಮಣ್ಣಿನ ಅಗಲ ಬಾಯುಳ್ಳ ಪಾತ್ರೆ

ಐರಾಣಿ[37] : ಮದುವೆಯ ಸಮಯದಲ್ಲಿ ಕುಂಬಾರನ ಮನೆಯಿಂದ ತರುವ ಗಡಿಗೆ. ಮೇಲಿನ ಎಲ್ಲ ವಸ್ತುಗಳನ್ನು ಕುಂಬಾರ ತಯಾರಿಸುತ್ತಿದ್ದನು.

### 4.1.5. ಅಕ್ಕಸಾಲಿ

ಆಭರಣಗಳ ತಯಾರಿಕೆಯು ಪ್ರಮುಖ ಹಾಗೂ ಮಹತ್ವವುಳ್ಳ ಕುಶಲಕಲೆ, ಆಭರಣಗಳನ್ನು ಮುಖ್ಯವಾಗಿ ಚಿನ್ನ, ಬೆಳ್ಳಿ ಮತ್ತು ತಾಮ್ರಗಳಿಂದ ಮಾಡಲಾಗುತ್ತಿತ್ತು. ಚಿನ್ನದ ತಟ್ಟೆ ಮತ್ತು ಬೆಳ್ಳಿಯ ತಟ್ಟೆಗಳನ್ನು ದೇವಾಲಯಗಳಿಗೆ ಕಾಣಿಕೆಯಾಗಿ ನೀಡಿರುವುದನ್ನು ಶಾಸನಗಳು ತಿಳಿಸುತ್ತವೆ.[38] ರಾಮಾಯಣ, ಮಹಾಭಾರತ ಕಾಲದಿಂದ ಇಂದಿಗೂ ಕೆಲವು ತೊಡುಗೆ ಅಥವಾ ಆಭರಣಗಳು ಸಮಾಜದಲ್ಲಿ ಉಳಿದುಬಂದಿವೆ. ಪುರುಷರು, ಸ್ತ್ರೀಯರು, ಮಕ್ಕಳು ಧರಿಸುವ ವಿವಿಧ ಕೊರಳಹಾರಗಳು, ತೋಳಬಂಧಿಗಳು, ಕೈ ಬಳೆಗಳು, ತಲೆಯ ಆಭರಣಗಳು, ಮುಕುಟಗಳು, ಉಂಗುರಗಳು, ಮೂಗುತಿಗಳು, ಕಡಗಗಳು, ಓಲೆಗಳು ಮುಂತಾದುವು ವಚನಗಳಲ್ಲಿ ಉಲ್ಲೇಖಗೊಂಡಿವೆ. ಸ್ತ್ರೀಯರ ತೊಡಿಗೆಗಳ ಉಲ್ಲೇಖಗಳೇ ವಚನಗಳಲ್ಲಿ ಹೆಚ್ಚಾಗಿ ಉಕ್ತವಾಗಿವೆ. ಸಾಮಾನ್ಯವಾಗಿ ಕಿವಿ, ಮೂಗು, ತಲೆ, ಕೊರಳು ಮುಂತಾದ ಭಾಗಗಳಲ್ಲಿ ಚಿನ್ನದ ಆಭರಣಗಳನ್ನು, ಸೊಂಟ, ಕಾಲುಗಳಿಗೆ ಬೆಳ್ಳಿಯ ಆಭರಣಗಳನ್ನು ಧರಿಸಿರುತ್ತಿದ್ದಂತಿದೆ.

ಒಡವೆ[39] (ಬಂಗಾರದ ಆಭರಣ)ಯ ಉಲ್ಲೇಖ ವಚನಗಳಲ್ಲಿ ಉಕ್ತವಾಗಿದೆ. ನವರತ್ನ[40]ಗಳನ್ನು ಚನ್ನಬಸವಣ್ಣನ ವಚನವೊಂದು ಉಲ್ಲೇಖಿಸಿದೆ. ವಜ್ರ[41], ಹೊನ್ನು[42], ಮುತ್ತು[43], ರತ್ನ [44], ಪಚ್ಚೆ ಕನಕ, ವಜ್ರ, ಪವಳ, ಮಾಣಿಕ್ಯ ಮೊದಲಾದವುಗಳಿಂದ ಆಭರಣಗಳನ್ನು ತಯಾರಿಸುತ್ತಿದ್ದುದುಂಟು.[45] ಪಚ್ಚೆ, ಪವಳವನ್ನು ಆಭರಣದ ಅಲಂಕಾರಕ್ಕೆ ಉಪಯೋಗಿಸುತ್ತಿದ್ದರೆಂದು ತೋರುತ್ತದೆ.[46] ಮುತ್ತು ನೀರಿನಲ್ಲಿ ದೊರಕುತ್ತದೆಂಬ ನಂಬಿಕೆ ಇಂದಿನಂತೆ ಅಂದೂ ಇತ್ತು.[47] ರತ್ನದ ಹೊಳಪು ಕಡಿಮೆಯಾಗದಿರಲೆಂದು ಸ್ಫಟಿಕದ ಘಟದೊಳಗೆ ಅಡಗಿಸಿ ಇಡುತ್ತಿದ್ದರೆಂದು ತೋರುತ್ತದೆ.[48] ನವರತ್ನ ಹಾರ[49]ದ ಉಲ್ಲೇಖವೊಂದು ಬಸವಣ್ಣನವರಲ್ಲಿದೆ. ಚಿಂತಾಮಣಿ [50]ಯ ಹೆಸರೂ ವಚನಗಳಲ್ಲಿ ಉಕ್ತವಾಗಿದೆ.[51] ದರ್ಪಣ[52]ವನ್ನು ಆಭರಣಗಳಿಂದ ಅಲಂಕರಿಸಿಕೊಂಡ ಮೇಲೆ ನೋಡಿಕೊಳ್ಳಲು ಉಪಯೋಗಿಸುತ್ತಿದ್ದರೆಂದು ತೋರುತ್ತದೆ. ರತ್ನ, ಮಾಣಿಕ್ಯಗಳಿಂದ ಗುಡಿಯ ಕಳಸವನ್ನು ಅಲಂಕರಿಸುತ್ತಿದ್ದರೆಂದು ತೋರುತ್ತದೆ.[53]

**ಕೈಯ ಆಭರಣಗಳು**

ಬಂಗಾರದ ಒಡವೆಗಳನ್ನು, ಮುಂಗೈ, ಬೆರಳು ಹಾಗೂ ರಟ್ಟೆಗಳಲ್ಲಿ ಧರಿಸುವುದರಿಂದ ಇವುಗಳನ್ನು ಕೈಯ ಆಭರಣಗಳೆನ್ನಬಹುದು. ಕಂಕಣ[54] ಅಥವಾ ಬಳೆಗಳ[55] ಉಲ್ಲೇಖ ವಚನಗಳಲ್ಲಿದೆ. ಕಣಗಿಲೆ ಉಂಗುರ[56]ದ ಉಲ್ಲೇಖವೊಂದು ವಚನದಲ್ಲಿ ಉಕ್ತವಾಗಿದೆ. ಕಣಗಿಲೆ ಉಂಗುರವೆಂದರೆ ಉಂಗುರದ ಮಾಟ ಅಥವಾ ಆಕಾರ

ಕಣಗಿಲೆಯ ಎಲೆಯನ್ನು ಹೋಲುವಂತಿರುತ್ತದೆ. 'ನಂದಿ ಉಂಗುರ'[57]ದ ಉಲ್ಲೇಖವೂ ಇದೆ. ಇದು ನಂದಿ ವಿಗ್ರಹವುಳ್ಳ ಉಂಗುರ, ಬೆರಳಿಗೆ ಹಾಕಿಕೊಳ್ಳುವ ಉಂಗುರದ ಆಕಾರ ನಾನಾ ನಮೂನೆಯಲ್ಲಿ ಇದ್ದುವೆಂದು ಮೇಲಿನ ಉಲ್ಲೇಖಗಳಿಂದ ತೋರುತ್ತದೆ.

**ಕಾಲಿನ ಆಭರಣಗಳು**

ಕಾಲುಂಗುರ, ಕುಳಿ, ಪೈಜಣ, ಗೆಜ್ಜೆ ಮೊದಲಾದವು ಕಾಲಿಗೆ ಹಾಕಿಕೊಳ್ಳುವ ಆಭರಣಗಳು. ಉಲಿಯುವ ಗೆಜ್ಜೆ[58], ಅಂದುಗೆ [59], (ಕಾಲಿನ ಕಡಗ) ಕಡೆಯಾಣಿ[60] ಮೊದಲಾದ ಕಾಲಿಗೆ ಧರಿಸುವ ಆಭರಣಗಳು ವಚನಗಳಲ್ಲಿ ಉಕ್ತವಾಗಿವೆ.

**ಮೂಗಿನ ಆಭರಣಗಳು**

ನತ್ತು, ಮೂಗುತಿ ಮುಂತಾದ ಮುತ್ತಿನಲ್ಲಿ ಮಾಡಿದ ಆಭರಣಗಳನ್ನು ಹೆಣ್ಣು ಮಕ್ಕಳು ಮೂಗಿನಲ್ಲಿ ಧರಿಸುತ್ತಾರೆ. ಮೂಗುತಿ[61]ಯ ಉಲ್ಲೇಖವೊಂದು ವಚನದಲ್ಲಿ ಉಲ್ಲೇಖಗೊಂಡಿದೆ.

**ಕಿವಿಯ ಆಭರಣಗಳು**

ಓಲೆ, ಉಡುಗೆ, ವಾಲಿ, ಬುಗುಡಿ ಮೊದಲಾದ ಆಭರಣಗಳನ್ನು ಸ್ತ್ರೀಯರು ಕಿವಿಯಲ್ಲಿ ಧರಿಸುವುದುಂಟು. ಓಲೆ[62]ಯ ಉಲ್ಲೇಖವೊಂದು ವಚನದಲ್ಲಿ ಬಂದಿದೆ. ನಾಗಕುಂಡಲಿ[63] ಮತ್ತು ಕರ್ಣಕುಂಡಲ[64]ಗಳೆಂಬ ಆಭರಣಗಳು ವಚನಗಳಲ್ಲಿ ಉಲ್ಲೇಖಗೊಂಡಿವೆ. ಹಿಂದಿನ ಕಾಲದಲ್ಲಿ ರಾಜರುಗಳು ಇಂಥ ಕಿವಿಯ ಆಭರಣಗಳನ್ನು ಧರಿಸುತ್ತಿದ್ದರು. ಈ ಕರ್ಣಕುಂಡಲಗಳು ನಾನಾ ಬಗೆಯವುಗಳಿರುತ್ತಿದ್ದುವೆಂದು ತೋರುತ್ತದೆ.

**ಕೊರಳ ಆಭರಣಗಳು**

ಚಿನ್ನ, ಹವಳ, ಮುತ್ತು ಮುಂತಾದವುಗಳಿಂದ ಕ್ರಮವಾಗಿ ಚಿನ್ನದ ಸರ, ಹವಳದ ಸರ, ಮುತ್ತಿನ ಸರ ಮುಂತಾಗಿ ನಾನಾ ಬಗೆಯಲ್ಲಿ ತಯಾರಿಸಿ ಹೆಂಗಸರು ತಮ್ಮ ಕೊರಳನ್ನು ಅಲಂಕರಿಸಿಕೊಳ್ಳುತ್ತಿದ್ದರು. 'ಮಣಿಮಾಲೆ'[65]ಯ ಉಲ್ಲೇಖವೊಂದು ಚನ್ನಬಸವಣ್ಣನಲ್ಲಿದೆ. ಮಣಿ ಮಾಲೆ ಇದು ಹೆಂಗಸರು ಕೊರಳಲ್ಲಿ ಧರಿಸುವ ಮುತ್ತಿನ ಸರ, ಇದರ ಉಲ್ಲೇಖವೊಂದು ಭೋಗಣ್ಣಗಳ ವಚನವೊಂದರಲ್ಲಿದೆ. [66]

**ಸೊಂಟದ ಆಭರಣಗಳು**

ಹೆಣ್ಣು ಮಕ್ಕಳು ಸೊಂಟಕ್ಕೆ ಹಾಕಿಕೊಳ್ಳುವ ಪಟ್ಟಿ ಅಥವಾ 'ಡಾಬು'ವನ್ನು ವಚನದಲ್ಲಿ ಒಡ್ಯಾಣ[67] ಎಂದೇ ಕರೆಯಲಾಗಿದೆ. ಡಾಬುವಿನಲ್ಲಿ ಗೆಜ್ಜೆ ಡಾಬು, ಪಟ್ಟಿ ಡಾಬು ಎಂದು ಎರಡು ಪ್ರಭೇದಗಳು, ಗೆಜ್ಜೆ ಡಾಬಿಗೆ ಗೆಜ್ಜೆಗಳಿರುತ್ತವೆ. ಪಟ್ಟಿ ಡಾಬು ಸಾದಾ ಇರುತ್ತದೆ.

ಈ ರೀತಿಯ ಎಲ್ಲಾ ಆಭರಣಗಳನ್ನು ಅಕ್ಕಸಾಲಿಗಳು ತಯಾರಿಸುತ್ತಿದ್ದರು.

ವಿಶ್ವಕರ್ಮರೆಂದು ಕರೆದುಕೊಳ್ಳುವ ಈ ಅಕ್ಕಸಾಲಿಗಳು ಕೇವಲ ಆಭರಣ ತಯಾರಿಕಾ ಕೆಲಸವಲ್ಲದೇ ರಾಜನ ಕಮ್ಮಟಗಳಲ್ಲೂ ಕೆಲಸ ನಿರ್ವಹಿಸುತ್ತಿದ್ದರು.[68] ಈ ಕಮ್ಮಟಗಳಲ್ಲಿ ನಾಣ್ಯಗಳನ್ನು ಟಂಕಿಸುತ್ತಿದ್ದರು. ಇವುಗಳನ್ನು 'ಅಚ್ಚಿನ ಟಂಕಸಾಲೆ'[69]ಗಳೆಂದೂ ಕರೆಯುತ್ತಿದ್ದರು. ಗದ್ಯಾಣ, ಪಣ, ಅಡ್ಡ, ಹಾಗ, ಬೇಳೆ, ವೀಸ - ಇವೆಲ್ಲವೂ ಪ್ರತ್ಯೇಕ ನಾಣ್ಯಗಳೆಂದು ಶಾಸನಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ನಾಣ್ಯಗಳಲ್ಲಿ ಪ್ರಸಿದ್ಧವಾದುದು ಗದ್ಯಾಣ[70] ಅಥವಾ ಪೊನ್ ಎಂಬ ಹೆಸರಿನ ನಾಣ್ಯ.

### 4.1.6. ಕಂಚುಗಾರರು

ತಾಮ್ರ, ಹಿತ್ತಾಳೆ, ಸೀಸ ಈ ಮೂರರ ಮಿಶ್ರಣದಿಂದ ಕಂಚನ್ನು ತಯಾರಿಸುವವರು ಕಂಚುಗಾರರು.

**ಉತ್ಪಾದಿತ ವಸ್ತುಗಳು**

ಕಂಚುಗಾರರು ತಳಿಗೆ (ಊಟದ ತಟ್ಟೆ), ಕನ್ನಡಿ, ಭರಣಿ, ಕಂಚಿನ ಸೌಟು, ತೆರೆದ ಬಟ್ಟಲು (?), ಕೈತಟ್ಟೆ, ಗಿಂಡಿ, ಒಳಲೆ ಮೊದಲಾದುವವನ್ನು ತಯಾರಿಸುತ್ತಿದ್ದರೆಂದು ನಯಸೇನನು ಹೇಳುತ್ತಾನೆ.[71] ಊಟ ಮಾಡುವ ಕಂಚಿನ ತಟ್ಟೆಯ ಉಲ್ಲೇಖ ವಚನಗಳಲ್ಲಿದೆ.[72] ಊಟ ಮಾಡುವ ತಟ್ಟೆಯನ್ನು 'ಕಂಚು' ಎಂದೇ ಕರೆಯುತ್ತಿದ್ದರು.[73] ಕನ್ನಡಿಯನ್ನೂ ಕಂಚಿನಿಂದಲೇ ತಯಾರಿಸುತ್ತಿದ್ದರು. ಕಂಚಿನ ತಟ್ಟೆಗಳನ್ನು ಚೆನ್ನಾಗಿ ಬೆಳಗಿ ಅದನ್ನೇ ಕನ್ನಡಿಯಂತೆ ಬಳಸುತ್ತಿದ್ದರು.[74] ಕೈದೀಪಗಳು, ಮುಕ್ಕಾಲು ಮಣೆ, ಘಂಟೆಗಳು, ನೀರ್ದಾನಿಗಳು, ಕಹಳೆ ಮೊದಲಾದವುಗಳನ್ನು ಕೂಡ ಇವರು ತಯಾರಿಸುತ್ತಿದ್ದರು. ಇಷ್ಟಲ್ಲದೇ ತೀರ್ಥಂಕರ, ವಿಷ್ಣು ಮೊದಲಾದ ದೇವರ ಮೂರ್ತಿಗಳನ್ನು ತಯಾರಿಸುತ್ತಿದ್ದ ವಿಷಯವನ್ನು ಜಿ.ಆರ್. ಕುಪ್ಪಸ್ವಾಮಿಯವರು[75] ನಟರಾಜ, ಶಿವ, ಪಾರ್ವತಿ ಮೊದಲಾದ ದೇವರ ಲೋಹದ

ವಿಗ್ರಹಗಳು ಕೂಡಲೂರು (ಬೆಂಗಳೂರು ಜಿಲ್ಲೆ) ನಲ್ಲಿ ಸಿಕ್ಕಿರುವ ವಿಷಯವನ್ನು ಗುರುರಾಜಾಚಾರ್[76] ತಿಳಿಸುತ್ತಾರೆ. ಇವು 11ನೇ ಶತಮಾನಕ್ಕೆ ಸೇರಿದವುಗಳಾಗಿವೆ. ಕ್ರಿ.ಶ. 1189ರ ಗದಗ ತಾಲ್ಲೂಕಿನ ಶಾಸನವೊಂದರ[77] 'ಕಂಚಗಾಱಱು ದೇವರುಪಕರಣಂಗಳೆಲ್ಲಮಂ ಕೂಲಿಯಂ ಕೊಳ್ಳದೆ ಮಾಡಿ ಕುಡುವಂತಾಗಿ ಬಿಟ್ಟರು' ಎಂಬ ಉಲ್ಲೇಖದಿಂದ ಕಂಚಗಾರರು ದೇವರುಪಕರಣಗಳೆಲ್ಲವನ್ನು ತಯಾರಿಸುತ್ತಿದ್ದರು ಎಂದು ತಿಳಿಯಬಹುದು.

ಈ ಹಿನ್ನೆಲೆಯಲ್ಲಿ ದಿನನಿತ್ಯದ ವಸ್ತುಗಳ ಜೊತೆಗೆ ಇಂಥಹ ಲೋಹದ ವಿಗ್ರಹಗಳನ್ನು, ದೇವರುಪಕರಣಗಳನ್ನು ಕೂಡ ಇವರು ತಯಾರಿಸುತ್ತಿದ್ದುದು ಗೊತ್ತಾಗುತ್ತದೆ.

### 4.1.7. ಚಮ್ಮಾರರು

ಪ್ರಾಣಿಗಳ ಚರ್ಮವನ್ನು ಸುಲಿದು ಹದಗೊಳಿಸಿ ವಸ್ತುಗಳನ್ನು ತಯಾರಿಸುತ್ತಿದ್ದರು.

**ಉತ್ಪಾದಿತ ವಸ್ತುಗಳು**

ಹದಗೊಂಡ ತೊಗಲಿನಿಂದ ಹರಿಗೋಲು, ಹೂಡಲಿಕ್ಕೆ ಮಿಣಿ, ಹೊಡೆಯಲಿಕ್ಕೆ ಬಾರುಕೋಲು, ಮೊದಲಾದ ರೈತರ ಉಪಕರಣಗಳನ್ನು ತಯಾರಿಸುತ್ತಿದ್ದರು.[78] ಬಾರುಕೋಲನ್ನು ಅಕ್ಕನ ವಚನದಲ್ಲಿ 'ಬೆಂಗೋಲು'[79] ಎನ್ನಲಾಗಿದೆ (ಬೆಂಗೋಲು = ಚಾಟಿ, ಚಬಕ ಎನ್ನುತ್ತಾರೆ ಹಳ್ಳಿಗರು). ಸುಲಿದು ಹದಗೊಳಿಸಿದ ಎಮ್ಮೆಯ ಚರ್ಮದಿಂದ ಸಮಗಾರ, ಪಾದರಕ್ಷೆ ಮುಂತಾದ ವಸ್ತುಗಳನ್ನು ತಯಾರಿಸುತ್ತಿದ್ದುದರ ಉಲ್ಲೇಖವೊಂದು ಮಾದಾರ ಚನ್ನಯ್ಯನ ವಚನದಲ್ಲಿದೆ.[80] ಇಷ್ಟಲ್ಲದೇ ಢಕ್ಕೆ, ಡಮರು, ಡೊಳ್ಳು, ನಗಾರಿ, ಹಲಗೆ ಇತ್ಯಾದಿ ಚರ್ಮದ ವಾದ್ಯಗಳನ್ನು ಇವರು ತಯಾರಿಸುತ್ತಿದ್ದರು.

### 4.1.8. ಮೇದಾರರು

ಬಿದಿರಿನಿಂದ ವಸ್ತುಗಳನ್ನು ತಯಾರಿಸುವವರು.

**ಉತ್ಪಾದಿತ ವಸ್ತುಗಳು**

ಬಿದಿರಿನಿಂದ ಅಟ್ಟಕ್ಕೇಣಿ, ಕಾಲು ಮುರಿದವರಿಗೆ ಊರುಗೋಲು, ಅಂದಣ (ಪಲ್ಲಕ್ಕಿ), ಸತ್ತಿಗೆ (ಛತ್ರಿ), ಗುಡಿಗುಡಾರ (ತಡಿಗೆ = ಗುಡಿಸಲಿಗೆ ಮುಚ್ಚುವ ಚಾಪೆ) ಮುಂತಾದವುಗಳನ್ನು ತಯಾರಿಸುತ್ತಿದ್ದರೆಂದು ಬಸವಣ್ಣನವರ ವಚನವೊಂದು[81] ಉಲ್ಲೇಖಿಸಿದೆ. ಇವರು ತೊಟ್ಟಿಲನ್ನು ತಯಾರಿಸುತ್ತಿದ್ದುದನ್ನು ಕೇತಯ್ಯನ ವಚನ[82] ಉಲ್ಲೇಖಿಸುತ್ತದೆ.

### 4.1.9. ಗಾಣಿಗರು

ಎಣ್ಣೆಕಾಳುಗಳನ್ನು ಗಾಣಕ್ಕೆ ಹಾಕಿ ಎಣ್ಣೆ ಉತ್ಪಾದಿಸಲಾಗುತ್ತಿತ್ತು.

**ಉತ್ಪಾದಿಸುತ್ತಿದ್ದ ಎಣ್ಣೆಗಳು**

ಕ್ರಿ.ಶ. 1280ರ ನರಸೀಪುರ ಶಾಸನವೊಂದು[83] 'ತೆಂಗಿನೆಂಣೆ ..... ಬಾಳೆಯ ಹಣ್ಣು ೧000 ಕಬ್ಬು ೩೦೦' ಎಂದು ಉಲ್ಲೇಖಿಸುವುದರಿಂದ ಅಂದು ತೆಂಗಿನ ಕಾಯಿಯಿಂದ ಎಣ್ಣೆ ತಯಾರುಮಾಡುತ್ತಿದ್ದರೆಂದು ತಿಳಿಯಬಹುದು. ಹರಳೆ ಅಥವಾ ಔಡಲ ಬೀಜದಿಂದ ಹರಳೆಂಣ್ಣೆ ತಯಾರುಮಾಡುತ್ತಿದ್ದ ಬಗ್ಗೆ ಬೇಲೂರಿನ ಶಾಸನ [84] ತಿಳಿಸುತ್ತದೆ. ಅಲ್ಲದೇ ಮೈಸೂರಿನ ಶಾಸನವೊಂದು[85] ಕೂಡ 'ಹರಳಿಯ ಯಣ್ಣೆ'ಯನ್ನು ಉಲ್ಲೇಖಿಸುತ್ತದೆ. ಔಡಲು ಅಥವಾ ಹೇರಂಡದಿಂದ ಮಾತ್ರ ಎಣ್ಣೆಯನ್ನು ಸ್ವಲ್ಪ ಭಿನ್ನ ರೀತಿಯಲ್ಲಿ ತಯಾರಿಸುತ್ತಿದ್ದರು.

ಹರಳಿನ ಬೀಜಗಳನ್ನು ಪುಡಿ ಮಾಡಿ ಅದನ್ನು ನೀರಿನಲ್ಲಿ ಕಲೆಸಿ ಬೇಯಿಸುತ್ತಿದ್ದರು. ನೀರೆಲ್ಲ ಆವಿಯಾಗಿ ಕೊನೆಗೆ ಹರಳೆಣ್ಣೆಯು ಮಾತ್ರ ಉಳಿಯುತ್ತಿತ್ತು. ಇದು ಮೋಳಿಗೆ ಮಾರಯ್ಯನ ವಚನವೊಂದರಲ್ಲಿ[86] ಉಲ್ಲೇಖಗೊಂಡ ಬಗೆ. ಕೆಲವು ಶಾಸನಗಳು[87] ಹಾಗೂ ವಚನಗಳು[88] ಎಳ್ಳನ್ನು ಉಲ್ಲೇಖಿಸುವುದರಿಂದ ಎಳ್ಳೆಣ್ಣೆಯನ್ನು ಕೂಡ ಉತ್ಪಾದಿಸುತ್ತಿದ್ದುದು ಗೊತ್ತಾಗುತ್ತದೆ. ಪಂಪ ತನ್ನ ಆದಿಪುರಾಣದಲ್ಲಿ[89] ಒಂದೆಡೆ 'ತಿಳಾತಸೀಕು ಸುಂಭಾದಿ ದೀಪ್ರೌಷಧಿಗಳುಂ' ಅಂದರೆ ಎಳ್ಳು, ಅಗಸೆ, ಕುಸುಬೆ ಮುಂತಾದ ಎಣ್ಣೆ ಬೀಜಗಳೂ ಎಂದು ಉಲ್ಲೇಖಿಸುವುದರಿಂದ ಎಳ್ಳು, ಅಗಸೆ, ಕುಸುಬೆ ಬೀಜಗಳಿಂದಲೂ ಎಣ್ಣೆ ಉತ್ಪಾದಿಸುತ್ತಿದ್ದಿರಬಹುದು.

## 4.2. ವ್ಯಾಪಾರಿ ವಸ್ತುಗಳು

ಮಧ್ಯಕಾಲೀನ ಕರ್ನಾಟಕದ ಶಾಸನಗಳಲ್ಲಿ ಉಲ್ಲೇಖಿತವಾದ ಈ ಎಲ್ಲ ಕುಶಲಕಲೆಗಳ ಸರಕುಗಳು ಹತ್ತಿ, ಹಂಜಿ, ನೂಲು, ಸೀರೆ, ಪಟ್ಟು, ಪಟ್ಟಸೂತ್ರ, ಬಟ್ಟೆ, ಹುಲಿದೊಗಲು, ಎಳ್ಳು, ಎಣ್ಣೆ, ಸಾಸವಿ, ತೆಂಗಿನಕಾಯಿ, ಬಳೆ, ಮಣಿ, ಪಚ್ಚೆ, ತವರು, ಅರಗು, ಹೂವು, ಶ್ರೀಗಂಧ, ಮುತ್ತು, ಮಣಿ, ಮಾಣಿಕ್ಯ, ಬಂಗಾರ, ಸುಗಂಧ ದ್ರವ್ಯ, ಮಡಕೆ, ಮಿಣಿ, ಪಾದರಕ್ಷೆ, ಮೊರ ಇವೇ ಮೊದಲಾದ ವಸ್ತುಗಳನ್ನು ಸಂತೆಗಳಿಗೆ ಒಯ್ದು ಮಾರುತ್ತಿದ್ದುದು ಸ್ಪಷ್ಟವಾಗುತ್ತದೆ. ಕೆಲವು ಶಾಸನಗಳಂತೂ ಈ ವರ್ತಕರನ್ನು ಮಾತ್ರ ಉಲ್ಲೇಖಿಸುತ್ತವೆ.[90] ಈ ವಸ್ತುಗಳ ಜೊತೆಗೆ ಹತ್ತಿಯ ನೂಲು, ಬಣ್ಣದ

ನೂಲು, ವಸ್ತ್ರಗಳು, ಮರದ ಹಲಗೆಗಳು, ಬಿದಿರು, ಲೋಹವಿಗ್ರಹಗಳು, ಬರಹ ಸಾಮಗ್ರಿಗಳಾದ ಬಳಪ ಮತ್ತು ಓಲೆಗರಿಗಳು ಇತ್ಯಾದಿಗಳ ವ್ಯಾಪಾರಗಳು ನಡೆಯುತ್ತಿದ್ದಿತೆಂದು ಚಿದಾನಂದಮೂರ್ತಿಯವರು ತಿಳಿಸುತ್ತಾರೆ. [91]

## 4.3. ಮಾರುವ ವ್ಯವಸ್ಥೆ

ಮಧ್ಯಕಾಲೀನ ಕರ್ನಾಟಕದ ಮುಖ್ಯ ವ್ಯಾಪಾರದ ಕೇಂದ್ರವಾಗಿ ಸಂತೆಯನ್ನು ಗುರುತಿಸಬಹುದು. ಇಲ್ಲಿ ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಪ್ರಗತಿ ಸಾಧಿಸುವಲ್ಲಿ ಈ ಸಂತೆ ಅತ್ಯಂತ ಪ್ರಮುಖವಾದುದು. ಇದು ಸಂಸ್ಥಾ >ಸಂಸ್ಥೆ > ಸಂತೆ ಹೀಗೆ ಸಂಸ್ಕೃತದಿಂದ ರೂಪುಗೊಂಡಿದೆ. ಈ ಸಂತೆಯನ್ನು ಗೌಡ, ಮಹಾಪ್ರಭು ಹಾಗೂ ಐದು ಜನ ಗೌಡರು ಮೋಗೂರ ಸಂತೆಯನ್ನು[92], ಕನ್ನಗೌಡ, ರಾಯಪ್ಪಗೌಡ, ಐದು ಜನ ಸೆಟ್ಟಿಯರು ಹಾಗೂ ಮಿಂಡಗುದ್ದಲಿ ಬೈವಿಸೆಟ್ಟಿಯರು ರಾಮೇಶ್ವರ ಗ್ರಾಮದ ಸಂತೆಯನ್ನು[93] ಮಾಡಿಸಿದುದರ ಉಲ್ಲೇಖಗಳನ್ನು ನಾವು ಶಾಸನಗಳಿಂದ ತಿಳಿಯಬಹುದು.

ಕ್ರಿ.ಶ. 1190ರ ಹಿರೇ ಬೇವಿನೂರ ಶಾಸನವು[94] 'ನೆರಪಿಯೆವರೆಲ್ಲರಂ ಕುಳ್ಳಿರಿಸಿಯೆ ಕೇಳ್ದ [ಧ*] ರ್ಮ್ಮ ಸಂಥೆಯೆನಿಸಿಯೆ ಮಾಯ್ದೇವರಸಂ ಮಾಡಿದ ಧ(ಂ)ರ್ಮ್ಮಂ ಧರೆಯೊಳಗಿದು ಧರ್ಮ್ಮಸಂತೆಯಾಚಂದ್ರಾರ್ಕ್ಕಂ॥' ಎಂದು ಉಲ್ಲೇಖಿಸುತ್ತದೆ. ಸಂತೆ ಕಟ್ಟಿಸುವುದರಿಂದ ಪುಣ್ಯ ಪ್ರಾಪ್ತಿಯಾಗುವುದೆಂಬ ನಂಬಿಕೆಯೂ ಜನರಲ್ಲಿ ಇದ್ದಿತು. ಶುಭ ಮಹೂರ್ತದಲ್ಲಿ ನನ್ನಿಕಂಬ ಪ್ರತಿಷ್ಠಾಪಿಸಿ, ಹೊಸಸಂತೆ ಪ್ರಾರಂಭಿಸುತ್ತಿದ್ದರು.[95] ನನ್ನಿಕಂಬ ಕಲ್ಲಿನದಿದ್ದು ಬಹುಶಃ ದೇವಾಲಯದ ಮುಂದೆ ನೆಟ್ಟುದಾಗಿರಬೇಕು. ಹಸುಬೆಗಳನ್ನು ನನ್ನಿಕಂಬದ ಮುಂದೆ ಇಳುಹಿ ಒಯ್ಯುತ್ತಿದ್ದರೆಂದು ಕುಂದವಾಡ ಶಾಸನ ಹೇಳುತ್ತದೆ.[96] ನನ್ನಿಕಂಬ ಮತ್ತು ದೇವಾಲಯಗಳು ವ್ಯಾಪಾರಿಗಳಲ್ಲಿ ದೈವೀ ಭಾವನೆಯನ್ನು ತುಂಬಿ, ವ್ಯವಹಾರವನ್ನು ಧರ್ಮಬುದ್ಧಿಯಿಂದ ನಡೆಸಿಕೊಂಡು ಹೋಗಲು ಸಹಾಯಕವಾಗುತ್ತಿದ್ದಂತೆ ತೋರುವುದು. ವ್ಯಾಪಾರದಲ್ಲಿ ಅವ್ಯವಹಾರ, ಅನ್ಯಾಯ, ಅಚಾತುರ್ಯಗಳು ಸಂಭವಿಸದಂತೆ ನೋಡಿಕೊಳ್ಳಲು ನನ್ನಿಕಂಬವನ್ನು ಸತ್ಯ, ಪ್ರಾಮಾಣಿಕತೆಗಳ ಸಂಕೇತವಾಗಿ ನಿಲ್ಲಿಸುತ್ತಿದ್ದರು. ನೇಕಾರರಿಗೆ ಸಂಬಂಧಿಸಿದಂತೆ ಸಂತೆಯಲ್ಲಿ ದೇಡಸೀರೆ, ನೂಲು, ಪಟ್ಟಸೂತ್ರಗಳ ಮೇಲೆ ಆಕರಿಸುತ್ತಿದ್ದ 'ಸಂತೆಯ ಆಯ' ಹಾಗೂ ಕೋಲಾರ ಶಾಸನದ 'ನೆಇಗಾರ ಸೆಟಿ' ಪದಗಳು ಸಾಲಿಗರು ಮತ್ತು ಪಟ್ಟಸಾಲಿಗರು ಮಗ್ಗದ ಮೂಲಕ ನೆಯ್ದು ತಯಾರಿಸಿದ ಬಟ್ಟೆಗಳನ್ನು ಸಂತೆಯಲ್ಲಿ ಮಾರುತ್ತಿದ್ದರೆಂದು

ಹೇಳುತ್ತವೆ.[97] ನೇಕಾರರು ಹತ್ತಿಯ ವಸ್ತ್ರಗಳಲ್ಲದೆ ರೇಷ್ಮೆಯ ವಸ್ತ್ರಗಳನ್ನು ನೇಯ್ದು ಮಾರಾಟ ಮಾಡುತ್ತಿದ್ದರು. ಇಂಥ ರೇಷ್ಮೆ ವ್ಯಾಪಾರಿಯನ್ನು 'ಪಟ್ಟಾಯಿಲ'[98] ಎಂದು, ಇಂಡಿ ಶಾಸನವೊಂದು ಉಲ್ಲೇಖಿಸುತ್ತದೆ.

**ಅಂಗಡಿ**

ಸಂತೆಯಲ್ಲಿ ಬಯಲು ಅಂಗಡಿ, ಕಟ್ಟಿದ ಅಂಗಡಿಗಳಿದ್ದು ಸಂತೆಯ ದಿನ ಮಾತ್ರ ತೆರೆದಿರುತ್ತಿದ್ದರೆ, ಪೇಟೆ, ಪಟ್ಟಣಗಳಲ್ಲಿಯ ಕಟ್ಟಿದ ಅಂಗಡಿಗಳು ಪ್ರತಿನಿತ್ಯ ಕಾರ್ಯ ನಿರ್ವಹಿಸುತ್ತಿದ್ದವು. ಅಂಗಡಿಗಳಲ್ಲಿ ಸಾಮಾನ್ಯ (ಕಟ್ಟಡವಿರುವ) ಅಂಗಡಿ, ಬಯಲು ಅಂಗಡಿ, ಧರ್ಮದ ಅಂಗಡಿ, ದೇವರ ಅಂಗಡಿ, ಮಾನ್ಯದ ಅಂಗಡಿ, ಇತ್ಯಾದಿ ಪ್ರಭೇದಗಳು ತೋರಿಬರುತ್ತವೆ. ಇವುಗಳಲ್ಲಿ ಧರ್ಮದ ಅಂಗಡಿ, ದೇವರ ಅಂಗಡಿ, ಮಾನ್ಯದ ಅಂಗಡಿಗಳಿಗೆ ಕರ ವಿನಾಯಿತಿಯಿದ್ದಿತು. ಅಂಗಡಿಗಳ ಮೇಲೆ ಅಂಗಡಿ ಅಧಿಕಾರಿಯಿದ್ದನು. ಈತನು ಅಂಗಡಿಯಿಂದ ದೇವಾಲಯಗಳಿಗೆ ಸಲ್ಲಬೇಕಾದ ವಸ್ತುಗಳನ್ನು ಪಡೆಯುವ ಮೇಲ್ವಿಚಾರಣೆ ಮಾಡುತ್ತಿದ್ದ.[99] ಕ್ರಿ.ಶ. 1250ರ ಕಲ್ಕೇರಿ ಶಾಸನವೊಂದರಲ್ಲಿನ[100] 'ಸರ್ವ್ವಮಾನ್ಯವಾಗಿ ಕೊಟ್ಟ ಪಟ್ಟೆಯ ಅಂಗಡಿ ೧೦ ಬೆನಕನ ., ಯದಿಂ ಬಡಗಲು' ಎಂಬ ಉಲ್ಲೇಖದಿಂದ ರೇಷ್ಮೆ ಬಟ್ಟೆಯ ಅಂಗಡಿಯನ್ನು ಪಟ್ಟೆ ಅಂಗಡಿ ಎಂದಿದ್ದು ಈಗಿನಂತೆಯೇ ಆಗಲೂ ಕೂಡ ಪ್ರತ್ಯೇಕವಾಗಿ ರೇಷ್ಮೆ ವಸ್ತ್ರಗಳ ವ್ಯಾಪಾರ ನಡೆಯುತ್ತಿತ್ತೆಂಬುದು ಗೊತ್ತಾಗುತ್ತದೆ. ಶಾಸನಗಳಲ್ಲಿ ಕಂಚಗಾಱರ ಪಸರ, ಕುಂಬಾಱರ ಹಸರ, ಗಂಧವಣದಂಗಡಿ, ದೇವರಂಗಡಿ, ದೂಸಿಗವಸರ ಎಂಬ ಅಂಗಡಿಗಳಿರುವುದನ್ನು ಶ್ರೀನಿವಾಸ ರಿತ್ತಿಯವರು[101] ಗುರುತಿಸುತ್ತಾರೆ.

ಅಂಗಡಿಗಳಿಗೆ ವ್ಯಕ್ತಿಯ ಹೆಸರು ಇಡುತ್ತಿದ್ದರು. ಕ್ರಿ.ಶ. 1196ರ ಅಮೃತಾಪುರ ಶಾಸನವೊಂದು[102] ಚಂದ್ರಮೌಳಿಯಣ್ಣನಂಗಡಿ, ಬೊಮ್ಮಲದೇವಿಯರಂಗಡಿ, ಕೇತಲದೇವಿಯರಂಗಡಿ, ಬೊಪ್ಪದೇವನ ಬಸದಿಯಂಗಡಿ, ಗುಮ್ಮೇಶ್ವರದಂಗಡಿಗಳು ಎಂದು ಉಲ್ಲೇಖಿಸುತ್ತದೆ. ಇವು ಅಂಗಡಿ ಕಟ್ಟಿಸಿದ, ಅವುಗಳ ಒಡೆತನ ಪಡೆದ ಇಲ್ಲವೆ ಅವುಗಳನ್ನು ದಾನವಾಗಿ ನೀಡಿದ ವ್ಯಕ್ತಿಗಳ ಹೆಸರುಗಳಾಗಿರಬಹುದು.

ಒಬ್ಬ ವ್ಯಕ್ತಿಯ ಒಡೆತನದಲ್ಲಿ ಅನೇಕ ಅಂಗಡಿಗಳಿದ್ದವು. ಕ್ರಿ.ಶ. 1080ರ ಲಕ್ಕುಂಡಿ ಶಾಸನ[103]ದಿಂದ ನಾಕಿಸೆಟ್ಟಿಯು ಹದಿನೈದು ಅಂಗಡಿಗಳ ಒಡೆಯನಾಗಿದ್ದುದು ಗೊತ್ತಾಗುತ್ತದೆ.

## 4.4. ವಸ್ತುಗಳ ಸಾಗಾಟ

ಗ್ರಾಮ ಪಟ್ಟಣಗಳಲ್ಲಿರುವ ವ್ಯಾಪಾರಿಗಳು ಒಬ್ಬೊಬ್ಬರಾಗಿ ಅಥವಾ ಗುಂಪಾಗಿಯೂ ಬೇರೆ ಬೇರೆ ಸ್ಥಳಗಳಿಗೆ ವ್ಯಾಪಾರಕ್ಕಾಗಿ ಹೋಗುತ್ತಿದ್ದರು. ಈ ವ್ಯಾಪಾರಿಗಳು ತಮ್ಮ ಸರಕುಗಳನ್ನು ಹಸುಬೆ, ಮೂಟೆ, ಹೆಡಗಿ, ಬರಕ, ಕಲ್ಲಿ ಕೊಡ, ಚರ್ಮದ ಚೀಲ, ಬಿದಿರಿನ ಕೊಳವೆ (=ಲಳಿಗೆ), ಕರಂಡಿಗೆ, ಜಲ್ಲೆಗಳಲ್ಲಿ ತುಂಬಿದ ವಿವಿಧ ಸರಕುಗಳನ್ನು ಎತ್ತು, ಕತ್ತೆ, ಕೋಣ, ಎಮ್ಮೆ, ಕುದುರೆ, ತೊತ್ತು, ಬಂಡಿಗಳ ಮೂಲಕ ಸಾಗಿಸುತ್ತಿದ್ದರು. ಬಂಡಿಯಲ್ಲಿ ಬಿದಿರಿನ ಬಂಡಿ, ಮರದ ಬಂಡಿಗಳೆಂದು ಎರಡು ಪ್ರಕಾರಗಳಿದ್ದವು. ಇವುಗಳ ಜೊತೆಗೆ ಮೂಟೆ, ಹೆಡಿಗೆ, ಜಲ್ಲೆಗಳನ್ನು ತಲೆಯ ಮೇಲೆ ಹೊತ್ತುಕೊಂಡು, ಕಂಕುಳಲ್ಲಿ ಇಟ್ಟುಕೊಂಡೂ ಹೆಗಲ ಮೇಲೆ ಹಸುಬೆ ಹಾಕಿಕೊಂಡೂ ವ್ಯಾಪಾರಕ್ಕೆ ಹೋಗುತ್ತಿದ್ದರು.[104] ಕ್ರಿ.ಶ. 1054ರ ಬಳ್ಳಿಗಾವೆ ಶಾಸನ [105]ವೊಂದರಲ್ಲಿ ಸರಕು ತುಂಬುವ ಹಸುಬೆಯ ವರ್ಣನೆ ಹೀಗಿದೆ. 'ಪ್ರಿಥ್ವಿಯೆ ಹಸುಂಬೆಯಾಗೆ, ಅಷ್ಟಲೋಕ ಪಾಳಕರೇ ಗೊಂಟಾಗೆ ವಾಸುಗಿಯೇ ಬಳಸಾಗೆ, ಫಣಿಕುಳಂಗಳೇ ದಾರವಾಗಿ ಬೊಕ್ಕಣವೊಳ ವಸುಂಬೆಯಾಗಿ ಚಕ್ರಮೆ ಬೆಳವಾಗಿ ಕೂರಸಿಯೇ ಮರಸುರಿಗೆಯಾಗೆ ಹಸುಂಬೆಯೊಳಮೂಲ್ಯ ವಸ್ತುಗಳೇ ವಸ್ತುಗಳಾಗಿ' ಇಲ್ಲಿ ಹಸುಬೆಯನ್ನು ಬ್ರಹ್ಮಾಂಡಕ್ಕೆ ಹೋಲಿಸಲಾಗಿದೆ. ಹಸುಬೆಯ ವಿವಿಧ ಭಾಗಗಳನ್ನು ಇಲ್ಲಿ ಹೇಳಲಾಗಿದೆ. ಇದಲ್ಲದೆ ಸುಂಕದ ಬಂಕಣ್ಣಗಳ ವಚನ[106]ವೊಂದು ಹೀಗೆ ಉಲ್ಲೇಖಿಸಿದೆ.

*ಸಾಕಾರವೆಂಬ ಚೀಲದಲ್ಲಿ ಪ್ರಕೃತಿ ವಿಕಾರವೆಂಬ ಭಂಡವ ತುಂಬಿ*
*ಕ್ರಿಯಾಧರ್ಮಗಳೆಂಬ ದಾರವ ದಾರದಲ್ಲಿ ಸೇರಿಸಿ*
*ಕಟ್ಟಲರಿಯದ ಅಣ್ಣಗಳಿಗೆ ಜಗಸೆಟ್ಟಿತನವೇಕೆ?*

ಇಲ್ಲಿ ಸರಕು ತುಂಬುವ ಚೀಲ, ಅದಕ್ಕೆ ಕಟ್ಟುವ ದಾರಗಳ ಪ್ರಸ್ತಾಪವಿರುವುದನ್ನು ಗಮನಿಸಬೇಕು. ಸುಟ್ಟು ಗಟ್ಟಿಗೊಳಿಸಿದ ಮಡಕೆಗಳನ್ನು ಕತ್ತೆಯ ಮೇಲೆ ಹೇರಿಕೊಂಡು ಹಳ್ಳಿಹಳ್ಳಿಗೆ ಹೋಗಿ ಮಾರುತ್ತಿದ್ದುದನ್ನು ಅಂಬಿಗರ ಚೌಡಯ್ಯ[107] ಉಲ್ಲೇಖಿಸುತ್ತಾನೆ.

ವ್ಯಾಪಾರಿಗಳು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ನಡೆದುಕೊಂಡು ಹೋಗುವಾಗ ಮಾರ್ಗ ಮಧ್ಯದಲ್ಲಿ ಹಾದಿಗಳ್ಳರು ದಾಳಿ ಮಾಡಿ, ಸರಕು, ಪ್ರಾಣಿಗಳನ್ನು ದೋಚಿಕೊಂಡು ಹೋಗುತ್ತಿದ್ದರು. ಆಗ ವ್ಯಾಪಾರಿಗಳು ಹೋರಾಡಿ ಪ್ರಾಣವನ್ನರ್ಪಿಸಿದ್ದಾರೆ. ವಡ್ಡಾರಾಧನೆಯ ಭದ್ರ ಬಾಹು ಭಟ್ಟಾರರ ಕಥೆಯೊಂದರಲ್ಲಿ[108] 'ಪಲಂಬರ್ ಶಾಕಟಿಕ ಪರದರುಂ ಬೆರಸು ಬಂಡಿಗಳೊಳ್ ಪಟ್ಟಿಯುಂ ಧಾನ್ಯಮಂ ತೀವಿಕೊಂಡು ಪೊಟಲ್ಗೆ ಮಾಱಲೆಂದು ಪೋಪನ್ನೆಗ

ಮೆಡೆಯೊಳಡವಿಯೊಳ್ ಕಳ್ಳರ್ ಬಟ್ಟೆಗಟ್ಟಿ ಮೇಲ್ವಾಯ್ದಿಱಿದಡೆ ದೇವಿಲಂ ಮೊದಲಾಗೊಡೆಯ ಪಲಂಬರ್ ಪರದರ್ ಸತ್ತರುಱಿದರೆಲ್ಲ ಮೋಡಿ ಕೆಟ್ಟೊಡೆ ಬಂದಮುಮೆಟ್ಟುಗಳುಂ ಮೊದಲಾಗೆಲ್ಲಮಂ ಕಳ್ಳರಾ ಕೊಂಡುಪೋದರಾ' ಎಂದು ಬರುತ್ತದೆ. ಅಂದರೆ ದೇವಿಲನೆಂಬ ಒಬ್ಬ ವರ್ತಕ ಒಂದು ದಿವಸ ಹಲವು ಮಂದಿ ಗಾಡಿಯುಳ್ಳ ವ್ಯಾಪಾರಿಗಳನ್ನು ಕೂಡಿಕೊಂಡು ಗಾಡಿಗಳಲ್ಲಿ ಹತ್ತಿಯನ್ನೂ, ಧಾನ್ಯವನ್ನೂ ತುಂಬಿಸಿಕೊಂಡು ಪಟ್ಟಣಕ್ಕೆ ಮಾರಲಿಕ್ಕೆಂದು ಹೋಗುತ್ತಿದ್ದನು. ಹಾಗೆ ಹೋಗುವಾಗ ನಡುವೆ ಕಾಡಿನಲ್ಲಿ ಕಳ್ಳರು ಇವರ ದಾರಿಯನ್ನು ಕಟ್ಟಿ ಮೇಲೆ ಹಾರಿ ಬಂದು ತಿವಿಯಲು ದೇವಿಲ ಮೊದಲಾಗಿ ಹಲವಾರು ವರ್ತಕರು ಸತ್ತರು. ಉಳಿದವರೆಲ್ಲ ಓಡಿ ತಪ್ಪಿಸಿಕೊಂಡರು. ಸರಕುಗಳು, ಎತ್ತುಗಳು ಮುಂತಾದ ಎಲ್ಲವನ್ನೂ ಕಳ್ಳರು ಕೊಂಡುಹೋದರು. ಇದೇ ರೀತಿ ವರ್ತಕರನ್ನು ಕಳ್ಳರು ಲೂಟಿ ಮಾಡಿದ ವಿಷಯ ನಯಸೇನನ ಧರ್ಮಾಮೃತದಲ್ಲಿದೆ.[109] 'ದೂಸಿಗರಂಗಡಿಯಂ ಪೊಕ್ಕಾಸುರಮಾಗೊದಱಿಪಿಡಿದು ಮಿಂಡುಂ ತಾನುಂ ಲೇಸಪ್ಪ ವಸ್ತ್ರನಿಕರ ಮನೋಸರಿಸದೆ ಸೂಱೆಗೊಂಡು ಚಾಗಂಗೆಯ್ವಂ' ಅಂದರೆ ಸೀರೆ ವರ್ತಕರ ಅಂಗಡಿಯನ್ನು ಹೊಕ್ಕು ಭಯಂಕರವಾಗಿ ಕೂಗಿ ಹಿಡಿದು ತಾನೂ ತನ್ನ ಗುಂಪೂ ಉತ್ತಮವಾದ ವಸ್ತುಗಳ ರಾಶಿಯನ್ನು ಲಕ್ಷ್ಯಮಾಡದೆ ಸೂರೆಗೊಂಡು ತ್ಯಾಗಮಾಡುವನು. ಕ್ರಿ.ಶ. 1176ರ ಎಮ್ಮಿಗನೂರು ಶಾಸನವು[110] ರಾಜಿಸೆಟ್ಟಿಯ ಮಗ ದುಗ್ಗಣ ಹರಿಹರಕ್ಕೆ ಬರುತ್ತಿರುವಾಗ ನಿಟ್ಟೂರ ಹಾರಿವಾಳದೆಡೆಯಣ ಗೊಡ್ಡಿಸಾಲದಲ್ಲಿ ಎದುರಾದ ಬಟ್ಟೆಗಳ್ಳರೊಡನೆ ಹೋರಾಡಿ ಹಲವರನ್ನು ಕೊಂದು, ತಾನೂ ವೀರಮರಣ ಹೊಂದಿದುದನ್ನು ತಿಳಿಸುತ್ತದೆ. ಇದೇ ರೀತಿ ಕ್ರಿ.ಶ. 1189ರ ಸಾಸುವೆಹಳ್ಳಿ ಶಾಸನವು[111] ವೀರ ಮರಣ ಹೊಂದಿರುವ ವಿಷಯವನ್ನು ಉಲ್ಲೇಖಿಸುತ್ತದೆ.

ಮಾರ್ಗಮಧ್ಯದಲ್ಲಿ ಅಧಿಕಾರಿಗಳು ಸರಕನ್ನು ಪರೀಕ್ಷಿಸಿದರೆ, ಸರಕಿನ ಬಗೆಗೆ ಸಂಶಯ ತಾಳಿದರೆ ತಾವು ಸುಂಕದ ಕಟ್ಟೆಯಿಂದ ತಂದ ಚೀಟಿಯನ್ನು ಅವರಿಗೆ ತೋರಿಸುತ್ತಿದ್ದರು.[112] ಕೆಲವೊಂದು ವರ್ತಕರು ಸುಂಕದ ಕಟ್ಟೆಗೆ ಹೋಗದೆ, ಸುಂಕವನ್ನು ಕೊಡದೆ ಕಳ್ಳ ಸರಕುಗಳನ್ನು ಕಳ್ಳಹಾದಿಯ ಮೂಲಕ ಸಾಗಿಸುತ್ತಿದ್ದರು.[113] ಜೇಡರ ದಾಸಿಮಯ್ಯನ ಈ ವಚನವು[114] ವಸ್ತುಗಳ ಮೇಲೆ ಸುಂಕ ಹಾಕುತ್ತಿದ್ದದ್ದನ್ನು ತಿಳಿಸುತ್ತದೆ.

'ಹರಿದ ಗೋಣಿಯಲೊಬ್ಬ ಕಳವೆಯ ತುಂಬಿದ, ಇರುಳೆಲ್ಲಾ ನಡೆದನಾ ಸುಂಕ ಕಂಜಿ ಕಳವೆಯೆಲ್ಲಾ ಹೋಗಿ ಬರಿಗೋಣಿ ಉಳಿಯಿತ್ತು ಅಳಿಮನದವನ ಭಕ್ತಿ ಇಂತಾಯಿತ್ತು ರಾಮನಾಥ.' ಹೀಗೆ ಸಂತೆ, ಪಟ್ಟಣ ಪ್ರವೇಶಿಸುವ ವಸ್ತುಗಳ ಮೇಲೆ ಸುಂಕ ವಿಧಿಸುತ್ತಿದ್ದರು.

## 4.5. ತೂಕಗಳು ಮತ್ತು ಅಳತೆಗಳು

ತಕ್ಕಡಿಯನ್ನು ವಚನಗಳು 'ತ್ರಾಸು' ಎನ್ನುತ್ತವೆ.[115] ತ್ರಾಸು ಎಂಬುದು 'ತರಾಜು' ಎಂಬ ಪಾರಸೀ ಭಾಷೆಯ ಶಬ್ದದ ತದ್ಭವ. ಹರಿಹರನು ತಕ್ಕಡಿಯ ಹಲ್ಲೆಗಳನ್ನೂ ತ್ರಾಸು ಎಂದೇ ಕರೆದಿದ್ದಾನೆ. [116] ಅಡ್ಡಡ್ಡಲಾಗಿರುವ ಮರದ ದಂಡಕ್ಕೆ ತೊಲೆ ಎಂದು ಹೆಸರು ; ಅದರ ಎರಡೂ ತುದಿಗಳಲ್ಲಿ ದಾರದಿಂದ ಬಟ್ಟಲುಗಳನ್ನು ಕಟ್ಟಿರುತ್ತಿದ್ದರು. ಒಂದು ಕಡೆ ತೂಕದ ಬಟ್ಟುಗಳನ್ನಿಟ್ಟು ಮತ್ತೊಂದು ಕಡೆ ತೂಗಬೇಕಾದ ವಸ್ತುವನ್ನಿಡುತ್ತಿದ್ದರು. ಎರಡರ ತೂಕವು ಸಮಾನವಾಗಿರುವುದನ್ನು ಒಂದು ಮುಳ್ಳು ತೋರಿಸುತ್ತಿತ್ತು.[117] ಈ ಮುಳ್ಳು ಮತ್ತು ದಂಡದ ಮೇಲೆ ಗುರುತು ಮಾಡಿದ ಗೆರೆ ಎರಡೂ ಹೊಂದಿಕೊಂಡಾಗ ಎರಡು ಹಲ್ಲೆಗಳಲ್ಲೂ ಸಮಾನ ತೂಕದ ವಸ್ತುಗಳಿವೆಯೆಂದು ಅರ್ಥ.[118] ಮುಳ್ಳನ್ನು 'ನಾಲಗೆ 'ಯೆಂದೂ ಕರೆಯುತ್ತಿದ್ದರು.[119] ಇದು ಸಣ್ಣ ಸಣ್ಣ ವಸ್ತುಗಳನ್ನು ತೂಗುತ್ತಿದ್ದಾಗ ಬಳಸುತ್ತಿದ್ದ ತ್ರಾಸು ದೊಡ್ಡ ಪ್ರಮಾಣದ ವಸ್ತುಗಳನ್ನು ತೂಗಬೇಕಾದರೆ ನೆಲದಲ್ಲಿ ಕಂಬವೊಂದನ್ನು ನೆಟ್ಟು, ಅದರ ಮೇಲೆ ಅಡ್ಡ ತೊಲೆಯೊಂದನ್ನಿಟ್ಟು ಹಲ್ಲೆಗಳನ್ನು ಕಬ್ಬಿಣದ ಸರಪಳಿಗಳಿಂದ ಕಟ್ಟುತ್ತಿದ್ದರು.[120] ಅಲ್ಬೆರೂನಿಯು ಮತ್ತೊಂದು ಬಗೆಯ ತಕ್ಕಡಿಯನ್ನು ವರ್ಣಿಸುತ್ತಾನೆ. ಹಿಂದೂಗಳು ತಕ್ಕಡಿಯನ್ನು ತುಲಾ ಎಂದು ಕರೆಯುತ್ತಾರೆ. ಇದರಲ್ಲಿ ತೂಕದ ಬಟ್ಟುಗಳು ಬದಲಾಗುವುದಿಲ್ಲ, ಅದರ ಬದಲು ಚಿಂತಾಲುಗಳನ್ನೇ ಕೆಲವು ಗುರುತುಗಳ ಮೇಲೆ ಹಿಂದಕ್ಕೂ, ಮುಂದಕ್ಕೂ ಕದಲಿಸುತ್ತಾರೆ.[121] ತೂಕದ ಬಟ್ಟುಗಳನ್ನು ಕಂಚಿನಿಂದ ತಯಾರಿಸುತ್ತಿದ್ದ ಸೂಚನೆಯು ವಚನಗಳಲ್ಲಿದೆ. [122]

### 4.5.1. ತೂಕಗಳು

ವಚನಗಳಲ್ಲಿ ಚಿನ್ನ, ರತ್ನ ಮುಂತಾದ ಅಮೂಲ್ಯ ವಸ್ತುಗಳ ಕೆಲವು ತೂಕದ ಹೆಸರುಗಳು ದೊರೆಯುತ್ತವೆ. ಗುಂಜ[123], ಮಾಸಿ[124], ಜವೆ[125] ಇವು ವಚನಗಳಲ್ಲಿ ಉಕ್ತವಾಗಿವೆ. ಯಾದವರ ಆಳ್ವಿಕೆಯ ಕಾಲದ ಶಾಸನಗಳಲ್ಲಿ ಗುಂಜಾ, ವಾಲ, ಪಲ, ಮಾಸಾ, ತೊಲಾಗಳೆಂಬ ತೂಕಗಳು ಉಕ್ತವಾಗಿವೆ. [126] **(gunjā, vāla, java, pala, māsā, and tolā)**

'ವ್ಯವಹಾರ ಗಣಿತ 'ದಲ್ಲಿ ಈ ತೂಕಗಳ ಪರಸ್ಪರ ಸಂಬಂಧವನ್ನು ಈ ರೀತಿಯಾಗಿ ಹೇಳಿದೆ.[127]

ನಾಲ್ಕು ಸುವರ್ಣ = ಒಂದು ಕರ್ಷ
ನಾಲ್ಕು ಕರ್ಷ = ಒಂದು ಪಲ
ಇಪ್ಪತ್ತು ಪಲ = ಒಂದು ಬೀಸಗೆ
ಐದು ಬೀಸಗೆ = ಒಂದು ತೊಲೆ
ಇಪ್ಪತ್ತು ತೊಲೆ = ಒಂದು ಭಾರ

ಇತರ ವಸ್ತುಗಳ ತೂಕದ ಬಗ್ಗೆ ನಮಗೆ 'ಅರ್ಧಮಣ'ದ ಉಲ್ಲೇಖದ ಹೊರತು[128] ಮತ್ತಾವ ವಿವರಗಳೂ ದೊರೆಯುವುದಿಲ್ಲ.

**4.5.2. ಅಳತೆ ಅಥವಾ ಮಾಪನಗಳು**

ಅಳತೆಗಳಲ್ಲೆಲ್ಲ ಗಿದ್ದವೇ ತುಂಬ ಚಿಕ್ಕದು. ಇದಕ್ಕಿಂತ ದೊಡ್ಡದಾದ ಅಳತೆಯೆಂದರೆ ಸೊಲ್ಲಗೆ,[129] ಮುಂದಿನದು ಮಾನ,[130] ಅನಂತರ ಬರುವುದು ಬಳ್ಳ,[131] ಆ ಮೇಲೆ ಕೊಳಗ,[132] ಎಲ್ಲಕ್ಕಿಂತ ದೊಡ್ಡ ಅಳತೆಯೆಂದರೆ ಖಂಡುಗ[133] ಇವುಗಳ ಸಂಬಂಧವು ರಾಜಾದಿತ್ಯನ ಪ್ರಕಾರ[134] ಹೀಗಿದೆ.

ನಾಲ್ಕು ಗಿದ್ದ = ಒಂದು ಸೊಲ್ಲಗೆ
ನಾಲ್ಕು ಸೊಲ್ಲಗೆ = ಒಂದು ಮಾನ
ನಾಲ್ಕು ಮಾನ = ಒಂದು ಬಳ್ಳ
ನಾಲ್ಕು ಬಳ್ಳ = ಒಂದು ಕೊಳಗ
ಇಪ್ಪತ್ತು ಕೊಳಗ = ಒಂದು ಖಂಡುಗ

ಇವುಗಳಲ್ಲದೆ ವಚನಗಳಲ್ಲಿ ಮೊರವನ್ನು ಒಂದು ಅಳತೆಯಂತೆ ಹೇಳಲಾಗಿದೆ.[135] 'ಇವನಪ್ಪೊಡೆ ತಾನೊರ್ಮೊರ ತವುಡಿಂಗಂ ಪೋಗನ್' (ಅಂದರೆ ಇವನಾದರೆ ಒಂದು ಮೊರತವುಡಿಗೂ ಮಾರಾಟವಾಗನು) ಎಂಬ ನಯಸೇನನ[136] ಮಾತು ಇದನ್ನು ಸಮರ್ಥಿಸುತ್ತದೆ. 'ಹೆಡಿಗೆ'ಯೂ ಒಂದು ಅಳತೆಯಾಗಿ ಬಳಕೆಯಲ್ಲಿದ್ದಿರಬೇಕು.[137] ಕೊಳಗವೇ ಹೆಚ್ಚು ಬಳಕೆಯಲ್ಲಿದ್ದ ಅಳತೆಯೆಂದು ಕಾಣುತ್ತದೆ. 'ದೇವಗೊಳಗ', 'ದಮಗೊಳಗ', 'ಜಕ್ಕಿಗೊಳಗ' ಮುಂತಾದ ನಾನಾ ಅಳತೆಯ ಕೊಳಗಗಳು ಬೇರೆ ಬೇರೆ ಕಡೆಗಳಲ್ಲಿ ಬಳಕೆಯಲ್ಲಿದ್ದವು.[138]

**ಮಾಪನಗಳು**

ಎಣ್ಣೆಯ ಅಳತೆಯನ್ನು ನಾನಾ ವಿಧದಲ್ಲಿ ಸೂಚಿಸಲಾಗಿದೆ. ಎಣ್ಣೆ ಉತ್ಪಾದಕರ ಸಂದರ್ಭದಲ್ಲಿ ದೊಡ್ಡ ಅಳತೆ ಗಾಣದ ರೂಪದಲ್ಲಿಯೂ, ಎಣ್ಣೆ ಮಾರಾಟಗಾರರ ಸಂದರ್ಭದಲ್ಲಿ ದೊಡ್ಡ ಅಳತೆ ಹಾಡದ ರೂಪದಲ್ಲಿಯು ಇತ್ತು. ಇದನ್ನು ಧಾರವಾಡದ ಶಾಸನವೊಂದರಿಂದ ತಿಳಿಯಬಹುದು.[139] 'ಮಣಿಗುಂದಗೆಯ ತೆಲ್ಲಿಗರು ಐವತ್ತೊಕ್ಕಲು ಗಾಣಕೆ ಸೊಟಗೆ ಯೆಂಣೆಯಂ ಹೊಱಗಣಿಂ ಬಂದು ಮಾಱುವ ಹಾಡಕೆ ಸೊಂಟಗೆ ಯ(ಂ)ಣೆಯಂ ಧಾರಾಪೂರ್ವ್ವಕವಾಗಿ ಕೊಟ್ಟರು' ಎಂಬ ಶಾಸನೋಲ್ಲೇಖ ಬಹುತೇಕ ಮೇಲಿನ ಮಾತನ್ನು ಪುಷ್ಟೀಕರಿಸುತ್ತದೆ. ಅನೇಕ ಶಾಸನಗಳಲ್ಲಿ ಒಂದು

ಗಾಣವನ್ನು ಬಿಟ್ಟರು[140] ಎಂಬಂಥ ಹೇಳಿಕೆಗಳು ಒಂದು ಗಾಣ ದೇವಾಲಯಗಳ ಸುಪರ್ದಿಗೆ ಬಿಟ್ಟು ಅದರಲ್ಲಿ ಎಷ್ಟು ಪ್ರಮಾಣದ ಎಣ್ಣೆ ಬರುತ್ತದೆಯೋ ಅಷ್ಟನ್ನು ದಾನ ಮಾಡಿದ್ದಾಗಿ ತಿಳಿಯಬಹುದು. ಕೆಲವೊಮ್ಮೆ ಒಂದು 'ಗಾಣದಲ್ಲಿವೊಮ್ಮನೆಣ್ಣೆ,'[141] 'ಗಾಣಕ್ಕೆಲ್ಲ ಸೊಲ್ಲಗೆಯೆಣ್ಣೆಯ ಪ್ರತಿದಿನ',[142] 'ಗಾಣಕ್ಕರವನ ಎಂಣೆ',[143] 'ಗಾಣದಲಿ ಅರಸೊಲ್ಲಗೆಯ ಸೊ(ಟಿಗೆ)ಯಂಣೆಯಂ'[144], 'ಗಾಣಿಗರು ಕೊಟ್ಟ (ಆಯ) ಸೊಟಿಗೆಯೆಣ್ಣೆ'[145], 'ಗಾಣದಲು ಸೊಳಸಿಗೆಯೆಂಣೆಯಂ',[146] 'ಗಾಣದ ಕೊತ್ತಳಿಗಳುಯೆನಿತು ಗಾಣವನಿತಱಲು ನಂದಾದೀವಿಗೆ ಯಡ್ಡ ತುಬ ಎಣ್ಣೆಯಂ ಬಿಟ್ಟ ದತ್ತಿ' [147] ಎಂದು ಮುಂತಾಗಿ ಶಾಸನೋಲ್ಲೇಖಗಳು ನಮಗೆ ದೊರಕುವುದರಿಂದ ಆಗಿನ ಕಾಲದಲ್ಲಿದ್ದ ಅಳತೆಗಳಾದ ಸೊಲ್ಲಗೆ, ಸೊಟ್ಟಗೆ, ಮಾನ, ಅರವನ, ಅರಸೊಲ್ಲಗೆ, ಸೊಳಸಿಗೆ, ಅಡ್ಡ ಮೊದಲಾದ ಅಳತೆ ಪ್ರಮಾಣಗಳಿದ್ದುದು ಗೊತ್ತಾಗುತ್ತದೆ. ಅಲ್ಲದೆ ಇಂಗಳೇಶ್ವರದ ಶಾಸನವೊಂದು[148] 'ತೆಲ್ಲಿಗಯ್ವತ್ತೊಕ್ಕಲು ನಂದಾದೀವಿಗೆ(ಗೆ) ಪಳಿಗೆಯೆಣ್ಣೆಯ' ಎಂದು ಉಲ್ಲೇಖಿಸುವುದರಿಂದ ಎಣ್ಣೆ ಮುಂತಾದವುಗಳನ್ನು ಅಳೆಯಲು ಪಳಿಗೆ ಎಂಬ ಅಳತೆ ಪ್ರಮಾಣ ಇದ್ದುದು ತಿಳಿಯುತ್ತದೆ ಹಾಗೂ ಮೇಲಿನ ಉಲ್ಲೇಖಗಳಿಂದ ಇಲ್ಲಿ ಗಾಣಕ್ಕೆ ನಿರ್ದಿಷ್ಟ ಅವಧಿಗೆ ಆಡಿಸುವ ಎಣ್ಣೆಯಲ್ಲಿ ಒಂದು ಅಳತೆ ಬಿಟ್ಟದ್ದು ಗೊತ್ತಾಗುತ್ತದೆ. ಕೆಲಶಾಸನಗಳಲ್ಲಿ 'ಗಾಣಕ್ಕೆ ನಿಚ್ಚಲು (ನಿತ್ಯವು) ಅರ್ಧಸೊಲ್ಲಗೆ ಎಣ್ಣೆ'[149] ಎಂಬ ಉಲ್ಲೇಖ ಬರುವುದರಿಂದ ಈ ಅವಧಿ ಒಂದು ದಿನ ಎಂದು ಗ್ರಹಿಸಬಹುದು.

ಎಣ್ಣೆ ಮಾರಾಟ ಮಾಡುವ ಸೆಟ್ಟಿಗಳು ಹಾಡಗಳಲ್ಲಿ ಎಣ್ಣೆಯನ್ನು ಊರಿಂದೂರಿಗೆ ಒಯ್ಯುತ್ತಿದ್ದರು. ಆಗ ಅವರು ಅದರಲ್ಲಿನ ಒಂದು ಸೊಂಟಿಗೆ ಯೆಂಣೆಯನ್ನು ದಾನವಾಗಿ ಅಲ್ಲಿನ ದೇವಾಲಯಕ್ಕೆ ಕೊಡುತ್ತಿದ್ದರು.[150] ಮತ್ತೊಂದು ಶಾಸನ[151] 'ದೇವರ ನಂದಾದೀವಿಗೆಗೆಯ್ವತ್ತೊಕ್ಕಲು ಗಾಣಕ್ಕೆ ಸೊಂಟಿಗೆ ಯೆ(ಂ)ಣ್ಣೆಯನ್ನು ಕೊಡುತ್ತಾರೆ. ಬೇಱೂರಿಂದ ಬಂದು ಮಾಱುವ ಎ(ಂ)ಣ್ಣೆಯ ಹಾದಕ್ಕೆ ಯದ್ದೆ(ಂ)ಣ್ಣೆಯ ಕೊಟ್ಟರು' ಎಂದು ಉಲ್ಲೇಖಿಸುವುದರಿಂದ ಹಾದ, ಹಾಡ, ಹಾಗ ಎಂಬ ದ್ರವ ಅಳತೆಯ ಮಾನಗಳು ಬಳಕೆಯಲ್ಲಿದ್ದವು. ಅಲ್ಲದೆ ಸಣ್ಣ ಮಾನಗಳು ಎಲ್ಲರಲ್ಲೂ ಸಾಮಾನ್ಯವಾಗಿ ಬಳಕೆಯಲ್ಲಿದ್ದವು. ಅವುಗಳಲ್ಲಿ ಸೊಂಟಿಗೆ ಅಥವಾ ಸೊಲ್ಲಗೆ ಎಂಬ ಶಬ್ದ ಎಣ್ಣೆ ಹಾಕುವ ಸೌಟನ್ನು ಸೂಚಿಸುತ್ತದೆ. ಆದರೆ ಈ ಸೌಟುಗಳು ಬೇರೆ ಬೇರೆ ಅಳತೆಯಲ್ಲಿದ್ದು, ವ್ಯಾಪಾರಸ್ಥರು ಇಂಥ ಅನೇಕ ಸೌಟುಗಳನ್ನು ಇಟ್ಟುಕೊಳ್ಳುತ್ತಿದ್ದರು. ಇದು ಈಗಾಗಲೇ ಉಲ್ಲೇಖಿಸಿದ ಶಾಸನಗಳಿಂದ ವ್ಯಕ್ತವಾಗುತ್ತದೆ.

### 4.5.3. ಎಣಿಕೆ (Counting)

ನಿರ್ದಿಷ್ಟಪಡಿಸಿದ ಆಕಾರದ ಬೆಲ್ಲದ ಅಚ್ಚನ್ನು 'ಅಚ್ಚು' ಎಂದು, ನಿರ್ದಿಷ್ಟ ಸಂಖ್ಯೆಯ ವೀಳ್ಯದ ಎಲೆಗಳ ಕಟ್ಟನ್ನು 'ಕಟ್ಟು' ಎಂದು, ನಿರ್ದಿಷ್ಟ ಸಂಖ್ಯೆಯ ಬಟ್ಟೆಗಳ ಒಂದು ಗಂಟನ್ನು 'ಕಡಗೆ' ಎಂದು (ಹೊಱಗಣಿಂ ಬಂದ ಸೀರೆಯ ಕಡಗೆಗೆ ವೀಸವೊಂದು), ನಿರ್ದಿಷ್ಟ ಸಂಖ್ಯೆಯ ವೀಳ್ಯದೆಲೆಗಳ ಒಂದು ಕಟ್ಟನ್ನು 'ಕೌಳಿಗೆ' ಎಂದು, ನಿರ್ದಿಷ್ಟ ಸಂಖ್ಯೆಯ ಬಟ್ಟೆಗಳ ಗಂಟನ್ನು 'ಪೊದಕೆ' ಎಂದು (ಸೀರೆಯ ಸುಂಕ ಪೊದಕೆಯ ಪಾಗ ೨) ಬಹುಶಃ ನಿರ್ದಿಷ್ಟ ಸಂಖ್ಯೆಯ ಅಡಕೆಯ ಗಂಟನ್ನು 'ಸೊಜ್ಜ' ಎಂದು, ನಿರ್ದಿಷ್ಟ ಸಂಖ್ಯೆಯ ವೀಳ್ಯದೆಲೆಗಳ ಕಟ್ಟನ್ನು 'ಹೇಱು' ಎಂದು, ಮತ್ತು ನಿರ್ದಿಷ್ಟ ಸಂಖ್ಯೆಯ ವೀಳ್ಯದೆಲೆಗಳ ಗಂಟು, ಬಹುಶಃ ತಲೆಯ ಮೇಲೆ ಹೊರುವಂಥದು 'ಹೊಱೆ' ಎನ್ನಲಾಗುತ್ತಿದೆ.[152] ಈ ರೀತಿ ಕೆಲವೊಂದು ವಸ್ತುಗಳು ಎಣಿಕೆಯ ರೂಪದಲ್ಲಿ ಮಾರಾಟವಾಗುತ್ತಿದ್ದವು.

### 4.5.4. ಹೊರೆ, ಗಂಟು, ಮೊಟ್ಟೆ, ತಲೆಹೊರೆ ಇತ್ಯಾದಿ

### (Packages, Bundles, Head loads etc.)

ಎತ್ತುಗಳ ಮೇಲೆ ಸಾಗಿಸುವ ವಸ್ತುಗಳ ಭಾರದ ಪ್ರಮಾಣವನ್ನು 'ಎತ್ತಿನ ಹೇಱು' ಎಂದು, ಕತ್ತೆಗಳ ಮೇಲೆ ಸಾಗಿಸುವ ವಸ್ತುಗಳ ಭಾರದ ಪ್ರಮಾಣವನ್ನು 'ಕತ್ತೆಯ ಹೇಱು' ಎಂದು, ಕುಂಬಾರರು ತಲೆಯ ಅಥವಾ ಹೆಗಲ ಮೇಲೆ ಹೊರುವ ಮಡಿಕೆಗಳ ಹೊರೆಯನ್ನು 'ಕಂಪೆ' ಎಂದು (ಕುಂಬಾರರ ಕಂಪೆಗೆ ಮಡಕೆ ೧), ತಲೆಯ ಮೇಲೆ ಹೊತ್ತು ಒಯ್ಯುವ ಒಂದು ಹೊರೆಯನ್ನು 'ತಲೆವೊರೆ', 'ತಲೆಹೊರೆ' ಎಂದು, ಹತ್ತಿ ಮುಂತಾದವುಗಳ ಒಂದು ತೂಕದ ಪ್ರಮಾಣದ ಗಂಟನ್ನು 'ಮಳವೆ' ಎಂದು (ಹತ್ತಿಯ ಮಳವೆ ೧೦೦ಕ್ಕೆ), ವೀಳ್ಯದ ಎಲೆಗಳ ಕಟ್ಟುಗಳ ದೊಡ್ಡ ಗಂಟನ್ನು 'ಮಾವಟೆ' ಎಂದು, ಬೆನ್ನ ಮೇಲಾಗಲಿ, ತಲೆಯ ಮೇಲಾಗಲಿ ಒಯ್ಯುವ ಹೊರೆಯನ್ನು 'ಮೊಟ್ಟೆ' ಎಂದು, ಎತ್ತು ಕತ್ತೆ ಮುಂತಾದ ಪ್ರಾಣಿಗಳ ಮೇಲೆ ಹೇರುವ ವಸ್ತುಗಳ ನಿರ್ದಿಷ್ಟಪಡಿಸಿದ ತೂಕವನ್ನು 'ಮೊಳವೆ' ಎಂದು ಮತ್ತು ಕಾಳುಗಡಿ, ಕಾಯಿಪಲ್ಲೆ ಮುಂತಾದವುಗಳನ್ನು ಒಯ್ಯುವ ನಿರ್ದಿಷ್ಟ ಪ್ರಮಾಣದ ಬುಟ್ಟಿ, ಒಂದು ಅಳತೆಯ ಪ್ರಮಾಣವನ್ನು ಹೆಡಗೆ ಎಂದು ಕರೆಯಲಾಗುತ್ತಿತ್ತು.[153]

## 4.6. ವೃತ್ತಿ ತೆರಿಗೆಗಳು (Professional Taxes)

ರಾಜ್ಯದ ಬಹುದೊಡ್ಡ ಆದಾಯಗಳಲ್ಲೊಂದಾದ ವ್ಯಾಪಾರ ತೆರಿಗೆ ಶಾಸನಗಳಲ್ಲಿ ಸುಂಕ (< ಸಂ. ಶುಲ್ಕ) ವೆಂದೇ ಉಲ್ಲೇಖಿಸಲ್ಪಟ್ಟಿದೆ. ಸುಂಕದಾದಾಯಕ್ಕಾಗಿ ಪಟ್ಟಣ ಮತ್ತು ಸಂತೆಯ ಊರುಗಳಲ್ಲಿ ಸುಂಕದ ಕಟ್ಟೆಗಳನ್ನು ನಿರ್ಮಿಸಿ ಸುಂಕದಧಿಕಾರಿಯನ್ನು ನೇಮಿಸುತ್ತಿದ್ದರು. ಈ ಅಧಿಕಾರಿ 'ಕಟ್ಟಿದುದೇನು ಕಂಕುಳೊಳಗೆ ಹೊತ್ತುದೇನು ಮಂಡೆಯ ಮೇಲೆ'[154] ಎಂದು ಪ್ರಶ್ನಿಸಿ ವಸ್ತುವಿಗನುಗುಣವಾಗಿ ಸುಂಕವನ್ನು ವಸೂಲು ಮಾಡಿ, 'ಹೊರವಾರು ಉಭಯಮಾರ್ಗ, ಒಳವಾರು ಸ್ಥಲಕುಳ ವಿಸಂಚವಿಲ್ಲ'[155] ಎಂದು ವ್ಯಾಪಾರಿಗೆ ಸಹಿ ಮಾಡಿದ ರಸೀದಿ (ಚೀಟಿ) ಕೊಡುತ್ತಿದ್ದ ಚಿತ್ರಣ ಸುಂಕದ ಬಂಕಣ್ಣನ ವಚನಗಳಲ್ಲಿ ವ್ಯಕ್ತವಾಗಿದೆ.

ಮಧ್ಯಕಾಲೀನ ಕರ್ನಾಟಕದಲ್ಲಿ ಸಾರ್ವಜನಿಕ ಅಗತ್ಯವಾದ ಎಣ್ಣೆ ಉತ್ಪಾದನೆಯ ಮೇಲೆ ತೆರಿಗೆ ಹಾಕಲಾಗುತ್ತಿತ್ತು. ಶಾಸನಗಳು ಅದನ್ನು ಗಾಣಾಯ[156], ಗಾಣದ ಸುಂಕ[157], ಗಾಣದೆಱೆ[158], ಗಾಣದ ತೆಱೆ[159], ಎತ್ತುಗಾಣದ ಸುಂಕ[160], ಕೈಗಾಣ ಸುಂಕ[161], ತೆಲಿಗರ ಗಣದೆಱೆ[162], ಎತ್ತುಗಾಣ ಒಂದಕ್ಕಂ ಆ ತೆಲ್ಲಿಗರ ಮನೆದೆಱೆ ಒಂದುವಂ[163], ಗಾಣವಾಯಿಲ[164] ಎಂದು ಮುಂತಾಗಿ ಉಲ್ಲೇಖಿಸುತ್ತವಾದರೂ ಗಾಣದೆಱೆ ಎಂಬ ಹೆಸರು ಹೆಚ್ಚು ಶಾಸನಗಳಲ್ಲಿ ಉಲ್ಲೇಖಿತವಾಗಿವೆ.

ಹಾಗೆಯೇ ನೇಕಾರರ ಮೇಲೆ ಹಾಕಿದ ತೆರಿಗೆ ಸಾಲಿಗದೆಱೆ[165], ಮಗ್ಗದೆಱೆ[166], ಜೇಡದೆಱೆ[167], ಮಗ್ಗದ ಸುಂಕ[168] ಎಂಬ ಶಾಸನೋಲ್ಲೇಖಗಳಿವೆ. ಕ್ರಿ.ಶ. 1084ರ ಹುಣಸೂರು ಶಾಸನವೊಂದು[169] ಕುಂಬಾರದೆಱೆ, ಅಸಗದೆಱೆ, ತೊತ್ತುದೆಱೆ, ಭಂಡಿದೆಱೆ, ವೊಡ್ಡದೆಱೆ, ಮೇದದೆಱೆ ಸಾದದೆಱೆ, ಉದುವಲುದೆಱೆ, ಅಯ್ನೂಱುಗುಳಿಯ ಪನ್ನಾಯದೆಱೆ, ನಾವಿದದೆಱೆ ಹೀಗೆ ತೆರಿಗೆಗಳ ಒಂದು ಪಟ್ಟಿಯನ್ನೇ ಉಲ್ಲೇಖಿಸಿದೆ. ಬಹುಶಃ ಎಲ್ಲಾ ವೃತ್ತಿಗಳಿಗೂ ತೆರಿಗೆ ವಿಧಿಸಲಾಗಿದೆ. ಚಿಕ್ಕಮಗಳೂರು ಶಾಸನವು[170] 'ಬೀರವಣ ಕೊಡತಿವಣ, ಕತ್ತರಿವಣ, ಅಡಕಲು ವಣ' ಎಂಬ ತೆರಿಗೆ ಹಾಕಿರುವುದನ್ನು ತಿಳಿಸುತ್ತದೆ. ಇಲ್ಲಿನ ಕೊಡತಿವಣ ಎಂಬುದು ಬಹುಶಃ ಬಡಗಿ ಹಾಗೂ ಕಮ್ಮಾರರಿಗೆ ಹಾಕಿದ ತೆರಿಗೆಯಾಗಿರಬೇಕು. ತುಮಕೂರು ಶಾಸನವು[171] 'ಕಬ್ಬುನದ ಸುಂಕ' ಎಂದು ಉಲ್ಲೇಖಿಸುತ್ತದೆ. ಇದು ಬಹುಶಃ ಕಮ್ಮಾರರಿಗೆ ಸಂಬಂಧಿಸಿದ ತೆರಿಗೆ. ಕ್ರಿ.ಶ. 1291ರ ಕಡೂರು ಶಾಸನದಲ್ಲಿ[172] 'ಹೊಗೆದೆಱೆ ಕಬ್ಬಿಲದೆಱೆ ಮಗ್ಗದೆಱೆ ಕಾವಲಿದೆಱೆ ಪಂಚಕಾರುಕ ಆಲೆದೆಱೆ ಮುಕುಡಿದೆಱೆ ಜೆಟ್ಟಿದೆಱೆ ಕೊನೆದೆಱೆ' ಎಂಬ ತೆರಿಗೆಗಳ

ದೀರ್ಘಪಟ್ಟಿಯೇ ಇದೆ. ಸುತ್ತಿಗೆ, ಕತ್ತರಿ ಮತ್ತು ಅಡಿಗಲ್ಲುಗಳ ಮೇಲೆ ತೆರಿಗೆ ವಿಧಿಸಿರುವುದನ್ನು ಚಿಕ್ಕಮಂಗಳೂರಿನ ಶಾಸನವೊಂದು ತಿಳಿಸುತ್ತದೆ.[173] ಹಿತ್ತಾಳಿ ಕೆಲಸದವರ ಮೇಲೂ ತೆರಿಗೆ ಸಂಗ್ರಹಿಸಿರುವುದನ್ನು ನೋಡಬಹುದಾಗಿದೆ.[174] ಕೋಲಾರ ಶಾಸನವು[175] ಅಕ್ಕಸಾಲಿಗರ ಮೇಲೆ ತೆರಿಗೆ ವಿಧಿಸಲಾಗುತ್ತಿತ್ತು ಎಂದು ತಿಳಿಸುತ್ತದೆ. ಹಗ್ಗಗಳನ್ನು ನಾರು ಮತ್ತು ಚರ್ಮಗಳಿಂದ ತಯಾರಿಸುತ್ತಿದ್ದು ಚರ್ಮದ ಹಗ್ಗಗಳ ಮೇಲೆ ತೆರಿಗೆ[176] ವಿಧಿಸಿರುವುದನ್ನು ಕ್ರಿ.ಶ. 1291ರ ಮುಮ್ಮಡಿ ಬಲ್ಲಾಳನ ಕಡೂರಿನ ಶಾಸನ ತಿಳಿಸುತ್ತದೆ. ಕ್ರಿ.ಶ. 1157ರ ಕುಣಿಗಲ್ ಶಾಸನವು[177] ಬಡಗಿಗಳ ಮೇಲೆ ಪ್ರತ್ಯೇಕವಾಗಿ 'ಬಡಗಿದೆಱೆ' ಹಾಕಿದ್ದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. 1185ರ ಲಕ್ಕುಂಡಿ ಶಾಸನವು[178] 'ರೂವಾರಿಗಳು ಪ್ರತುಮೆಗಳ ಮಾಡುವ ಬೆಲೆ ಕಟಿದಲಿ ಹೊನ್ನು ಬಳಿಯ ಬೇಳೆಯ ಕುಡುವರು ೨' ಎಂದು ಹೇಳುತ್ತದೆ. ಅಂದರೆ ಇಲ್ಲಿ ರೂವಾರಿಗಳು ರೂಪಿಸುತ್ತಿದ್ದ ಪ್ರತಿಮೆಗಳಿಗೆ ಬೆಲೆಯನ್ನು ಕಟ್ಟಿ ಅದರ ಮೇಲೆ ತೆರಿಗೆಯನ್ನು ವಿಧಿಸುತ್ತಿದ್ದರು ಎಂದು ತಿಳಿಯಬಹುದು. ನೇಯುವುದಕ್ಕಾಗಿ ಉಪಯೋಗಿಸುವ ನೂಲಿನ ಮೇಲಿನ ಕರವನ್ನು ಶಾಸನಗಳು ನೂಲ-ಹದಿಕೆ,[179] ನೂಲಕಳುಹು[180] ಎಂದು ಕರೆದಿವೆ.

ವೃತ್ತಿ ತೆರಿಗೆಗಳಲ್ಲಿ ವ್ಯಾಪಕವಾಗಿ ಬಳಕೆಯಾದ ಪದ ಬಣ್ಣಿಗೆ, ಅದರ ಅರ್ಥ, ಸ್ವರೂಪಾದಿಗಳು ಸ್ಪಷ್ಟವಾಗುವುದಿಲ್ಲ. ಬಡಗಿ, ಕಮ್ಮಾರ, ಸಂಮಗಾಱ, ಅಸಗ, ದೇಡಮಗ್ಗ ಮೊದಲಾದವರ ಮೇಲೆ ಬಣ್ಣಿಗೆ ಸುಂಕವನ್ನು ಹಾಕಿದುದಕ್ಕೆ ಆಧಾರವಿದೆ.[181] ಇದರಿಂದ ಅದೊಂದು ವೃತ್ತಿಸುಂಕವೆಂದು ಹೇಳಬಹುದು.

**ಸಂತೆಯ ಸುಂಕ**

ಅಯ್ಯಾವೊಳೆ ಐನೂರ್ವರು, ಸೆಟ್ಟಿ - ಬಣಂಜಿಗ, ಸೆಟ್ಟಿಗುತ್ತ, ಮುಂಮುರಿದಂಡ, ವಡ್ಡ ವ್ಯವಹಾರಿ, ನಕರ, ಗವರೆ, ಗಾತ್ರಿಗ, ತಂಬುಲಿಗ, ಸೆಟ್ಟಿಕಾರ, ಹಲರು, ಎಳಮೆ ಹಾಗೂ ಸಾಲಿಕೆ ಬಲ್ಲಾಳು ಪ್ರಾಚೀನ ಮಧ್ಯಕಾಲೀನ ಕರ್ನಾಟಕದ ವಿನಿಮಯ ವರ್ತಕರು. ತೆಲ್ಲಿಗ, ಕುಂಬಾರ, ಅಕ್ಕಸಾಲಿ, ಮಾದಿಗ, ಸಮಗಾರ, ಮೇದ, ಮಾಲೆಗಾರ, ಸಾಲಿಗ, ಚಿಪ್ಪಿಗ, ಕುರುಬ, ಕಂಚುಗಾರರು ಉತ್ಪಾದಕ ವಿನಿಮಯ ವರ್ತಕರು. ಈ ಎರಡು ವರ್ಗದ ವರ್ತಕರು ಪಾದಮಾರ್ಗ ಹಾಗೂ ಜಲಮಾರ್ಗಗಳ ಮೂಲಕ ನಾಡಿನ ತುಂಬೆಲ್ಲ ಸಂಚರಿಸಿ ವ್ಯಾಪಾರ ಮಾಡಿದ್ದಾರೆ. ಹೀಗೇ ಈ ವರ್ತಕರು ಪಾದಮಾರ್ಗ, ಜಲಮಾರ್ಗಗಳ ಮೂಲಕ ಸಂತೆಗೆ ತರುವ ವಸ್ತುವಿನ ಮೇಲೆ ಆಕರಿಸುವ ತೆರಿಗೆಯೇ ಸಂತೆಯ ಆಯ. ಪರ್ಯಾಯವಾಗಿ ಇದನ್ನು ಸಂತೆಯ ಸುಂಕ, ಸಂತೆಯ ಆದಾಯವೆಂದು ಕರೆಯಲಾಗಿದೆ. ಇದನ್ನೇ

ಸ್ಥಳಸುಂಕ, ಸ್ಥಳಬಂಧ, ಸ್ಥಳನಿಬಂಧಿ, ಒಳವಾಋ, ಒಳಸುಂಕವೆಂದು ಕರೆದಿರಬಹುದು. ಸರಕುಗಳ ತೂಕ, ತುಂಬಿದ ವಸ್ತುವಿನ ಗಾತ್ರ, ಸಾಗಿಸುವ ವಾಹನ, ಸರಕಿನ ಬೆಲೆ, ಅಳತೆ, ಪ್ರಮಾಣ ಹಾಗೂ ರಾಶಿ (=ಒಟ್ಟಿಲ) ಗಳ ಮೇಲೆ ಸಂತೆಯ ಸುಂಕ ನಿರ್ಧರಿಸುತ್ತಿದ್ದರು. ವಸ್ತುಗಳಿಗೆ ಪ್ರಾಚೀನ ಕರ್ನಾಟಕದ ಬೇರೆ ಬೇರೆ ಪ್ರದೇಶ ಕಾಲಗಳಲ್ಲಿ ಆಕರಿಸುತ್ತಿದ್ದ ಸಂತೆಯ ಸುಂಕ ಹೀಗಿದೆ.

## ಸಂತೆಯ ಸುಂಕ

| | ದವಸ / ವಸ್ತು | ಊರು | ಭಾರದ ಮೊತ್ತ | ಸುಂಕದ ಪ್ರಮಾಣ | ವರುಷ |
|---|---|---|---|---|---|
| 1. | ಎಳ್ಳು | ಅಲಂಪುರ | ಹೇಋ | 1 ಬಳ್ಳ | 1057 |
| | | ಭಾರಂಗಿ | ಪೊನ್ | 1 ವೀಸ | 1159 |
| | | ಕಲ್ಲುಕೆರೆ | ಹೇಋ | 2 ಮಾನ | 1180 |
| 2. | ತುಪ್ಪ/ ಎಣ್ಣೆ | ಅಲಂಪುರ | ಸಂಗಡಿಕಾಯಿ | $2^1/_2$ ಮೀ | 1076 |
| | | ಕೊಲ್ಲಾಪುರ | ಕೊಡ | 1 ಸೊಲ್ಲಗೆ | 1135 |
| | | | ಸಿದ್ದಿಗೆ | ಅರವಾನ | |
| | | | ಸಂಗಡಿಗೆ | 1 ಮಾನ | |
| | | ಪಾವಗಡ | ಹೇಋ | 1 ಅದ್ದನ | |
| | | ಗಾರೇಹಟ್ಟಿ | ಕೊಡ | 1 ಮಾನ | 1123 |
| | | ಸಂತೆಕೆರೆ | ಕೊಡ | 2 ಸೊಳಸ | 1141 |
| | | ಎಕ್ಲಂಬಾ | ಕೊಡ | ಅರವಾನ | 1165 |
| | | ಇಸಲಾಪುರ | ಕೊಡ | 2 ಸೊಳಸ | 1203 |
| | | ಕುಂದವಾಡ | ಕೊಡ | 2 ಸೊಳಸ | 1218 |
| | | ನೀರ್ಗುಂದ | ಕೊಡ | 1 ಸೊಲ್ಲಗೆ | 1240 |
| 3. | ಹತ್ತಿ | ಅಲಂಪುರ | ಮಳವೆ | 2 ವೀಸ | 1057 |
| | | ಓಬಳಾಪುರ | ಮಳವೆ | 1 ವೀಸ | 1087 |
| | | ಕೊಲ್ಲಾಪುರ | ಮಳವೆ | 5 ಪಲ | 1135 |
| | | | ಬಂಡಿ | 2 ಬಿಸಿಗೆ | |
| | | | ಜವಳ | 10 ಪಲ | |
| | | ಭಾರಂಗಿ | ಪೊನ್ | 1 ಹಾಗ | 1159 |
| | | ಹೆಗ್ಗೆರೆ | ಮಳವೆ | 2 ವೀಸ | 1160 |
| | | ಕಡ್ಲೇವಾಡ | ಮಳವೆ | 5 ಪಲ | ಸು. 12ನೇ ಶ. |
| | | ಬೆಳಗಾವಿ | ಬಂಡಿ | 3 ತಾರ | 1204 |
| | | | ಹೇರು | 1 ಕಾಣಿ | |

| | | | | | |
|---|---|---|---|---|---|
| 4. | ಸೀರೆ | ತದಖೇಲ್ | ಪೊದಕೆ | 2 ಪಾಗ | 1047 |
| | | | ಸೀರೆ | 1 ಪಾಗ | |
| | | | ಪೊನ್ | 1 ಪಣ | |
| | | ಓಬಳಾಪುರ | ಮಳವೆ | 1 ಬೇಳೆ | 1087 |
| | | ಸೇಡಂ | ಹಸುಬೆ | 1 ಬೆಳ್ಳಿಹಾಗ | 1138 |
| | | ಸಂತೆಕೆರೆ | ಮಳವೆ | 1 ಹಾಗ | 1141 |
| | | ಬಸವಕಲ್ಯಾಣ | ಕೊಡಿಗೆ | 1 ಬೆಳ್ಳಿಹಾಗ | 1143 |
| | | ಹೂಲಿಹಳ್ಳಿ | ಮಳವೆ | 2 ವೀಸ | 1143 |
| | | ನಿಡುಗಲ್ಲು | ಮಳವೆ | 1 ವೀಸ | 1150 |
| | | ಭಾರಂಗಿ | ಪೊನ್ | 1 ಹಾಗ | 1159 |
| | | ನಿಡುಗಲ್ಲು | ಮಳವೆ | 1 ವೀಸ | 1248 |
| | | ಗಡಿಹಳ್ಳಿ | ಹಸರ | 1 ಹಾಗ | 1278 |
| | | ನಿಡುಗಲ್ಲು | ಮಳವೆ | 1 ವೀಸ | 1292 |
| 5. | ನೂಲು | ಅಲಂಪುರ | ಮಳವೆ | $2^1/_2$ ವೀಸ | 1076 |
| | | ಹೆಗ್ಗರೆ | ಮಳವೆ | 2 ವೀಸ | 1160 |
| 6. | ಹಂಜಿ | ಹೆಗ್ಗರೆ | ಮಳವೆ | 2 ವೀಸ | 1160 |
| 7. | ಬಟ್ಟೆ | ಹೂಲಿಹಳ್ಳಿ | ಮಳವೆ | 2 ವೀಸ | 1143 |
| | | ಅಲಂಪುರ | ಕೊಡಿಗೆ | 2 ವೀಸ | 1057 |
| | | | ಕೊಡಿಗೆ | 5 ವೀಸ | 1076 |
| 8. | ಪಟ್ಟಸೂತ್ರ | ಅಲಂಪುರ | ಬಿಸಿಗೆ | 10 ವೀಸ | 1076 |
| 9. | ತೆಂಗಿನ ಕಾಯಿ | ಸಂತೆಕೆರೆ | ಹೇಱು | 2 ಕಾಯಿ | 1141 |
| | | | ಹಸುಬೆ | 1 ಕಾಯಿ | |
| | | ಬೆಳಗಾವಿ | ಹೇಱು | 1 ಕಾಯಿ | 1204 |
| | | ನಿಡುಗಲು | 100 | 1 ಕಾಯಿ | 1248 |
| | | ಗಡಿಹಳ್ಳಿ | ಹೇಱು | 2 ಕಾಯಿ | 1278 |
| | | | ಹೆಡಗೆ | 1 ಕಾಯಿ | |
| 10. | ಕುಂಕುಮ | ಬಳ್ಳಿಗಾವೆ | ಪೊನ್ | 2 ಕಾಣೆ | 1054 |
| | | ಬಸವ ಕಲ್ಯಾಣ | ಸಿದ್ದಿಗೆ | 2 ಪಣ | 1143 |
| 11. | ಬಳೆ | ಹೆಗ್ಗರೆ | ಹೇಱು | 1 ವೀಸ | 1160 |
| 12. | ಮುತ್ತು | ಬಳ್ಳಿಗಾವೆ | ಪೊನ್ | 2 ಕಾಣೆ | 1054 |
| 13. | ಮಣಿ | ಸಂತೆಕೆರೆ | ಹೇಱು | 2 ವೀಸ | 1141 |
| | | | ಹಸುಬೆ | 2 ಕಾಗಿಣೆ | |
| 14. | ಪಚ್ಚೆ | ಬಸವ ಕಲ್ಯಾಣ | ಕೊಡಿಗೆ | 1 ಬೆಳ್ಳಿಹಾಗ | 1143 |
| 15. | ಅರಗು | ಅಲಂಪುರ | ಹೇಱು | 5 ವೀಸ | 1076 |
| 16. | ಹೂವು | ಬಳ್ಳಿಗಾವೆ | ಕರಂಡಗೆ | 1 ಸರ | 1054 |
| | | ಕೊಲ್ಲಾಪುರ | ಹೆಡಗೆ | 1 ಮಾಲೆ | 1154 |

ಮೇಲಿನ ಈ ಪಟ್ಟಿಯಿಂದ ತಿಳಿದುಬರುವ ಅಂಶಗಳು ಇಷ್ಟು :

1. ಸಂತೆಯ ಸುಂಕ (ಆಯ)ವನ್ನು ಹಣ ಮತ್ತು ವಸ್ತುಗಳ ರೂಪದಲ್ಲಿ ಆಕರಿಸುತ್ತಿದ್ದರು.
2. ಸರಕು ತುಂಬಿದ ವಸ್ತುವಿಗನುಗುಣವಾಗಿ ಇದು ಹೆಚ್ಚು ಕಡಿಮೆಯಾಗಿದ್ದಿತು.
3. ಒಂದು ಶತಮಾನದಲ್ಲಿಯೇ ಸಂತೆ ಆಯದಲ್ಲಿ ಕೆಲವು ಕಡೆ ಏಕರೂಪತೆ, ಇನ್ನು ಕೆಲವು ಕಡೆ ಬಹುರೂಪತೆ ಇದ್ದುದು ಕಂಡುಬರುತ್ತದೆ.
4. ಆಯಾ ಸಂತೆ-ಪೇಟೆ, ಪಟ್ಟಣಗಳಿಗೆ ಬರುತ್ತಿದ್ದ ಅಲ್ಲಿ ಬೆಳೆಯುತ್ತಿದ್ದ ಸರಕುಗಳು ಮತ್ತು ಇವುಗಳ ಪ್ರಮಾಣ ಗೊತ್ತಾಗುವುದು.[182]

ವರ್ತಕರು ಅದೇ ಸಂತೆಯಲ್ಲಿ ತಮ್ಮ ವ್ಯಾಪಾರಕ್ಕೋಸ್ಕರ ಬೇಕಾದ ಸರಕು ಖರೀದಿಸಿದರೂ ತೆರಿಗೆ ಸಲ್ಲಿಸುತ್ತಿದ್ದರು. ಖರೀದಿಸಿದ ಸಾಮಾನುಗಳನ್ನು ಅನ್ಯ ಸ್ಥಳಗಳಿಗೆ ಸಾಗಿಸುವಾಗ ಮತ್ತೆ ಸುಂಕ ಕೊಡುವ ಪ್ರಸಂಗ ಬರುತ್ತಿದ್ದುದನ್ನು ಸಂಸಿ ಶಾಸನ[183] ತಿಳಿಸುತ್ತದೆ. ಹೀಗೆ ಸಂತೆಯಲ್ಲಿ ಆಯದಧಿಕಾರಿಯಿಂದ ಸಂಗ್ರಹಗೊಂಡ ಸಂತೆಯ ಆಯ ; ಮಾರಾಟಕರ, ಅಂಗಡಿ ಆಯ ಹಾಗೂ ಸೆಟ್ಟಿದೆಱೆ, ಸೆಟ್ಟಿವಣ, ವರ್ತಕರ ಸುಂಕ (ವರ್ತಕರ ಮೇಲಿನ ತೆರಿಗೆ), ಎತ್ತಿನ ಸುಂಕ, ಮೆಯಿದೆರೆ, ಗಾಡಿಯ ಸುಂಕ, ಬಂಡಿದೆರೆ, ಕೀಳ್ವಟ್ಟೆಸುಂಕ, ಮೇಲ್ವಟ್ಟೆ ಸುಂಕ (ಸಾರಿಗೆ ತೆರಿಗೆ), ನೆಲಮೆಟ್ಟು (ಕುದುರೆ ಅಥವಾ ಬೇರೆ ಪ್ರಾಣಿ ಕಟ್ಟುವ ಸ್ಥಳದ ಮೇಲಿನ ಸುಂಕ)ಗಳು ರಾಜ ಭಂಡಾರಕ್ಕೆ ಸಂದಾಯವಾಗುತ್ತಿದ್ದವು. ಶಾಸನಗಳಲ್ಲಿ ಗಂಗಣ ನಾಯಕ, ಕೇಶವದೇವ, ಚಟ್ಟಮರಸ ಇತ್ಯಾದಿ ಪ್ರಮುಖ ಆಯದ ಅಧಿಕಾರಿಗಳ ಹೆಸರುಗಳು ಕಂಡುಬರುತ್ತವೆ.[184] ವರ್ತಕರು ಯಾವ ಬೆಲೆಗೆ ಯಾವ ಯಾವ ವಸ್ತು ಮಾರುತ್ತಿದ್ದರೆಂಬ ಅಂಶ ಮಾತ್ರ ಗೊತ್ತಾಗುವುದಿಲ್ಲ. ಆದರೆ ಪಂಪ ಭಾರತದ[185] 'ಸೆಟ್ಟಿಯ ಬಳ್ಳಂ ಕಿರಿದು', ಸಮಯ ಪರೀಕ್ಷೆಯ[186]

*ತುಪ್ಪದೊಳಗೆಣ್ಣೆಯಂ ಲೇ*
*ಸಪ್ಪಾ ಹೊನ್ನೊಳಗೆ ಬೆಳ್ಳಿಯಂ ಧನದಳುಪಿಂ*
*ದುಪ್ಪಿನೊಳು ಮಣ್ಣನೆಂತುಂ*
*ತಪ್ಪಿಲ್ಲದೆ ನಡೆವನೆಂಬಾಗಲ್ ಬೆರಸಲ್ ॥*
*ಪಿರಿದಪ್ಪ ಕೋಲ್ಗಳಿಂದಂ*
*ಪಿರಿದೆನಿಸಿದ ಕೊಳಗದಿಂದ ಮುಂ ತಾಂ ಕೊಂಡಂ*
*ತಿರೆ ಪರರ್ಗೆ ಕುಡುಗೆ ಕುಂದಿಸಿ*
*ಪರದುಗೆಯಲ್ಲಲ್ಲದು ...... ॥*

ಧರ್ಮಾಮೃತದ 'ಶುದ್ಧವಾದ ಹೊನ್ನಿನಲ್ಲಿ ಕಿಸುಬೆಳ್ಳಿಯನ್ನು ಬೆರಸಿ, ಪೆರರ ಕಣ್ಗಟ್ಟಿ, ಮೇಲಾದ ಪೊನ್ನೆಂದು ತೋರಿಸಿ, ಲಾಭದಾಸೆಗಾಗಿ, ಮಾರುವ ಪರದರು,'[187] ಬಸವಣ್ಣನವರ ವಚನವೊಂದರ 'ಮಸಿಯ ಹೂಸಿ ನೇರಿಲಹಣ್ಣು ಮಾರುವಂತೆ'[188] ಮಾತುಗಳಿಂದ ವ್ಯಾಪಾರದಲ್ಲಿ ನಡೆಯುತ್ತಿದ್ದ ಮೋಸ, ವಂಚನೆಗಳ ಪರಿಚಯವಾಗುತ್ತದೆ.

## 4.7. ವರ್ತಕರು

ವ್ಯಾಪಾರವನ್ನು ಮತ್ತು ವ್ಯಾಪಾರವನ್ನೇ ವೃತ್ತಿಯಾಗಿಸಿಕೊಂಡವರು ವರ್ತಕರು. ಭಾರತದಲ್ಲಿ ವೈದಿಕ ಸಾಹಿತ್ಯ ಮೊದಲು ಮಾಡಿ ಇತಿಹಾಸದುದ್ದಕ್ಕೂ ಇವರ ಉಲ್ಲೇಖ ಕಂಡುಬರುತ್ತದೆ. ಆದರೆ ಕರ್ನಾಟಕದ ಶಾಸನಗಳಲ್ಲಿ ಮಾತ್ರ ಇವರ ಉಲ್ಲೇಖ 7-8ನೆಯ ಶತಮಾನದಿಂದ ಇಂದಿನವರೆಗೆ ವ್ಯಾಪಿಸಿ ನಿಂತಿದೆ. ಈ ಭಾರತೀಯ ವರ್ತಕರಲ್ಲಿರುವಂತೆ ಪ್ರಾಚೀನ ಹಾಗೂ ಮಧ್ಯಕಾಲೀನ ಕರ್ನಾಟಕದ ವರ್ತಕರಲ್ಲಿಯೂ ಅನೇಕ ಪ್ರಕಾರಗಳಿದ್ದವು. ಇವರನ್ನು

1. ವಿನಿಮಯ ವರ್ತಕರು
2. ಉತ್ಪಾದಕ ವಿನಿಮಯ ವರ್ತಕರು ಎಂದು ವಿಭಾಗಿಸಬಹುದು.

### 4.7.1. ಉತ್ಪಾದಕ ವಿನಿಮಯ ವರ್ತಕರು

ಗೃಹ ಕೈಗಾರಿಕೆಗಳ ಮೂಲಕ ತಾವೇ ಉತ್ಪಾದಿಸಿದ ವಸ್ತುಗಳನ್ನು ತಾವೇ ಮಾರಾಟ ಮಾಡುವ ವರ್ತಕರಿವರು. ಆದುದರಿಂದ ಇವರು ಉತ್ಪಾದಕರೂ ಹೌದು ವರ್ತಕರೂ ಹೌದು. ಹೀಗೆ ಉತ್ಪಾದನೆ - ಮಾರಾಟ ಎರಡೂ ಕಾರ್ಯಗಳನ್ನು ಇವರೇ ನಿರ್ವಹಿಸುತ್ತಿದ್ದರು. ಕುಂಬಾರ, ಅಕ್ಕಸಾಲಿ, ತೆಲ್ಲಿಗ, ನೇಕಾರ, ಸಮಗಾರ, ಮೇದ ಮುಂತಾದವರು ಈ ವರ್ತಕ ಗುಂಪಿನಲ್ಲಿ ಬರುತ್ತಾರೆ.

ಶಾಸನಗಳು 'ಕುಂಬಾರ ಕಂಬಿಗೆ ಮಡಕೆ ಒಂದು'[189], 'ಕುಂಬಾಱರಲ್ಲಿ ಹಸ[ರ]ಕ್ಕೆ ಮಡಕೆವೊನ್ದು',[190] 'ಅಕ್ಕಸಾಲೆ ಬಮ್ಮೋಜಹಳ್ಳದಿಂ ಮೂಡ ಹೊಂಗೆ ಹಣಂ',[191] 'ಮಾದಿಗರಲ್ಲಿ ಆಱುದಿಂಗಳಿಂಗೆ ಕುಡುವ ಮಿಳಿ ೧',[192] 'ಸಮ್ಮಗಾರಱಲ್ಲಿ ಆಱುದಿಂಗಳಿಂಗೆ ಕುಡುವ ಪಾದರಕ್ಷೆ ತೊಡೊಂದು',[193] 'ಮೇದರಲ್ಲಿ ಸಂತೆಗೆ ಕುಡುವ ಮೊಱ',[194]

'ಕುಂಬಾರರ ಕಂಪೆಗೆ ಮಡಕೆ ೧'[195] ಎಂಬ ಶಾಸನೋಲ್ಲೇಖಗಳಿಂದ ಕುಂಬಾರ, ಅಕ್ಕಸಾಲಿ, ಮಾದಿಗ, ಸಮಗಾರ, ಮೇದ ಮೊದಲಾದವರು ತಾವು ತಯಾರಿಸಿದ ಮಡಕೆ, ಮಿಣಿ, ಪಾದರಕ್ಷೆ, ಮೊರಗಳನ್ನು ಸಂತೆಗಳಿಗೆ ಒಯ್ದು ಮಾರುತ್ತಿದ್ದುದು ಸ್ಪಷ್ಟವಾಗುವುದು ಹಾಗೂ ಸಂತೆ ಸುಂಕವಿದ್ದುದರಿಂದ ತಾವು ತೆಗೆದುಕೊಂಡು ಹೋದ ವಸ್ತುಗಳಲ್ಲಿ ಒಂದು, ಎರಡನ್ನು ತೆರಿಗೆಯಾಗಿ ಕೊಡುತ್ತಿದ್ದರು. ಕೆಲವು ಶಾಸನಗಳಂತೂ ಈ ವರ್ತಕರನ್ನು ಮಾತ್ರ ಉಲ್ಲೇಖಿಸುತ್ತವೆ.

ಕ್ರಿ. ಶ. 1118ರ ಲಕ್ಷ್ಮೇಶ್ವರ ಶಾಸನವು[196] 'ಗವಱೆ ರಾಜಸೆಟ್ಟಿ ಓಲೆಯ ಚಟ್ಟಿಸೆಟ್ಟಿ ಚುಂಗ [ರ ಕಾ]ಳಿಸೆಟ್ಟಿ ಚುಂಗರ ರೇವಿಸೆಟ್ಟಿ ಗನ್ದಿಗ ರೇವಿಸೆಟ್ಟಿ ಮುಖ್ಯವಾಗಿ ಮು[೦]ಮುರಿದಣ್ಣಮುಮಿರ್ದ್ದು ರಾಮೇಸ್ವರ ದೇವರಂಗ ಭೋಗಕ್ಕೆ ಹಸುಂಬೆ [ಗೆ] ಹಾಗವಂ ಸ್ಥಾಯಿಯಾಗಿ ಬಿಟ್ಟರು' ಎಂದು ಉಲ್ಲೇಖಿಸುತ್ತದೆ. ಚುಂಗರ ಕಾಳಿಸೆಟ್ಟಿ ಹಾಗೂ ಚುಂಗರ ರೇವಿಸೆಟ್ಟಿ ಹೆಸರುಗಳು ನೇಕಾರರಲ್ಲಿದ್ದ ವ್ಯಾಪಾರಿಗಳನ್ನು ಹೆಸರಿಸುತ್ತದೆ. ಕೇವಲ ನೇಯುತ್ತಿದ್ದುದಲ್ಲದೇ ನೇಯ್ದ ಬಟ್ಟೆಗಳನ್ನು ತಂದು ಬೇರೆಡೆಗೆ ಇತರ ವರ್ತಕರ ಜೊತೆಗೂಡಿ ಮಾರಾಟ ಮಾಡುತ್ತಿದ್ದಿರಬಹುದೆಂದು ಈ ಶಾಸನೋಲ್ಲೇಖದಿಂದ ಊಹಿಸಬಹುದು.

ನೇಕಾರರಲ್ಲಿ ಬಟ್ಟೆಯನ್ನು ನೇಯುವ ವರ್ಗ ಒಂದಾದರೆ ನೇಯ್ದ ಬಟ್ಟೆಯನ್ನು ಮಾರಾಟ ಮಾಡುತ್ತಿದ್ದ ಮತ್ತೊಂದು ವರ್ಗ ಇತ್ತೆಂಬುದು ನಮಗೆ ದೂಸಿಗ ಕೇತಿಸೆಟ್ಟಿ[197] ಮೊದಲಾದ ನಾಮ ವಿಶೇಷಣಗಳಿಂದ ಶಾಸನಗಳ ಮೂಲಕ ಖಚಿತವಾಗಿ ತಿಳಿಯಬಹುದು.

ಡಾ. ಬಿ.ಆರ್. ಹಿರೇಮಠರವರು[198] ನೇಕಾರರಿಗೆ ಸಂಬಂಧಿಸಿದಂತೆ ಸಂತೆಯಲ್ಲಿ ದೇವಸೀರೆ, ನೂಲು, ಪಟ್ಟಸೂತ್ರಗಳ ಮೇಲೆ ಆಕರಿಸುತ್ತಿದ್ದ 'ಸಂತೆಯ ಆಯ' ಹಾಗೂ ಕೋಲಾರ ಶಾಸನದ 'ನೆಇಗಾರ ಸೆಟ' ಪದಗಳು ಸಾಲಿಗರು ಮತ್ತು ಪಟ್ಟಸಾಲಿಗರು ಮಗ್ಗದ ಮೂಲಕ ನೇಯ್ದು ತಯಾರಿಸಿದ ಬಟ್ಟೆಗಳನ್ನು ಸಂತೆಯಲ್ಲಿ ಮಾರುತ್ತಿದ್ದರೆಂದು ಹೇಳುತ್ತವೆ ಎಂದು ಅಭಿಪ್ರಾಯಿಸುತ್ತಾರೆ.

ಈ ಹಿನ್ನೆಲೆಯಲ್ಲಿ ನೇಕಾರರು ಉತ್ಪಾದಕ - ವಿನಿಮಯ ವರ್ತಕರಾಗಿ ಕಂಡುಬರುತ್ತಾರೆ.

ತೆಲ್ಲಿಗರು ಎಣ್ಣೆಕಾಳುಗಳನ್ನು ಬೆಳೆದ ಕೃಷಿಕರಿಂದ ಖರೀದಿಸಿ ಎಣ್ಣೆಯನ್ನು ಮಾಡಿ ಅದನ್ನು ತಾವೇ ಸ್ವತಃ ಮಾರಿ ಜೀವಿಸುತ್ತಿದ್ದರು. ಯಾವ ಶಾಸನದಲ್ಲೂ ಇವರು ಬಾಡಿಗೆಗೆ ಎಣ್ಣೆ ತೆಗೆದುಕೊಡುವ ಕೆಲಸ ಮಾಡಿದ ಉಲ್ಲೇಖವಿಲ್ಲ, ಹಾಗಾಗಿ ಎಳ್ಳು ಬೆಳೆದವರು ಬಾಡಿಗೆ ಕೊಟ್ಟು ಎಣ್ಣೆ ಮಾಡಿಸಿಕೊಂಡು ಹೋಗುವ ಪದ್ಧತಿ ಅಸ್ತಿತ್ವದಲ್ಲಿದ್ದುದಕ್ಕೆ

ಶಾಸನಾಧಾರವಿಲ್ಲ. ಕೆಲವು ಶಾಸನಗಳಲ್ಲಿ ಎಳ್ಳು ಮಾರುವವರು ಪಡೆದ ಆದಾಯದ ಮೇಲೆ ಹಾಗೂ ಆ ಎಳ್ಳನ್ನು ಎಣ್ಣೆ ಮಾಡಿ ಪಡೆದ ಆದಾಯದ ಮೇಲೆ ತೆರಿಗೆ ಹಾಕಿ ಪ್ರತ್ಯೇಕವಾಗಿ ದಾನ ಮಾಡಿದ್ದು ಕಂಡುಬರುತ್ತದೆ. ಕುಡುತಿನಿ ಶಾಸನ[199] ವೊಂದರಲ್ಲಿ 'ತೆಲ್ಲಿಗರು ಎಳ್ಳ ಮಾಱ ಕೊಂಡವಗು ಹೊಂಗೆ ಕಟ್ಟದಲಗಿನ ಚಿಕ್ಕ ತಾರವ ತೆಱುವರು ಬೆಳಿಯ ತಾರದರ್ಧದ II ಎಣ್ಣೆಯನು ಗಾಣಕ್ಕೆ ನಿಚ್ಚಲು ಅರ್ಧಸೊಲ್ಲಿಗೆಯನು ಆಡಿತಕ್ಕೆ ಎಱೆವರು II' ಈ ಉದಾಹರಣೆಯಲ್ಲಿ ತೆಲ್ಲಿಗರೇ ಎಳ್ಳು ಮಾರುತ್ತಿದ್ದವರು ಎಂಬ ಅಭಿಪ್ರಾಯ ಬರುತ್ತದೆ. ಹೀಗೆ ಎಳ್ಳು ಮಾರಿಕೊಂಡವರು ಒಂದು ಹೊನ್ನಿಗೆ ಬೆಳ್ಳಿಯ ತಾರದ ಅರ್ಧತಾರವನ್ನು ಉಳಿಸಿಕೊಂಡು ದೇವಾಲಯಕ್ಕೆ ಕೊಡುವರು ಹಾಗೂ ನಿತ್ಯವು ಅರ್ಧ ಸೊಲ್ಲಿಗೆಯಷ್ಟು ಎಣ್ಣೆಯನ್ನು ಗಾಣ ಆಡಿಸಿದ್ದಕ್ಕೆ ತೆರಲಾಗುತ್ತಿತ್ತು.

ಈ ರೀತಿ ಎಲ್ಲಾ ತೆಲ್ಲಿಗರು ಎಣ್ಣೆ ಉದ್ಯಮದವರೇ ಆಗಿದ್ದರೂ ನಿಜವಾದ ಅರ್ಥದಲ್ಲಿ ಗಾಣಿಗರು ಎಣ್ಣೆಯ ಉತ್ಪಾದನೆ ಮಾಡುವವರೆಂದು ತಿಳಿಯಬಹುದು.

ತೆಲ್ಲಿಗರಲ್ಲೇ ಎಣ್ಣೆಯನ್ನು ಉತ್ಪಾದನೆ ಮಾಡುವ ವರ್ಗ ಒಂದಾದರೆ ಉತ್ಪಾದಿಸಿದ ಎಣ್ಣೆಯನ್ನು ಮಾರಾಟ ಮಾಡುತ್ತಿದ್ದ ವರ್ಗ ಮತ್ತೊಂದು ಇತ್ತೆಂಬುದು ನಮಗೆ ತೈಲಿಗ ಸೆಟ್ಟಿ[200], ತೆಲ್ಲಿಗ ಸೋಯಿಸೆಟ್ಟಿ[201], ತೆಲಿಗ ಐಬಿಸೆಟ್ಟಿ[202], ಮೊದಲಾದ ನಾಮ ವಿಶೇಷಣಗಳಿಂದ ಶಾಸನಗಳ ಮೂಲಕ ಖಚಿತವಾಗಿ ತಿಳಿಯಬಹುದು. ಯೋಧ ವೃತ್ತಿಯವರಿದ್ದಂತೆ ತೆಲ್ಲಿಗರಲ್ಲಿ ವ್ಯಾಪಾರಸ್ಥರು ಇದ್ದುದು ಕೆಲ ಶಾಸನಗಳಲ್ಲಿ ಕಂಡುಬರುತ್ತದೆ. ಬೇಲೂರಿನ ಒಂದು ಶಾಸನದಲ್ಲಿ[203] ಗಾಣಿಗರ ಚೆಂನಿಸೆಟ್ಟಿಯ ಮಗ ಸುರಿಸೆಟ್ಟಿ ಎಂದು ಉಲ್ಲೇಖವಿದೆ. ಮತ್ತೆ ಒಂದು ಕಡೆ ಮುಳುಗುಂದ ಶಾಸನದಲ್ಲಿ[204] 'ಗವರೆ ತೈಲಿಸೆಟ್ಟಿ' ಎಂಬ ಪ್ರಯೋಗ ಬರುತ್ತದೆ. ಇಲ್ಲಿ ತೈಲಿಸೆಟ್ಟಿ ಎಂಬುದು ವ್ಯಕ್ತಿಯ ಹೆಸರೋ, ವೃತ್ತಿಯ ಹೆಸರೋ ಎಂಬುದು ಸ್ಪಷ್ಟವಿಲ್ಲ. ಇಷ್ಟೇ ಅಲ್ಲದೆ ಈ ಸೆಟ್ಟಿಗಳು ಊರಿಂದೂರಿಗೆ ತಿರುಗಾಡಿ ಹೊರಗಡೆಯು ಸಹ ಎಣ್ಣೆಯನ್ನು ಮಾರಾಟ ಮಾಡುತ್ತಿದ್ದರು. ಶಾಸನಗಳಲ್ಲಿ 'ಹೊರ(ಗ)ಣಿಂ ಬಂದು ಮಾಱುವ ಹಾಗಕೆ ಸೊಟಿಗೆ ಯೆಂಣೆಯಂ'[205], 'ಬೇಱೂರಿಂದ ಬಂದು ಮಾಱುವ ಎ(ಂ)ಣ್ಣೆ'[206], 'ಬೇಱೂರಿಂ ಮಾರಲು ಬಂದೆಣ್ಣೆ'[207], 'ತೆಲ್ಲಿಗರಲ್ಲಿ ಎಣ್ಣೆ ಹೊಱಗೆ ಬಂದು ಮಾರುವವ'[208] ಹೀಗೆಲ್ಲ ಉಲ್ಲೇಖಗಳಿವೆ. ಇದರಿಂದ ಬೇರೆ ಊರುಗಳಿಂದ ಎಣ್ಣೆಯನ್ನು ಮಾರಲು ಕೂಡ [209] ಹಾಡಗಳಲ್ಲಿ[210] ಎತ್ತು, ಕತ್ತೆ, ಕೋಣ ಅಥವಾ ಹೆಗಲ ಮೇಲೆ ಹೊತ್ತುಕೊಂಡು ಬರುತ್ತಿದ್ದರು. ಅಂದು ಸಹ ಈಗಿನಂತೆ ಸಂತೆಗಳು ನಡೆಯುತ್ತಿದ್ದು ಆ ಸಂತೆಗಳಲ್ಲಿ ಕೊಡಗಳಲ್ಲಿ ಎಣ್ಣೆಯನ್ನು ಇಟ್ಟುಕೊಂಡು ಮಾರಲಾಗುತ್ತಿದ್ದ

ವಿಷಯವನ್ನು ನಮಗೆ ಕಂದಗಲ್‌ನ ಒಂದು ಶಾಸನ [211] ತಿಳಿಸುತ್ತದೆ. ಅಲ್ಲದೆ ಮುಳುಗುಂದ ಶಾಸನ [212]ವೊಂದು 'ದೇವರ ನಿತ್ಯ ನಿವೇದ್ಯ ನಂದಾದೀವಿಗೆಗೆ ಗಾಣಕ್ಕೆ ಅರವನದ ಸೊಟಿಗೆ ಯೆಣ್ಣೆ ಸಂತೆಯೊಳಗೆ ಕೊಡಕ್ಕೆ ಸೊಲ್ಲಗೆ ಸೊಟಿಗೆ ಯೆಣ್ಣೆಯೊಂದುಮಂ' ಎಂದು ತಿಳಿಸುವುದರಿಂದ ಕೊಡದಲ್ಲಿ ತುಂಬಿಟ್ಟುಕೊಂಡು ಮಾರಲಾಗುತ್ತಿದ್ದ ಎಣ್ಣೆಯಲ್ಲಿ ಸೊಲ್ಲಗೆ ಸೊಟಿಗೆ ಮಾನದಲ್ಲಿ ಯೆಣ್ಣೆಯನ್ನು ದೇವರಿಗೆ ಕೊಡಲಾಗುತ್ತಿತ್ತು ಎಂದು ತಿಳಿಯಬಹುದು.

ಈ ವರ್ಗದ ತೆಲ್ಲಿಗರು ತಮಗೆ ಬಂದ ಲಾಭದ ಆಧಾರದ ಮೇಲೆ ಸೊಲ್ಲಿಗೆ, ಸೊಟ್ಟಿಗೆ, ಅರವನ ಎಣ್ಣೆಯನ್ನು ಆ ಊರಿನ ದೇವಾಲಯದ ನಂದಾದೀಪಕ್ಕೆ ಕೊಡುತ್ತಿದ್ದರು. ಧಾರವಾಡದ ಒಂದು ಶಾಸನ [213] 'ತಡಕೋಡ ಸೋಇಸೆಟ್ಟಿ ಉಂಮಚಿಗೆಯ ಸೇನಿಸೆಟ್ಟಿ ಹದ್ದಲ ಕಲ್ಲಿಸೆಟ್ಟಿ ಹಳ್ಳಂಗೆಱೆಯ ರಾಮಿಸೆಟ್ಟಿ ನೀರುಸಾಗರದ ಸೋಮಿಸೆಟ್ಟಿ ಕಲ್ಲಿಸೆಟ್ಟಿ ಇಂತಿವರು ಮುಖ್ಯವಾಗಿ ಮಣಿಗುಂಡಗೆಯ ಅಯ್ವತ್ತೊಕ್ಕಲು ಆ ಸ್ಥಳದ ಮುಗಿಲೊಳಗಣ ನಗರ ಜಿನಾಲಯಕ್ಕೆ ಸೊಂಟಿಗೆ ಯೆಂಣೆಯ ಬಿಟ್ಟರು' ಎಂದು ಉಲ್ಲೇಖಿಸುತ್ತದೆ. ಈ ಶಾಸನದಿಂದ ಕೇವಲ ಸೆಟ್ಟಿಯ ವರ್ಗದವರದೆ ಪ್ರತ್ಯೇಕ ಅಯ್ವತ್ತೊಕ್ಕಲ ಸಂಘಟನೆ ಇದ್ದಿರಬಹುದು ಎಂದು ಊಹಿಸಬಹುದು ಮತ್ತು ಇವರು ಜಿನಾಲಯಕ್ಕೂ ಸೊಂಟಿಗೆ ಯೆಂಣೆಯನ್ನು ಕೊಟ್ಟ ವಿಷಯವನ್ನು ತಿಳಿಯಬಹುದು. ಇದೇ ಮಣಿಗುಂದಗೆಯ ತೆಲ್ಲಿಗರ ಐವತ್ತೊಕ್ಕಲಿನವರು ಎಣ್ಣೆ ಉತ್ಪಾದಿಸುತ್ತಿದ್ದ ಗಾಣಕ್ಕೆ ಸೊಟಿಗೆ ಯೆಂಣೆಯನ್ನು ಮತ್ತು ತಾವು ಹೊರಗಡೆ ತಂದು ಮಾರಾಟ ಮಾಡುತ್ತಿದ್ದ ಅಳತೆಯಷ್ಟು ಪ್ರಮಾಣದ ಎಣ್ಣೆಯನ್ನು ಧಾರಾಪೂರ್ವಕವಾಗಿ ಚಂದ್ರಭೂಷಣ ದೇವರಿಗೆ ಕೊಟ್ಟ ವಿಷಯವನ್ನು ಧಾರವಾಡದ ಮತ್ತೊಂದು ಶಾಸನ [214] ತಿಳಿಸುತ್ತದೆ.

ತೆಲ್ಲಿಗರಲ್ಲಿ ಎಣ್ಣೆಯನ್ನು ಊರೂರಿಗೆ ತೆಗೆದುಕೊಂಡು ಹೋಗಿ ಮಾರಾಟ ಮಾಡುತ್ತಿದ್ದ ವರ್ಗವು ಇತ್ತು ಹಾಗೂ ಆಯಾ ಊರುಗಳಲ್ಲೇ ಮಾರಾಟ ನಡೆಸುತ್ತಿದ್ದವರು ಇದ್ದರು. ಬಹುಶಃ ಇವರೆಲ್ಲರನ್ನು ಸೆಟ್ಟಿಗಳೆಂದು ಕರೆದಿರುವಂತೆ ತೋರುತ್ತದೆ. ಈ ಸೆಟ್ಟಿಗಳಲ್ಲಿ ನಖರಶ್ರೇಣಿ [215] ಎಂಬ ಸಂಘಟನೆ ಬಳಕೆಯಲ್ಲಿತ್ತೆಂದು ಕೆಲ ಶಾಸನಗಳು ಉಲ್ಲೇಖಿಸುತ್ತವೆ. ಮಣಿಗುಂಡಗೆಯ ಮತ್ತೊಂದು ಶಾಸನದಲ್ಲಿ ಇವರು ಆಶ್ರಯ ನೀಡಿದ ನಗರ ಜಿನಾಲಯಕ್ಕೆ ಅನೇಕ ಸೆಟ್ಟಿಗಳು ಸೊಂಟಿಗೆ ಎಣ್ಣೆಯನ್ನು ಬಿಟ್ಟಿದ್ದರು.

ಈ ಎಲ್ಲಾ ಶಾಸನಗಳ ಹಿನ್ನೆಲೆಯಲ್ಲಿ ಬಹುತೇಕ ಮೇಲೆ ಉಲ್ಲೇಖಿಸಲಾಗಿರುವ ಕುಶಲಕರ್ಮಿಗಳು ಮಧ್ಯಕಾಲೀನ ಕರ್ನಾಟಕದಲ್ಲಿ ತಾವು ಉತ್ಪಾದಿಸಿದ ಉತ್ಪಾದನಾ ವಸ್ತುಗಳನ್ನು ನೇರವಾಗಿ ತಾವೇ ಮಾರಾಟ ಮಾಡುತ್ತಿದ್ದರೆಂಬುದು ಗೊತ್ತಾಗುತ್ತದೆ.

### 4.7.2. ವಿನಿಮಯ ವರ್ತಕರು

ಈ ವರ್ತಕರು ಉತ್ಪಾದಕ ವರ್ಗದಿಂದ ಕೊಂಡು ತಾವು ಮಾರಾಟಮಾಡುತ್ತಿದ್ದರು. ಇಂಥಹವರನ್ನು ಶಾಸನಗಳು 'ಸೆಟ್ಟಿ'ಗಳೆಂಬುದಾಗಿ ಕರೆದಿರುತ್ತವೆ. ಸಂಸ್ಕೃತದ 'ವಣಿಜ', 'ಶ್ರೇಷ್ಠನ್' ಪದಗಳ ಕನ್ನಡ ರೂಪ 'ಬಣಂಜಿಗ', 'ಸೆಟ್ಟಿ', ಮೂಲದಲ್ಲಿ ವಣಿಜ (> ಬಣಂಜಿಗ) ವೃತ್ತಿಸೂಚಿ. ಶ್ರೇಷ್ಠನ್ (> ಸೆಟ್ಟಿ) ಪ್ರತಿಷ್ಠಾ ಸೂಚಿಯಾಗಿದ್ದು ಕ್ರಮೇಣ ಈ ಎರಡೂ ಪದಗಳು ವೃತ್ತಿವಾಚಿಯಾಗಿ ನಂತರ ಜಾತಿ ಸೂಚಕವಾಗಿ ಬೆಳೆದವು.[216] 'ಸೆಟ್ಟಿ', 'ಬಣಂಜಿಗ 'ದ ಸಮಾನಾರ್ಥ ಪದಗಳು. ಇವರು ಸರಕುಗಳನ್ನು ಎತ್ತು, ಕತ್ತೆ, ಕೋಣಗಳ ಮೇಲೆ ಹೇರಿಕೊಂಡು, ತಲೆಯ ಮೇಲೆ ಹೊತ್ತುಕೊಂಡೂ ಹೋಗಿ ಸಂತೆ ಪಟ್ಟಣಗಳಲ್ಲಿ ವ್ಯಾಪಾರ ಮಾಡುತ್ತಿದ್ದರು. ಸರಕನ್ನು ಎತ್ತಿನ ಮೇಲೆ ಹೇರಿಕೊಂಡು, ತಮ್ಮ ತಲೆಯ ಮೇಲೆ ಹೊತ್ತುಕೊಂಡು ಮಾರುವ ಸೆಟ್ಟಿಯರ ಚಿತ್ರವೊಂದು ಸುಂಕದ ಬಂಕಣ್ಣನ ವಚನವೊಂದರಲ್ಲಿ ಹೀಗೆ ಉಲ್ಲೇಖಗೊಂಡಿದೆ.[217]

*ಸಾಕಾರವೆಂಬ ಸೆಟ್ಟಿ, ಜೀವವೆಂಬ ಎತ್ತಿನ ಮೇಲೆ*
*ಎತ್ತಿ ಹೊಡೆಯಲಾಗಿ, ಬಹುವಿಧ ಚರಿತ್ರದ ಭೇದ*
*ಬೆವಹಾರದ ಒಡೆಯಂಗೆ ಕೂಡಿ,*
*ಕರಣಂಗಳೆಂಬ ಸರಕ ಹೊತ್ತು ಮಾರುವ ಸೆಟ್ಟಿಗಳೆಲ್ಲರೂ*
*ಕೊಡಿ ಬಂಕೇಶ್ವರಲಿಂಗಕ್ಕೆ ಸುಂಕವ.*

ಶಾಸನವೊಂದು[218] 'ಹೇಱುವ ಬಣಂಜಿಗರು' ಎಂದು ಉಲ್ಲೇಖಿಸುತ್ತದೆ. ಇದಲ್ಲದೆ ಎತ್ತಿನ ವಣಿಜರು, ಕೋಣನ ಸೆಟ್ಟಿ, ಕತ್ತೆಯ ಸೆಟ್ಟಿ, ಬಣಂಜಿಗ ಸೆಟ್ಟಿಯರೆಂದೂ[219] ಇವರು ಖ್ಯಾತರಾಗಿದ್ದಾರೆ.

ಕರ್ನಾಟಕವು ವ್ಯಾಪಾರದಲ್ಲಿ ಬಹಳ ಪ್ರಮುಖ ಸ್ಥಾನವನ್ನು ಪಡೆದಿದ್ದಿತೆಂಬುದಕ್ಕೆ ಅನೇಕ ಶಾಸನಗಳು ಸಾಕ್ಷಿಗಳಾಗಿವೆ. ಅಯ್ಯಾವಳೆಯ ಐನೂರ್ವರು ಎಂಬ ಮಾತು ಶಾಸನಗಳಲ್ಲಿ ಸಿಕ್ಕುತ್ತವೆ.[220] ಅಯ್ಯಾವಳೆ ಎಂದರೆ ಈಗಿನ ಐಹೊಳೆ ಅದು ಕರ್ನಾಟಕದಲ್ಲಿ ದೊಡ್ಡ ವ್ಯಾಪಾರ ಕೇಂದ್ರವಾಗಿತ್ತು. ಕೇವಲ ಕರ್ನಾಟಕಕ್ಕೆ ಮಾತ್ರವಲ್ಲ, ಇಡೀ ದಕ್ಷಿಣ

ಭಾರತದ ವ್ಯಾಪಾರವನ್ನೆಲ್ಲಾ ಇಲ್ಲಿನ ವರ್ತಕರು ನಿಯಂತ್ರಿಸುತ್ತಿದ್ದರು. ಹಾಗೆಯೇ ಸಿರಸಂಗಿ ಅಥವಾ ಹಿರಿಸಂಗಿಯು ಸಹ, ದೇಶದ ನಾನಾ ಭಾಗಗಳಿಂದ ವರ್ತಕರನ್ನು ಆಕರ್ಷಿಸುವ ಕೇಂದ್ರವಾಗಿತ್ತೆಂಬುದು ಅಲ್ಲಿ ದೊರೆತಿರುವ ಒಂದು ಶಾಸನದಿಂದ ತಿಳಿದುಬರುತ್ತದೆ.[221] ಬಳ್ಳಿಗ್ರಾಮ ಅಥವಾ ಬಳ್ಳಿಗಾವೆಯೂ ವರ್ತಕರ ಪ್ರಮುಖ ಕೇಂದ್ರವಾಗಿತ್ತು.[222] ವಿಜಯನಗರ ಕಾಲದಲ್ಲಿಯೂ ಈ ವರ್ತಕರ ವೀರಬಣಂಜು ವ್ಯವಸ್ಥೆ (Guilds) ಪ್ರಮುಖವಾಗಿದ್ದು, ಅದು ರಾಜ್ಯದ ವ್ಯಾಪಾರವನ್ನೆಲ್ಲಾ ನಿಯಂತ್ರಿಸುತ್ತಿದ್ದಂತೆ ತೋರುತ್ತದೆ.[223] ವ್ಯಾಪಾರದ ವ್ಯಾಪ್ತಿ, ತೆರಿಗೆ ಪ್ರಮಾಣ, ಅಳತೆ, ತೂಕ, ಈ ಮೊದಲಾದ ವಿವರಗಳೆಲ್ಲವೂ ಕೆಲವು ಶಾಸನಗಳಲ್ಲಿ ಬರುತ್ತವೆ. ಉದಾಹರಣೆಗೆ ಬೆಳಗಾವಿಯ ಈ ಶಾಸನವನ್ನು ನೋಡಬಹುದು.[224]

'.... ಮತ್ತಂ ಸ್ವಸ್ತ್ಯನೇಕ ಗುಣಗಣಾಳಂಕೃತ ಸತ್ಯಶೌಚಾಚಾರ ನಯ ವಿನಯ ಸಂಪನ್ನರುಮಾಶ್ರಿತ ಜನಪ್ರಸನ್ನರುಂ, ಮಘಪಟ್ಟಪುರ ಪ್ರತಿಷ್ಠಿತ ಜಿನಮುನಿ ಜನೋಪದಿಷ್ಟ ಗುಡ್ಡಶಾಸ್ತ್ರಕ್ರಮ ಪರಿಪಾಳಿತ ವೀರಬಣಂಜು ಧರ್ಮರುಂ, ಸಮಾಚರಿತ ಪುಣ್ಯ ಸಮಯ ಚಕ್ರವರ್ತಿ, ಜಯಪತಿಸೆಟ್ಟಿ ಮುಖ್ಯವಾಗಿ ವೇಣುಗ್ರಾಮದ ಸ್ಥಳದ ಸಮಸ್ತ ಮುಮ್ಮರಿ ದಂಡಂಗಳುಂ, ಕೂಂಡಿ ಮೂಸಾಸಿರದ ಪಟ್ಟಣಿಗ ಮೊದಲಾದುಭಯ ನಾನಾದೇಶಿ ಮುಮ್ಮರಿದಂಡಂಗಳುಂ, ಪರಶುರಾಮನಾಯಕ, ಪೊಮ್ಮಣನಾಯಕ ಅಮ್ಮುಗಿನಾಯಕ ಪ್ರಮುಖರಪ್ಪ ಸಮಸ್ತ ಲಾಳ ವ್ಯವಹಾರಿಗಳುಂ, ಪಡಮನಾಯಕ ಕೊಂಡ ನಂಬಿಶೆಟ್ಟಿ ಪೊಱೆಯಚಶೆಟ್ಟಿ ಮೊದಲಾದೆಲ್ಲಾ ಮಲೆಯಾಳ ವ್ಯವಹಾರಿಗಳುಂ, ಮತ್ತಮಾವೇಣು ಗ್ರಾಮದ ಸ್ಥಳದ ಚಿನ್ನಗೆಯಿಕದವರುಂ, ದೂಸಿಗರುಂ ಮುಖ್ಯಮಾಗುಳಿದ ಪರದರುಂ, ತೇಲಿಗರುಂ, ದಿಂಕಸಾಲಿಗರುಮಿಂತಿವರೆಲ್ಲಂ ನೆರೆದಾ ಶಾಂತಿನಾಥ ದೇವರ ಬಸದಿಗೆ ಬಿಟ್ಟಾಯವೆಂತೆಂದೊಡೆ ;

ಬಡಗಣಿಂ ಬಂದ ಕುದುರೆಗೆ ನೆಲಮೆಟ್ಟು ಹಾಗವೊಂದು, ತೆಂಕಲ್ ನಡೆವವರ್ಕೆ ಸುಂಕಹಾಗವೊಂದು, ಮಾಲೆಯಾಳರ ಕುದುರೆಗೆ ಹಾಗವೊಂದು ಅಱುವತ್ತಯ್ದೆತ್ತು ಕೋಣಂಗಳೊಳೇನಂ ಪೇಱುದೊಡಂ ಸರ್ವಬಾಧಾಪರಿಹಾರ ; ಚಿನ್ನಗೆಯಿಕದ ಚೀರಕ್ಕೆ ದೂಸಿಗವಸರಕ್ಕೆ ಹತ್ತಿವಸರಕ್ಕೆ, ಮಣಿಗಾರವಸರಕ್ಕೆ ಗಂಧಣವಸರಕ್ಕೆ ಗಂಧಣಿಗರಂಗಡಿಗೆ ಅಕ್ಕಸಾಲೆಗ ಮಟಕ್ಕೆ ಬೇಱವೇಱ ಬರಿಸದೆಱ ಹಿರಿಯಹಾಗವೊಂದು, ಹೊಱಗಣಿಂ ಬಂದ ಸೀರೆಯ ಕಡಗೆಗೆ ವೀಸವೊಂದು, ಹೊಱಗಣಿಂ ಬಂದ ಗಂಧವಣಕ್ಕೆ ಕಕ್ಷಭಂಡಕ್ಕೆ ಆ ಭಂಡಂ ಗದ್ಯಾಣಂ ತೂಕವಯ್ದು ಹತ್ತಿಯ ಭಂಡಿಗೆ ತಾರಂ ಮೂಱು, ಆ ಪೇಱಂಗೆ ಕಾಣಿಯೊಂದು, ಭತ್ತದ ಭಂಡಿಗೆ ಭತ್ತವೋರ್ವಳ್ಳಂ,

ಭತ್ತವಸರದಂಗಡಿಗೆ ಭತ್ತ ನಿಚ್ಚ ಸೊಲ್ಲಗೆ, ಅಕ್ಕಿವಸರಕ್ಕೆ ಅಕ್ಕಿಯದ್ದಂ, ಮೇಳಸಿನ ಹೇಱಿಂಗೆ ಮೇಳಸೋರ್ಮಾನಂ ಆ ಜವಳಕೆ ಅರೆವಾನಂ, ಇಂಗಿನ ಪೆಟ್ಟಿಗೆಗೆ ಇಂಗು ಗದ್ಯಾಣಂ, ತೂಕವಾಱು, ಅಲ್ಲ ಅರಸಿನದ ಜವಳಕ್ಕೆ ಆ ಭಂಡಂ ಪಲವೈದು, ಆ ಹೇಱಿಂಗೆ ಅಲ್ಲ ಅರಿಸಿನಂ ಪಲಂ ಹತ್ತು, ಗಾಣಕ್ಕೆ ನಿಚ್ಚಟೆಣ್ಣೆಯದ್ದಂ, ಅಡಕೆಯ ಹೇಱಿಂಗೆ ಅಡಕೆಯಿಪ್ಪತ್ತಯ್ದು ಆ ಜವಳಕ್ಕೆ ಅಡಕೆ ಹನ್ನೆರಡು, ಎಲೆಯ ಹೇಱಿಂಗೆಲೆ ನೂಱು ಹೊಱೆಗಲೆಯಯ್ವತ್ತು, ತೆಂಗಿನ ಕಾಯ ಹೇಱಿಂಗಾ ಕಾಯೊಂದು, ಓಲೆಯ ಹೇಱಿಂಗೆ ಓಲೆಯ ಸೂಡೆರಡು ಆ ಹೊಱೆಗೆ ಸೂಡೊಂದು, ಹೊಱಗಣಿಂ ಬಂದ ಬೆಲ್ಲದ ಭಂಡಿಗೆ  ಬೆಲ್ಲದಚ್ಚು ಹದಿನೈದು ಆ ಹೊಱೆಗೆ ಅಚ್ಚೊಂದು, ಬಾಳೆಯ ಹೇಱಿಂಗಾ ಕಾಯಾಱು ಆ ಹೊಱೆಗೆ ಕಾಯ್ಮೂಱು, ನೆಲ್ಲಿಯ ಕಾಯ ಹೇಱಿಂಗಾ ಕಾಯ್ಬಳ್ಳವೊಂದು, ಕರ್ವಿನ ಹಗಱಿಕ್ಕೆ ಒಂದು ಕರ್ವು, ಬಳಹದ ಹೇಱಿಂಗೆ ಬಳಹವೊರ್ಪಲಂ, ಮತ್ತಮಾ ಶಾಂತಿನಾಥದೇವರ ಬಸದಿಗೆ ಶ್ರೀಕಾರ್ತವೀರ್ಯದೇವಂ ಕೊಟ್ಟ ಅಂಗಡಿ ಬಡಗಗೇರಿಯ ಬಡಗಣ ಹರಿಯ ಪಡುವಣ ಕಡೆಯೊಳ್ ರಾಜವೀಥಿಯಿಂ ಮೂಡಲ್ ನಾಲ್ಕು ;

*ದೋಷ ವ್ಯತೀತಮರ್ಥ ವಿ*
*ಶೇಷಮಿದೆನೆ ಪೇಳ್ದನೊಲ್ದು ಶಾಸನಮಂ ಪೀ -*
*ಯೂಷ ಸಮಸೂಕ್ತಿ ಚಾತು*
*ರ್ಭಾಷಾ ಕವಿ ಚಕ್ರವರ್ತಿ ಕವಿ ಕಂದರ್ಪಂ ॥*

'ಶ್ರೀಮನ್ಮಾಧವಚಂದ್ರ ತ್ರೈವಿಧ್ಯ ಚಕ್ರವರ್ತಿ ವಾಕ್ಸುಧಾ ರಸನಾಭ್ಯುದಿತ ನಿತ್ಯ ಸಾಹಿತ್ಯ ಕಮಳ ವನಮರಾಳಂ ಬಾಳಚಂದ್ರದೇವಂ ಪೇಳ್ದಶಾಸನಂ' ಎಂದು ಮುಗಿಯುತ್ತದೆ ಶಾಸನ. ಕವಿಕಂದರ್ಪನಾದ ಭಾಳಚಂದ್ರ ಇದರ ಕರ್ತೃವೆಂದು ತಿಳಿದುಬರುತ್ತದೆ. ಅಂದಿನ ವ್ಯಾಪಾರದ ಕ್ರಮ ಮತ್ತು ವ್ಯಾಪ್ತಿಗಳು, ಮಾರುವ ನಾನಾ ಸರಕುಗಳಿಗೆ ನಿಗದಿಯಾದ ತೆರಿಗೆಯ ಪ್ರಮಾಣಗಳು ಮತ್ತು ಅಳತೆಯ ತೂಕ ಮೊದಲಾದುವು ಈ ಶಾಸನದಿಂದ ತಿಳಿದುಬರುತ್ತವೆ. ಇಲ್ಲಿ ಗಮನಾರ್ಹವಾದ ಅಂಶವೆಂದರೆ ಈ ವ್ಯಾಪಾರ ಸಂಸ್ಥೆಗಳು ಮತ್ತು ವರ್ತಕರು ಸತ್ಕಾರ್ಯಗಳಿಗೆ ಉದಾರವಾಗಿ ದಾನವನ್ನು ಕೊಡುತ್ತಿದ್ದರು.

ಮುತ್ತು, ಮಣಿ, ಮಾಣಿಕ್ಯ, ಬಂಗಾರ, ಸುಗಂಧದ್ರವ್ಯ, ಅಡಕೆ, ಯಾಲಕ್ಕಿ, ಹತ್ತಿ ಸೀರೆ, ಗೊಂಗಡಿ, ಬಾಳೆಯ ಹಣ್ಣು ಹಾಗೂ ಬಟ್ಟೆಗಳ ವ್ಯಾಪಾರ ಮಾಡುತ್ತಿದ್ದವರಲ್ಲಿ ಲಕಿಮಿಸೆಟ್ಟಿ, ಮಹಾದೇವಸೆಟ್ಟಿ, ನಾಗಿಸೆಟ್ಟಿ, ಬಮ್ಮಿಸೆಟ್ಟಿ, ಮಾಚಿಸೆಟ್ಟಿ, ಲಕ್ಕ್ಮಿಸೆಟ್ಟಿ, ಬಮಿಸೆಟ್ಟಿ, ಬರಿಸೆಟ್ಟಿ, ತಿಪ್ಪಯ್ಯ, ರೇವಿಸೆಟ್ಟಿ, ತಿಪ್ಪಿಸೆಟ್ಟಿ, ತಿಕ್ಕಮಸೆಟ್ಟಿ, ಬೊಂಮಸೆಟ್ಟಿ,

ಮಾಕಂಣಸೆಟ್ಟಿ, ಗುಂಮ್ಮಟಸೆಟ್ಟಿ, ಬಂಮಿಸೆಟ್ಟಿ, ಕಾಳಿಸೆಟ್ಟಿ, ವೀರಸೆಟ್ಟಿ, ನಾಗಿಸೆಟ್ಟಿ, ಕೇತಿಸೆಟ್ಟಿ, ಬಾಚಿಸೆಟ್ಟಿ, ಪರಿಸಸೆಟ್ಟಿಯರು ಪ್ರಮುಖರಾಗಿದ್ದಾರೆ. ಇದಲ್ಲದೆ ಅಂಗಡಿಸೆಟ್ಟಿ, ಪೇಳಾವಿಗೆ(?) ಸೆಟ್ಟಿಯರೂ ಬೋಗಾಚಿ ದೇವಿಸೆಟ್ಟಿ, ಬಾಣಿಸೆಟ್ಟಿ, ಕುಂಬಾಚಿ ಮಂಗಿಸೆಟ್ಟಿ, ಬಳೆಗಾರ ಕೇಸವಸೆಟ್ಟಿ, ಬಳೆಗಾರ ಸರುವಯ್ಯಸೆಟ್ಟಿಯರೂ ಶಾಸನಗಳಲ್ಲಿ ಉಲ್ಲೇಖಗೊಂಡಿರುವರು. ಹೀಗೆ ಒಂದು ವಿಶಿಷ್ಟ ಸರಕು ಮಾರಾಟ ಮಾಡುವ ವರ್ತಕರನ್ನು ಶಾಸನಗಳು ಅದೇ ಹೆಸರಿನಿಂದ ಕರೆದಿರುವುದು ಅಧ್ಯಯನ ದೃಷ್ಟಿಯಿಂದ ಉಪಯುಕ್ತವೆನಿಸಿದೆ.[225]

ಕೆಲವು ಗಣ್ಯ ವರ್ತಕರು ರಾಜರ ಹಾಗೂ ಅವರ ಉನ್ನತ ಅಧಿಕಾರಿಗಳ ಮೇಲೆ ವರ್ಚಸ್ಸು ಬೀರಬಲ್ಲವರಾಗಿದ್ದು, ಅವರೊಡನೆ ವ್ಯಾಪಾರದ ವಹಿವಾಟು ನಡೆಸುತ್ತಿದ್ದರು. ಸೋವಿ-ಸೆಟ್ಟಿಯು, ಕಲ್ಯಾಣಿ ಚಾಳುಕ್ಯ ದೊರೆ ಎರಡನೆಯ ಜಗದೇಕಮಲ್ಲ ಹಾಗೂ ಅವರ ಅಧಿಕಾರಿ ಬ್ರಹ್ಮದೇವ ದಂಡಾಧೀಶರೊಡನೆ ಅಂತಹ ವಹಿವಾಟು ನಡೆಸುತ್ತಿದ್ದನೆಂಬುದನ್ನು ಶಾಸನಗಳಿಂದ ತಿಳಿಯಬಹುದು.[226]

ಆಂತರಿಕ ಹಾಗೂ ವಿದೇಶೀ ವ್ಯಾಪಾರಗಳ ಮೂಲಕ ಕರ್ಣಾಟಕದ ಐಶ್ವರ್ಯವನ್ನು ಹೆಚ್ಚಿಸಿ, ತಾವು 'ಲಕ್ಷ್ಮೀಪುತ್ರ'ರೆನಿಸಿದವರೂ ಈ ವರ್ತಕವರೇಣ್ಯರೇ. ಇಂತಹ ಅನೇಕರಲ್ಲಿ ಚಟ್ಟಸೆಟ್ಟಿ ಮತ್ತು ಆತನ ಅನುಜ ದಾಸಿಸೆಟ್ಟಿ ಎರಡು ಹೆಸರು ಮಾತ್ರ. ಅರಸೀಕೆರೆಯ ಶಾಸನವೊಂದು [227] ಈ ವರ್ತಕ ಸಹೋದರರ ವೈಶ್ಯಾನ್ವಯವನ್ನು ಕೊಟ್ಟು ಅವರ ವಾಣಿಜ್ಯ ವಹಿವಾಟಿನ ವೈಖರಿಯನ್ನು ಬಣ್ಣಿಸುತ್ತದೆ. 'ಸೆಟ್ಟಿಯರನ್ವಯವೆಂಕ ತಂದಡೆ', ಮಾರಿಸೆಟ್ಟಿ ಮತ್ತು ಪೋಚಲೆ ದಂಪತಿಗಳಿಗೆ 'ಕಮ್ಮಟದ ಚಟ್ಟಿಸೆಟ್ಟಿ ಗುಣಿದಾಸಿ ಸೆಟ್ಟಿಗಳ್ ಜನಿಸಿದರ್ ಕಮ್ಮಟದ ಚಟ್ಟಿಸೆಟ್ಟಿಯನ್ನು ಕುರಿತು ವರ್ಣಿಸುತ್ತಾ 'ತಾಂ ಭೂಮಿಗೆ ಚಟ್ಟಸೆಟ್ಟಿ ಧನದಂ ಧನದೇಳ್ಗೆಯೊಳೆನ್ತುನೋಳ್ಪಡಂ' ಎನ್ನುತ್ತದೆ ಶಾಸನ.

ಈತ ಹಡಗುಗಳಲ್ಲಿ ಉತ್ತಮ ಜಾತಿಯ ಕುದುರೆಗಳು, ಆನೆಗಳು ಮತ್ತು ಮುತ್ತುಗಳನ್ನು ಆಮದು ಮಾಡಿಕೊಂಡು, ರಾಜರುಗಳಿಗೆ ಮಾರಾಟ ಮಾಡುತ್ತಿದ್ದನಂತೆ, ಈತನ ತಮ್ಮ ದಾಸಿಸೆಟ್ಟಿಯೂ ಅಷ್ಟೇ ಪ್ರಸಿದ್ಧಿ. ಈ ಅನುಪಮ ವಣಿಜಂ ದಾಸೆಯಂ ದೋಷದೂರಂ ; ತನ್ನ ವಾಣಿಜ್ಯ ಜಾಲವನ್ನು ಇಡೀ ದೇಶದ ಉದ್ದಗಲಕ್ಕೂ ಹರಡಿದ್ದ. ದೇಶದ ಉತ್ತರದಿಂದ ತರಿಸಿದ 'ಭಾಂಡ 'ಗಳನ್ನು ದಕ್ಷಿಣಕ್ಕೂ, ಪೂರ್ವದಿಂದ ಬಂದವುಗಳನ್ನು ಪಶ್ಚಿಮಕ್ಕೂ - ಹೀಗೆ ನಾನಾ ದಿಕ್ಕುಗಳಿಗೆ 'ಭಾಂಡ'ಗಳನ್ನು 'ಅಟ್ಟು'ತ್ತಿದ್ದ ಭಾರಿ ವರ್ತಕ ಈ ದಾಸಿಸೆಟ್ಟಿ.

ಇನ್ನು ಭಾರತದ ಬೇರೆ ಬೇರೆ ಪ್ರಾಂತ್ಯಗಳಿಂದ ಬಂದು ಇಲ್ಲಿ ನೆಲಸಿದ್ದ ವರ್ತಕರನೇಕರು ಅಷ್ಟೇ ಪ್ರಖ್ಯಾತರೆನಿಸಿದ್ದರು. ಇವರಲ್ಲಿ ಕೇರಳಪುತ್ರರು ಹೆಚ್ಚು ಗಮನವನ್ನು ಸೆಳೆಯುವಂತಹವರು ಒಂದೆರಡು ನಿದರ್ಶನಗಳನ್ನು ನೋಡಬಹುದು.[228]

ಅರಸೀಕೆರೆಯ ಎರಡು ಶಾಸನಗಳಲ್ಲಿ[229] ದಾಮೋದರ ಸೆಟ್ಟಿಯ ಪ್ರಸ್ತಾಪವಿದೆ. ಈತ ಗೋವಿಂದ ಮತ್ತು ಔಚೆರು ನಂಗೆಯರ ಮಗ. ಹೊಯ್ಸಳ ದೊರೆ ಇಮ್ಮಡಿ ನರಸಿಂಹನ ಆಪ್ತ ರಾಜಶ್ರೇಷ್ಠಿ. ವಸ್ತುಗಳ ಹಾಗೂ ಪ್ರಾಣಿಗಳ (ಆನೆ, ಕುದುರೆ ಇತ್ಯಾದಿಗಳ) ಪರೀಕ್ಷೆಯಲ್ಲಿ ತಜ್ಞ ಹಲವಾರು ದೇವಾಲಯಗಳನ್ನು ಕಟ್ಟಿಸಿ, ದೇವರ ವಿಗ್ರಹಗಳನ್ನು ಸ್ಥಾಪಿಸಿ, ಭೂಮಿ ದಾನಗಳನ್ನು ಮಾಡಿ, ಕೀರ್ತಿಶ್ರೇಷ್ಠನೆನಿಸಿದ್ದಾನೆ.

ಕರ್ಣಾಟಕ ಬಹು ಪ್ರಾಚೀನ ಕಾಲದಿಂದಲೂ ಕಡಲಾಚೆಯ ಹಲವು ದೇಶಗಳೊಡನೆ ವ್ಯಾಪಾರದ ಸಂಪರ್ಕವನ್ನು ಹೊಂದಿತ್ತೆಂಬುದು ಇತಿಹಾಸ ಸಿದ್ಧವಾದ ಅಂಶ. ಕರ್ನಾಟಕದ ಕರಾವಳಿ ಪಶ್ಚಿಮಕ್ಕೆ ತೆರೆದಿದ್ದು, ಅದರುದ್ದಕ್ಕೂ ಹಲವು ಪ್ರಮುಖ ರೇವುಗಳು ಹರಡಿಕೊಂಡಿವೆ. ಇಲ್ಲಿನ ಕೆಲವು ರೇವುಗಳ ಪ್ರಸ್ತಾಪ ಗ್ರೀಸ್ ಮತ್ತು ರೋಮ್‌ದೇಶಗಳ ಐತಿಹಾಸಿಕ ದಾಖಲೆಗಳಲ್ಲಿ ಕಂಡುಬಂದಿರುವುದು ಗಮನಾರ್ಹವಾದುದು. ಜೊತೆಗೆ, 'ಮಿತಕ್ಷರಾ', 'ಧರ್ಮಾಮೃತಂ', ವಚನಗ್ರಂಥಗಳೇ ಮೊದಲಾದ ಸಾಹಿತ್ಯಕ ಕೃತಿಗಳೂ, ಕೆಲವಂಶಗಳ ಮೇಲೆ ಬೆಳಕನ್ನು ಚೆಲ್ಲುತ್ತವೆ. ಉದಾ : ವಿಜ್ಞಾನೇಶ್ವರ ಹಲವು ಸಂದರ್ಭಗಳಲ್ಲಿ ವಿದೇಶೀ ವ್ಯಾಪಾರ ಹಾಗೂ ವರ್ತಕರ ಬಗ್ಗೆ ಬರೆಯುವುದುಂಟು.

ಇನ್ನು ಶಾಸನಗಳಾದರೋ, ವಿದೇಶೀ ವ್ಯಾಪಾರಕ್ಕೆ ಸಂಬಂಧಪಟ್ಟಂತೆ ಕೆಲವು ಸಂಗತಿಗಳನ್ನು ತಿಳಿಸುತ್ತವೆ. ಹೊಯ್ಸಳ ಎರಡನೆಯ ಬಲ್ಲಾಳನ ಆಳ್ವಿಕೆಯಲ್ಲಿ 'ಬಹಿತ್ರದ ವೆರ್ಗಡೆ 'ಯಾಗಿದ್ದ ನಾರಣನ ಉಲ್ಲೇಖ ಮೈಸೂರಿನ ಶಾಸನವೊಂದರಲ್ಲಿದೆ. ಶಿಕಾರಿಪುರದ (ಶಿವಮೊಗ್ಗ ಜಿಲ್ಲೆ) ಕ್ರಿ.ಶ. 1054ರ ಶಾಸನ ತಿಳಿಸುವಂತೆ, ಇಲ್ಲಿನ ವರ್ತಕರು 'ಪಾದಮಾರ್ಗ ಜಲಮಾರ್ಗದೊಳು' ಸಂಚರಿಸಿ, ವ್ಯಾಪಾರದ ಸಲುವಾಗಿ 'ಷಡ್ಖಂಡ ಮಂಡಲಗಳಂ ಪೊಕ್ಕು', ಹಲವಾರು ದೇಶಗಳನ್ನು ಸಂದರ್ಶಿಸುತ್ತಿದ್ದಂತೆ, ಇಲ್ಲಿನ ಹಲವು ದೇಶಗಳ ಪಟ್ಟಿಯಲ್ಲಿ, 'ಪಾರಸ' (=ಪರ್ಷಿಯಾ) ಇರುವುದನ್ನು ಗಮನಿಸಬಹುದು. ಹಾಗೆಯೇ, 'ತುರುಷ್ಕ'ದ (=ತುರ್ಕಿ) ಉಲ್ಲೇಖವೂ ಹಲವು ಶಾಸನಗಳಲ್ಲಿದೆ.

ತೇರದಾಳಿನ (ಬಿಜಾಪುರ ಜಿಲ್ಲೆ) ವರ್ತಕರು ದೋಣಿ ಹಡಗುಗಳಲ್ಲಿ, ಮಾಣಿಕ್ಯ, ಆನೆ ಮೊದಲಾದ ಅತಿ ಬೆಲೆಬಾಳುವ ಸರಕುಗಳನ್ನು ಹೇರಿ, 'ಜಲಸ್ಥಳಯಾತ್ರೆ'ಗಳನ್ನು ಮಾಡುತ್ತಿದ್ದರೆಂಬುದು, ಅಲ್ಲಿನ ಶಾಸನಗಳಿಂದ

ತಿಳಿಯಬಹುದು. ಹಾಗೆಯೇ, ಬೆಳಗೊಳದ ವರ್ತಕರು ಬೇಲೂರು, ದೋರಸಮುದ್ರ ಹಾಗೂ ವಿಷ್ಣುಸಮುದ್ರಗಳ 'ಮಣಿಗಾರರು' ಹಲವಾರು ರೇವುಪಟ್ಟಣಗಳೊಂದಿಗೆ ಸಂಪರ್ಕ ಪಡೆದಿದ್ದರೆಂಬುದೂ ಶಾಸನೋಕ್ತ ಸಂಗತಿಯೇ.

ಕರ್ನಾಟಕ ಮತ್ತು ಮಲಯ ದ್ವೀಪಸ್ತೋಮಗಳ ನಡುವಣ ಸಂಬಂಧ ಕ್ರಿ.ಶ. 7 ರಿಂದ 17ನೆಯ ಶತಮಾನಗಳವರೆವಿಗೂ ಬೆಳೆದು ಬಂದಿತ್ತು ಎಂಬುದು ವಿದ್ವಾಂಸರ ಅಭಿಪ್ರಾಯ. ಜಾವಾದ್ವೀಪದ ಮೂಲಗಳಲ್ಲಂತೂ ಈ ಅಂಶವನ್ನು ಸ್ಪಷ್ಟವಾಗಿ ಗುರುತಿಸಬಹುದು. ಪೂರ್ವ ಜಾವಾದ ಇತಿಹಾಸದಲ್ಲಿ ಪ್ರಖ್ಯಾತನೆನಿಸಿರುವ ದೊರೆ ಐರ್‌ಲಂಗ್‌ನ (ಕ್ರಿ.ಶ. *1019-42*) ಶಾಸನಗಳಲ್ಲಿ, ಅಲ್ಲಿಗೆ ವ್ಯಾಪಾರಕ್ಕಾಗಿ ಬರುತ್ತಿದ್ದ ವಿದೇಶೀ ವರ್ತಕರ ಪ್ರಸ್ತಾಪವಿದೆ. ಅಲ್ಲಿ ನಮೂದಿಸಿರುವ ಹಲವು ದೇಶಗಳ ಪಟ್ಟಿಯಲ್ಲಿ 'ಕರ್ನಾಟಕ'ದ ಹೆಸರನ್ನು ಗಮನಿಸಬಹುದು (ಕಳಿಂಗ, ಬಂಗಾಳ, ಸಿಲೋನ್ ಮುಂತಾದ ದೇಶಗಳೂ ಸೇರಿವೆ). ಅಲ್ಲದೆ, ಜಾವಾದ ಐತಿಹಾಸಿಕ ಕಾವ್ಯವೆನಿಸಿರುವ 'ನಾಗರ ಕೃತಾಗಮ' (ಕ್ರಿ.ಶ. 1365)ದಲ್ಲಿ ಜಾವಾ-ಕರ್ನಾಟಕಗಳ ನಡುವಣ ನಿಕಟ ವ್ಯಾಪಾರ ಸಂಪರ್ಕದ ಉಲ್ಲೇಖವಿದೆ.

ಕಲ್ಯಾಣಿ ಚಾಳುಕ್ಯ ಇರಿವಬೆಡಂಗ ಸತ್ಯಾಶ್ರಯನ ಮಾಂಡಲಿಕನಾಗಿದ್ದ ರಟ್ಟರಾಜನ ತಾಮ್ರಪಟಗಳಲ್ಲಿ, ದ್ವೀಪಾಂತರಗಳಿಂದ ಬರುತ್ತಿದ್ದ ವ್ಯಾಪಾರದ ಹಡಗುಗಳ ಪ್ರಸ್ತಾಪವಿದೆ. ದ್ವೀಪಾಂತರವೆಂದರೆ, ಮೊದಲು 'ವಿದೇಶ'ಗಳೆಂದು ಅರ್ಥ ಮಾಡಲಾಗುತ್ತಿತ್ತು. ಆದರೆ ಇತ್ತೀಚಿನ ಸಂಶೋಧನೆಗಳು, ಆ ಪದವು ಮಲಯ ದೇಶವನ್ನು ಸೂಚಿಸುತ್ತದೆ ಎಂದು ತೋರಿಸಿವೆ.

ವಿದೇಶೀ ಪ್ರವಾಸಿಗರ ಬರಹಗಳ ಬೆಳಕಿನಲ್ಲಿ ಮತ್ತೊಂದು ಅಂಶವನ್ನು ಗಮನಿಸಬಹುದು. ಕ್ರಿ.ಶ. 11-12ನೆಯ ಶತಮಾನಗಳ ಕಾಲದಲ್ಲಿ ಚೀನ, ಮಲಕ್ಕ ಮತ್ತು ಫರ್ಮೋಸ ದೇಶಗಳಿಂದ, ಅತಿ ಬೆಲೆಬಾಳುವ ಸರಕುಗಳನ್ನು ಹೊತ್ತ ಹಡಗುಗಳು ಮೊದಲು ಕಲ್ಲಿಕೋಟೆಗೆ ಬಂದು, ಅಲ್ಲಿಂದ ಹೊರಟು ಕ್ಯಾಂಬೆಯವರೆಗೂ ಪ್ರಯಾಣ ಮುಂದುವರಿಸುತ್ತಿದ್ದವು. ಹೀಗೆ, ಕರ್ನಾಟಕದ ಇಡೀ ಕಡಲ ತೀರವನ್ನು ಹಾದು ಹೋಗಿ, ಅದರುದ್ದಕ್ಕೂ ಹರಡಿರುವ ಹಲವು ರೇವುಗಳೊಡನೆ ಸಂಪರ್ಕ ಪಡೆದಿದ್ದವು ಎಂಬಂಶ ಸ್ಪಷ್ಟವಾಗುವುದು. ಅಲ್ಲದೆ, ಮಂಗಳೂರು ಮತ್ತು ಹೊನ್ನಾವರ ರೇವುಗಳು ಕ್ರಿ.ಶ. 15ನೆಯ ಶತಮಾನದವರೆವಿಗೂ ಚೀನದೊಡನೆ ವ್ಯಾಪಾರ ಸಂಪರ್ಕವನ್ನು ಹೊಂದಿದ್ದವು.[230]

ಕರ್ನಾಟಕ ಭಾರತದ ನಾನಾ ಭಾಗಗಳೊಂದಿಗೂ ವ್ಯಾಪಾರ ಸಂಪರ್ಕ ಹೊಂದಿತ್ತು, ಬಳ್ಳಿಗಾವೆ (ಶಿವಮೊಗ್ಗ ಜಿಲ್ಲೆ) ಶಾಸನ ತಿಳಿಸುವಂತೆ, ಇಲ್ಲಿನ ವರ್ತಕರು ಚೇರ, ಚೋಳ, ಪಾಂಡ್ಯ, ಮಗಧ, ಸೌರಾಷ್ಟ್ರ ಮುಂತಾದ ದೇಶಗಳೊಡನೆ ವ್ಯಾಪಾರ ಸಂಪರ್ಕವನ್ನು ಹೊಂದಿದ್ದರು. ಹಾಗೆಯೇ ಲಾಳ ಚೋಳ ಮಲೆಯಾಳ, ತೆಲುಂಗ ದೇಶಗಳ ವರ್ತಕರೂ ಕರ್ನಾಟಕದಲ್ಲಿದ್ದು ನೆಲೆಸಿ, ಇಲ್ಲಿನ ವ್ಯಾಪಾರ ಚಟುವಟಿಕೆಗಳಲ್ಲಿ ಪಾಲ್ಗೊಂಡಿದ್ದರು.[231]

ಪ್ರಸಿದ್ಧ ವಚನಕಾರ ಆದಯ್ಯನ [232] 'ಸೌರಾಷ್ಟ್ರವೆಂಬ ಅಂಗಕ್ಕೆ ಪ್ರಾಣವಾಗಿ, ಸೌರಾಷ್ಟ್ರಪತಿಯಾದ, ಪಂಚೇಂದ್ರಿಯಂಗಳೆಂಬ ಐಮುಖವಪ್ಪ ಹುಲಿಗೆರೆಯಲ್ಲಿ ನೆಲೆಸಿ ಹುಲಿಗೆರೆಯರಸನಾದ, ಸತ್ಯಸ್ವರೂಪನು ತಾನೆ ಆದ ಕಾರಣ ಸತ್ಯವೆಂಬ ಸೀಮೆಯಲ್ಲಿರ್ಪನಾಗಿ' ಎಂಬ ಮೊದಲಾದ ಈತನ ವಚನಗಳಿಂದ ಈತ ಸೌರಾಷ್ಟ್ರದಿಂದ ವ್ಯಾಪಾರದ ಉದ್ದೇಶಕ್ಕಾಗಿ ಬಂದು, ಪುಲಿಗೆರೆಯಲ್ಲಿ ನೆಲೆಸಿರುವುದು ಹಾಗೂ ಈತನ ವಚನಗಳಿಂದ ಚಿನ್ನ, ಬೆಳ್ಳಿ ಮುಂತಾದವುಗಳನ್ನು ವ್ಯಾಪಾರ ಮಾಡುತ್ತಿದ್ದುದನ್ನು ತಿಳಿಯಬಹುದು.

ಚಿನ್ನ, ಬೆಳ್ಳಿ ಮತ್ತು ತಾಮ್ರಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು ಮುಖ್ಯವಾಗಿ ಚಿನ್ನವನ್ನು ಆ ಲೋಹಕ್ಕೆ ಹೆಸರಾದ ಸುಮಾತ್ರಾ ದ್ವೀಪದಿಂದ ಆಮದು ಮಾಡಿಕೊಳ್ಳುತ್ತಿದ್ದರೆಂದು ಭಾವಿಸಲಾಗಿದೆ. 'ಹೊಱಗಣಿಂ ಬಂದ ಸೀರೆಯ ಕಡಗೆಗೆ ವೀಸವೊಂದು ಎಂಬ ಉಲ್ಲೇಖದಿಂದ ಹೊರಗಿನಿಂದ ಬರುತ್ತಿದ್ದ ಬಟ್ಟೆಯ ಮೇಲೆ ತೆರಿಗೆಯಾಕುತ್ತಿದ್ದುದನ್ನು ಬೆಳಗಾವ್ ಶಾಸನದಲ್ಲಿ[233] ನೋಡಬಹುದು.

ಕರ್ಣಾಟಕದ ವರ್ತಕರು ಇತರ ದೇಶಗಳಿಗೆ ರಫ್ತು ಮಾಡುತ್ತಿದ್ದ ವಸ್ತುಗಳಾವುವು, ಅಂತೆಯೇ ಬೇರೆ ದೇಶಗಳಿಂದ ಇಲ್ಲಿಗೆ ಆಮದಾಗುತ್ತಿದ್ದ ಸರಕುಗಳಾವುವು ಎಂಬ ವಿಷಯದ ಬಗ್ಗೆ ವಚನಗಳು ಬೆಳಕು ಚೆಲ್ಲಿಲ್ಲ. ಆದರೆ ವಚನಗಳಿಂದ ಹಡಗಿನ ಬಗ್ಗೆ ಕೆಲವು ಮಾಹಿತಿಗಳಿವೆ. ಹಡಗಿನ ಮೇಲೆ ಭಾಂಡಗಳನ್ನು ಹೇರಿಕೊಂಡು ಪರದೇಶಗಳಿಗೆ ಹೋಗುವಾಗ ವರ್ತಕರು ನಕ್ಷತ್ರಪಥವನ್ನೇ ನೋಡುತ್ತ ಛತ್ರವನ್ನು ನಡೆಸುತ್ತಿದ್ದರು.[234]

## 4.8. ವೇತನ ದತ್ತಿಗಳು

ಕ್ರಿ.ಶ. 1189ರ ಹೊಂಬಳ್ ಶಾಸನವು[235] 'ಕಂಚಗಾಱಱು ದೇವರುಪಕರಣಂಗಳೆಲ್ಲಮಂ ಕೂಲಿಯಂ ಕೊಳ್ಳದೆ ಮಾಡಿ ಕುಡುವಂತಾಗಿ ಬಿಟ್ಟರು' ಎಂಬ ಉಲ್ಲೇಖವು ಕಂಚಗಾರರು ದೇವರುಪಕರಣಂಗಳೆಲ್ಲವನ್ನು ಕೂಲಿಯನ್ನು ತೆಗೆದುಕೊಳ್ಳದೆ ಮಾಡಿಕೊಟ್ಟಿರುವುದನ್ನು ತಿಳಿಸುತ್ತದೆ. ಹಾಗಾಗಿ, ಇವರು ಮಾಡುತ್ತಿದ್ದ ಕೆಲಸಗಳಿಗೆ

ಕೂಲಿಯನ್ನು ಕೊಡಲಾಗುತ್ತಿದ್ದು ಆದರೆ ಇವರು ಇದನ್ನು ಸೇವೆಯೆಂದು ಪರಿಗಣಿಸಿಯೇ ಏನೊ ಅದನ್ನು ತೆಗೆದುಕೊಂಡಿಲ್ಲವೆಂದು ತಿಳಿಯಬಹುದು.

ಕ್ರಿ.ಶ. 1033ರ ಮುದ್ದೇಬಿಹಾಳ್ ತಾಲ್ಲೂಕಿನ ಶಾಸನವು[236] 'ಶ್ರೀ ಬಲೇಶ್ವರ ದೇವರ ದೇಗುಲವಂ ಹಡಿಸಲಿಸಲು ಬಡಗಿ ಮಲೋಜಂಗೆ ಆ ಕೆಯೊಳಗೆ ಮತ್ತರು ೬' ಎಂದು ಉಲ್ಲೇಖಿಸುತ್ತದೆ. ಅಂದರೆ ಶ್ರೀಬಲೇಸ್ವರ ದೇವರ ದೇವಾಲಯದ ಬಾಗಿಲು, ಕದ ಮೊದಲಾದ ಬಡಗಿ ಕೆಲಸ ಮಾಡಿಕೊಡುತ್ತಿದ್ದುದಕ್ಕಾಗಿ 6 ಮತ್ತರು ಸಾಗುವಳಿ ಭೂಮಿಯನ್ನು ಕೊಟ್ಟಿರುವುದನ್ನು ತಿಳಿಸುತ್ತದೆ (ಒಂದು ಅಭಿಪ್ರಾಯದಂತೆ ಮತ್ತರು = 100 ಮಾರು ; 1 ಮಾರು 2 ಯಾರ್ಡಿಗೆ ಸಮ).

ಕ್ರಿ.ಶ. 1043ರ ಸಾಗರದ ಶಾಸನದಲ್ಲಿ[237] ದೇವಸ್ಥಾನಕ್ಕೆ ಸಂಬಂಧಿಸಿದ ಮರಗೆಲಸಗಳನ್ನು ಮಾಡುವುದು ಹಾಗೂ ಮುರಿದುಹೋದ ಸಾಮಾನುಗಳನ್ನು ಸರಿಪಡಿಸಲು ಬಡಗಿಗಳಿಗೆ ಶಾಶ್ವತವಾದ ದತ್ತಿಗಳನ್ನು ಬಿಟ್ಟುಕೊಡುತ್ತಿದ್ದರು.

ಕ್ರಿ.ಶ. 1200ರ ಹುಬ್ಬಳ್ಳಿ ತಾಲೂಕಿನ ಮಂಟೂರ ಗ್ರಾಮಕ್ಕೆ ಸಂಬಂಧಿಸಿದ ಹೊಯ್ಸಳ ಇಮ್ಮಡಿ ವೀರಬಲ್ಲಾಳನ ತಾಮ್ರಪಟದಲ್ಲಿ ಹಿಟ್ಟಿನ ತಳವಾರಿ, ಮಾರಯ ನಾಯಕ ; ಹಿಟ್ಟಕಾರ ಬಡಗಿ ಹಿಲೋಜ, ಹಿಟ್ಟಿನ ಕಮ್ಮಾರ ದೇವೋಜ ಮತ್ತು ಹಿಟ್ಟಿನ ಅಕ್ಕಸಾಲೆ ಪಾರಿಸೋಜ ಇವರಿಗೆ ಭೂಮಿಯನ್ನು ಬಿಟ್ಟುಕೊಟ್ಟ ಉಲ್ಲೇಖ ಬರುವುದಾಗಿ ಆರ್.ಎನ್. ಗುರುವ [238]ರವರು ಗುರುತಿಸುತ್ತಾರೆ. ಇಲ್ಲಿ ಉಪಯೋಗಿಸಲಾದ ಹಿಟ್ಟಿನ ಅಥವಾ ಹಿಟ್ಟುಕಾರ ಪದಕ್ಕೆ ಎಂಟುಹಿಟ್ಟು ಸಮಿತಿಯ ಸದಸ್ಯತ್ವ ಹೊಂದಿ, ಗ್ರಾಮಕ್ಕೆ ಸೇವೆಯನ್ನು ಸಲ್ಲಿಸಿ, ಅದಕ್ಕೋಸ್ಕರ ಇರುವ ಸಂಭಾವನೆಯನ್ನು ಪಡೆಯುವವನು ಎಂಬ ಅರ್ಥ ಬರುವುದರಿಂದ ಮೇಲೆ ಉಲ್ಲೇಖಿಸಿದ ಶಾಸನಾಧಾರದಿಂದ ಈ ಹಿಟ್ಟುಕಾರರಿಗೆ ಊರಿನವರು ಇಂತಿಷ್ಟು ಭೂಮಿಯನ್ನು ಸಾಗುವಳಿ ಮಾಡುಕೊಳ್ಳಲು ಕೊಟ್ಟಿರಬಹುದೆಂದು ತಿಳಿಯಬಹುದು.

ಹಾಗೆಯೇ ಹೊಯ್ಸಳ ಬಲ್ಲಾಳರಾಯನ ಕಾಲದ ಕ್ರಿ.ಶ. 1003ರ ಕೊಲ್ಲಾಪುರದ ತಾಮ್ರಶಾಸನದಲ್ಲಿ[239] 'ಆ ಊರಿಂಗೆ ಹಿಟ್ಟಿನ ತಲವಾರಿ ಮಾರಯನಾಯಕ ಆತಂಗೆ ಮತ್ತರು ೬ ... ಹಿಟ್ಟಕಾರ ಬಡಗಿ ಹಿಲೇಜಗೆ ಮತ್ತರು ೪, ಹಿಟ್ಟಿನ ಕಂಮ್ಮಾರ ದೇವೋಜಂಗೆ ಮತ್ತರು ೪, ಹಿಟ್ಟಿನ ಅಕ್ಕಸಾಲೆ ಪಾರಿಸೋಜಂಗೆ ಮತ್ತರು ೪ .. ' ಎಂದು ಮುಂತಾಗಿ

ಭೂಮಿ ದಾನ ಪಡೆದವರ ವಿವರಗಳಿವೆ. ಇದು ಅಂದಿನ ಗ್ರಾಮಗಳಲ್ಲಿನ ಸೇವೆಗಳ ವ್ಯವಸ್ಥೆ - ಆಯಗಾರರ ವ್ಯವಸ್ಥೆಯನ್ನು ಸೂಚಿಸುತ್ತದೆ.

ಮಧ್ಯಕಾಲೀನ ಕರ್ನಾಟಕದ ಕುಶಲ ಕೆಲಸಗಾರರಿಗೆ ಅವರ ಸೇವೆಗೆ ಪ್ರತಿಯಾಗಿ ಧಾನ್ಯರೂಪದಲ್ಲಿ ಕೂಲಿಯನ್ನು ಕೊಡಲಾಗುತ್ತಿದ್ದ ವಿಷಯ ಶಿಲಾಶಾಸನಗಳಿಂದ ತಿಳಿದುಬರುತ್ತದೆ. ಉದಾ : ಕ್ರಿ.ಶ. 1186ರ ಹೊಸೂರು ಶಾಸನದಲ್ಲಿ[240] 'ಬಡಗಿ ಕಲೋಜ ಮೋರಕೇಸ್ವರ ದೇವರ ತೋಟ ಕೆಯಿ ಮನೆಯ ಗೆಯಿದೆ ಕೂಲಿಯೆ ನಿತುಂಟ ನಿತುಮಂ ದೇವರ ನೈವೇದ್ಯಕ್ಕೊಮ್ಮಾನ ಅಕ್ಕಿಯ ನಡವಂತಾಗಿ ತಂನ ಪುತ್ರ ಪೌತ್ರರಾದಿಯಾಗಿ ..... ಕೊಟ್ಟಯಿಲ್ಲಿ ಬಡಗಿತನಕ್ಕಾರು ನಿನ್ದವರು ಹಿಟ್ಟುಕಾಱ ಬಡಗಿ ಕಲ್ಲೋಜ ಬಿಟ್ಟ ಧರ್ಮ್ಮಮಂ ಏಳುನೂರ್ವ್ವರುಂ ಪ್ರಜೆ ಮಹಾಬಳ ಗಾವುಂಡನುಂ ಪ್ರತಿಪಾಲಿಸುವನು.'

ಕ್ರಿ.ಶ. 1185ರ ಲಕ್ಕುಂಡಿ ಶಾಸನವು[241] 'ಸೆಟಿಗರು ಕಂಮಟೇಶ್ವರ ಸೊಡರೆಣ್ಣೆಗೆ [ಮೂಱರ] ದೀವಿಗೆ ... ಣೆಯ ಹನ್ನಿರ್ವ್ವರು ನಡೆಸುವರು । ಮತ್ತಂ ಬೆಳ್ಳಿಗಂಮಟದವರು ಅಜ್ಜಿಯ ವಸ್ತ್ರದಾನಕ್ಕೆಂದು ಸಂಕ್ರಮಣದಲು ಕಮ್ಮಟಕ್ಕೆ ಬಿಟ್ಟ ಪಣ ೧ ಮತ್ತಂ ಬಡಗಿ ಕಮ್ಮಾರರು ವೊಕ್ಕಲಲೊನ್ದು ಹೊರೆಯಮಂ ಹನ್ನಸುಂ ಧಾನ್ಯದಲು ಬಳ್ಳಮಂ ಬಿಟ್ಟರು ।' ಅಂದರೆ ಇಲ್ಲಿ ಬೆಳ್ಳಿಗಮ್ಮಟದವರು ಹಣದ ರೂಪದಲ್ಲಿಯೂ ಬಡಗಿ ಮತ್ತು ಕಮ್ಮಾರರು ಧಾನ್ಯ ರೂಪದಲ್ಲಿಯೂ ದಾನವನ್ನು ಕೊಟ್ಟರೆಂದು ಹೇಳುತ್ತಿದ್ದುದು ಗಮನಾರ್ಹವಾಗಿದೆ. ಇದರಿಂದ ಬಡಗಿ ಮುಂತಾದ ಆಯಗಾರರು ದವಸಧಾನ್ಯಗಳನ್ನು ತಮ್ಮ ವೃತ್ತಿಯ ಕಾರ್ಯಗಳಿಗಾಗಿ ಪಡೆಯುತ್ತಿದ್ದರಷ್ಟೇ ಅಲ್ಲ ಅದನ್ನೇ ಅವರು ದಾನ ದತ್ತಿಗಳಿಗೂ ಬಳಸುತ್ತಿದ್ದರೆಂದೂ ತಿಳಿಯುತ್ತದೆ.

### 4.8.1. ಆಯ

ಆಯಗಾರಿಕೆ ಜೀವಂತವಾಗಿ ಪ್ರಚಲಿತದಲ್ಲಿದ್ದ ಸಾಮಾಜಿಕ ವ್ಯವಸ್ಥೆಯಿಂದ ನಮ್ಮ ನಗರ ಮತ್ತು ಗ್ರಾಮೀಣ ಜೀವನ ಈಗಾಗಲೇ ಸಾಕಷ್ಟು ದೂರ ಸರಿದಿದೆ. ಆ ಪ್ರಯುಕ್ತ ಈ ಪದ್ಧತಿಯ ಸರ್ವಮುಖದ ಅರ್ಥ ನಮಗೀಗ ಗೋಚರಕ್ಕೆ ಬರಲಾರದ್ದಾಗಿದೆಯೆನ್ನಬೇಕು. ತೀರಾ ಹಳ್ಳಿಗಾಡು ಪ್ರದೇಶದಲ್ಲಿ ಅದರ ಕ್ಷೀಣರೂಪವನ್ನು ಕಾಣಬಹುದು ಅಷ್ಟೆ. ಇನ್ನು ಸ್ವಲ್ಪೇ ಕಾಲದಲ್ಲಿ ಈ ಪದಗಳ ಅಸ್ತಿತ್ವ ಕೋಶಗಳಲ್ಲಿ ಮಾತ್ರ ಕಾಣಸಿಕ್ಕುವುದೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಕಿಟೆಲ್ ಕನ್ನಡ - ಇಂಗ್ಲೀಷ್ ಕೋಶದಲ್ಲಿ[242] 'ಆಯ' ಎಂಬುದಕ್ಕೆ 'Corn given by the well to do villagers to the hereditary servants of the village as their established fees of office' (ಹಳ್ಳಿಗಳಲ್ಲಿ ಅನುವಂಶಿಕ ಸೇವಕರಾಗಿದ್ದವರಿಗೆ ಅನುಕೂಲಸ್ಥ ಹಳ್ಳಿಗರು ಕಾಳಿನ ರೂಪದಲ್ಲಿ ನಿಗದಿಯಾದ ಪ್ರಮಾಣದಲ್ಲಿ ನೀಡುವ ಅವರ ಕೆಲಸದ ಸಂಭಾವನೆ) ಎಂದೂ 'ಆಯಗಾರ' ಎಂಬುದಕ್ಕೆ 'A hereditary village servant' (ಅನುವಂಶಿಕವಾಗಿ ಗ್ರಾಮದ ಸೇವಾವರ್ಗಕ್ಕೆ ಸೇರಿದವ) ಎಂದೂ ಹೇಳಿ ಅಂತಹ ಸೇವಾವರ್ಗದಲ್ಲಿ 'ಗವುಡ, ಶಾನುಭೋಗ, ಜೋಯಿಸ, ಪತ್ತಾರಿ, ಕಮ್ಮಾಟಿ, ಕುಮ್ಮಾಟಿ, ಬಡಗಿ, ನಾಯಿನ್ದ' ಇತ್ಯಾದಿ ಜನರನ್ನು ಹೆಸರಿಸಲಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನಲ್ಲಿ[243] ಮೇಲಿನ ಅರ್ಥವನ್ನೇ ಉಲ್ಲೇಖಿಸುತ್ತ 'ಆಯ' ಎಂಬುದಕ್ಕೆ ಹಳ್ಳಿಗಳಲ್ಲಿ ವಂಶಪರಂಪರೆಯಿಂದ ಸೇವೆ ಸಲ್ಲಿಸಿಕೊಂಡು ಬಂದಿರುವವರಿಗೆ ಕಣದಲ್ಲಿ ಅಳೆದು ಕೊಡುವ ಧಾನ್ಯ ಎಂದು ಅರ್ಥ ವಿವರಣೆ ನೀಡಲಾಗಿದೆ. 'ಆಯಗಾರ' ಎಂಬುದಕ್ಕೆ ಕೂಡ ಕಿಟೆಲ್ ಕೋಶದಲ್ಲಿಯ ಅರ್ಥವಿವರಣೆಯನ್ನೇ ಎತ್ತಿ ಹಿಡಿದು ಅವರ ಪಟ್ಟಿಯಲ್ಲಿ 'ಜೀತಗಾರ' ಮತ್ತು 'ತಳವಾರ' 'ಬೇ(ಭೋ)ಗಾರ'ರನ್ನು ಸೇರಿಸಲಾಗಿದೆ.

ಈ ಪದ್ಧತಿಯು ಪ್ರಾಚೀನ ಕರ್ನಾಟಕದಲ್ಲಿದ್ದಿತ್ತೆಂಬುದಕ್ಕೆ ಒಂದು ಶಾಸನಾಧಾರವಿದೆ. ಕ್ರಿ. ಶ. 1035ರ ಬಾಗಳಿ ಶಾಸನದಲ್ಲಿಯ[244] 'ಅಕ್ಕಸಾಲಿಯಾಯ ಉಪ್ಪೊಳಗಾಗಿ ಧಾನ್ಯಂಗಳೊಳೆಲ್ಲಂ' ಎಂಬ ಉಲ್ಲೇಖದಿಂದ ಅಕ್ಕಸಾಲಿಗಳು ಆಯವನ್ನು ಪಡೆಯುತ್ತಿದ್ದರೆಂದು ತಿಳಿಯಬಹುದು.

ಕ್ರಿ. ಶ. 1098-99ರ ಸೊರಟೂರು ಶಾಸನವು[245] 'ಅಕ್ಕಸಾಲಿಖಾವೋ[ಜ★]ನ ಭಾಗದಾಯಮಂ' ಎಂದು ಉಲ್ಲೇಖಿಸುತ್ತದೆ. ಈ ಶಾಸನಗಳ ಅಕ್ಕಸಾಲಿಗಳು ಬಡಗಿಯ ಅಥವಾ ಕಮ್ಮಾರನ ಕೆಲಸಗಳನ್ನು ಮಾಡುತ್ತಿದ್ದಿರಬೇಕು. ಏಕೆಂದರೆ ಪ್ರತಿವರ್ಷವೂ ಅಥವಾ ವರ್ಷದುದ್ದಕ್ಕೂ ಅಕ್ಕಸಾಲಿಯ ಹತ್ತಿರ ಚಿನ್ನದ ಕೆಲಸವನ್ನು ಮಾಡಿಸುವುದು ಅಸಂಭವ. ಈಗಲೂ ಹಳ್ಳಿಗಳಲ್ಲಿ ಬಡಗಿ, ಕಮ್ಮಾರರಿಗೆ ಆಯವನ್ನು ಕೊಟ್ಟಂತೆ ಅಕ್ಕಸಾಲಿಗಳಿಗೆ ಕೊಡುವುದಿಲ್ಲ. ಅಲ್ಲದೇ ಅಕ್ಕಸಾಲಿಗಳು ಬಡಗಿ, ಕಮ್ಮಾರರ ಕೆಲಸಗಳನ್ನು ಮಾಡುವುದನ್ನು ಈಗಲೂ ನೋಡಬಹುದು. ಸು. 1130ರ ಶಾಸನವೊಂದರಲ್ಲಿನ 'ಅಕ್ಕಸಾಲೆ ಕಮ್ಮಾಟಿ' ನಾಗಿದ್ದ ಕದಿಟ್ಟಯ ನಾಥಾಚಾರಿಯ ಹೆಸರನ್ನು ನೋಡಿದರೆ ಮೇಲಿನ ಊಹೆ ನಿಜವಿರಬಹುದೆಂದು ಚಿದಾನಂದಮೂರ್ತಿಯವರು[246] ಅಭಿಪ್ರಾಯಪಡುತ್ತಾರೆ.

ಹೊಯ್ಸಳರ ಮೂರನೆ ನರಸಿಂಹನ ಸೋಮನಾಥಪುರ ಶಾಸನವೊಂದರಲ್ಲಿ[247] ಸೋಮನಾಥ ದೇವಾಲಯದ ಒಡೆದ, ಮುರಿದ ಭಾಗಗಳನ್ನು ದುರಸ್ತಿ ಮಾಡುವುದಕ್ಕೋಸ್ಕರ ಇಟ್ಟಿಗೆ ಸೊಥೆಗೆ ಅಕ್ಕಸಾಲಿಕೆಯ ಆಚಾರಿತನಕೆ ಮರೆಯಾನೆಯೋಜನಿಗೆ ಗದ್ಯಾಣ 12 ಬಡಗಿಗೆ ಗದ್ಯಾಣ 2, ಅಕ್ಕಸಾಲಿಗೆ ಗದ್ಯಾಣ 2, ಕುಂಬಾಱರು ಆಳು 2ಕ್ಕಂ ಗದ್ಯಾಣ 12, ನಾಯಿದಂಗೆ ಗದ್ಯಾಣ 4, ಅಗಸನಿಗೆ ಗದ್ಯಾಣ 4ಕ್ಕೆ ಜೀವಿತ ಗದ್ಯಾಣ ವೊಂಭೈನೂರ ಮೂವತ್ತಾರು, ಸತ್ರಕ್ಕೆ ಗದ್ಯಾಣ 200 ಕೊಡಲಾಗಿರುವ ವಿಷಯವನ್ನು ತಿಳಿಸುವುದು ಅಲ್ಲದೆ ಇವರನ್ನು ದೇವಾಲಯದ ಸಂರಕ್ಷಣೆಗೆ ನೇಮಿಸಿದ್ದು ಸಂರಕ್ಷಣೆ ವೆಚ್ಚಕ್ಕಾಗಿ ದತ್ತಿನೀಡಿರುವುದನ್ನು ತಿಳಿಸುತ್ತದೆ.

ಆಯ ಪದ್ದತಿಯು 'ಬಲೂತಾ' ಎಂಬ ಹೆಸರಿನಿಂದ ಮಹಾರಾಷ್ಟ್ರದಲ್ಲಿ ಸಾರ್ವತ್ರಿಕವಾಗಿ ಕಂಡುಬಂದಿದೆ. ಎಪ್ಪತ್ತರ ದಶಕದಲ್ಲಿಯೂ ಅದು ಆ ರಾಜ್ಯದ ಹಲವು ಕಡೆಗಳಲ್ಲಿ ಉಳಿದುಕೊಂಡಿದೆಯೆಂದು ವರದಿಗಳು ಹೇಳುತ್ತವೆ. 'ಬಲೂತಾ' ಎಂದರೆ ಗ್ರಾಮೀಣ ಕೈ ಕಸುಬಿನವರಿಗೆ ಹಾಗೂ ಗ್ರಾಮದ ಊಳಿಗದವರಿಗೆ ಕೊಡುವ ಧಾನ್ಯರೂಪದ ಸಂಭಾವನೆ ಅಥವಾ ಪಾಲು. ಉತ್ತರ ಪ್ರದೇಶ, ರಾಜಸ್ತಾನ, ಪಂಜಾಬ್, ಗುಜರಾತ್, ಆಂಧ್ರ ಪ್ರದೇಶ, ತಮಿಳುನಾಡು, ಕೇರಳದ ಮಲಬಾರ್ ಮುಂತಾದ ಭಾಗಗಳಲ್ಲಿ ಸಾಕಷ್ಟು ವ್ಯಾಪಕವಾಗಿ ಅದು ಕಂಡುಬಂದಿದೆ. ಉತ್ತರ ಭಾರತದ ಹಲವೆಡೆ ಅದನ್ನು 'ಜಜಮಾನಿ' ಎಂದು ಕರೆಯುತ್ತಾರೆ. ಆಯ ಪಡೆಯುವ ಹಕ್ಕನ್ನು 'ಜಜ್‌ಮಾನಿ ಹಕ್' ಎಂದೂ ಆಯದ ಕುಳಗಳಿಗೆ 'ಜಜಮಾನ್' ಎಂದೂ, ಆಯಗಾರರನ್ನು 'ಕಾಮೀನ್' 'ಪರ್ಜನ್' 'ಪರ್ಧಾನ್' 'ಕಾಮವಾಲ್' 'ಕಾಮ ಕರನೇವಾಲೇ' ಎಂದು ಬೇರೆ ಬೇರೆ ಹೆಸರುಗಳಿಂದಲೂ ಕರೆಯುತ್ತಾರೆ. ಒಟ್ಟಿನಲ್ಲಿ ಗ್ರಾಮೀಣ ಶ್ರಮ ಹಾಗೂ ಆ ಶ್ರಮಕ್ಕೆ ಕೊಡುವ ಸಂಭಾವನೆಯು ಆಯ ಅಥವಾ ಜಜಮಾನಿಯ ಸಾಂಸ್ಥಿಕ ರೂಪವನ್ನು ಪಡೆದು ಸಾರ್ವತ್ರಿಕವಾಗಿ ಬಳಕೆಯಲ್ಲಿದೆ.

**ಆಯದ ಪ್ರಾಚೀನತೆ**

ಆಯ ಪದ್ಧತಿಯು ಜಜಮಾನಿ, ಬಲೂತಾ ಮತ್ತೆ ಬೇರೆ ಯಾವುದೇ ಹೆಸರಿನಿಂದ ಕರೆಯಲ್ಪಟ್ಟಿರಲಿ, ಅದು ಗ್ರಾಮೀಣ ಭಾರತದಲ್ಲಿ ಬಹು ಪ್ರಾಚೀನ ಕಾಲದಿಂದಲೂ ಇದ್ದಿರಬಹುದೆಂದು ಊಹಿಸಲಾಗಿದೆ. ಪಶ್ಚಿಮ ಭಾರತದ ಗ್ರಾಮ ಸಮುದಾಯಗಳ ಇತಿಹಾಸವನ್ನು ಸಮೀಕ್ಷಿಸಿದ ಡಾ. ಎ.ಎಸ್. ಅಲ್ಟೇಕರ ಬಲೂತಾ ಪದ್ಧತಿಯು ಆರ‍್ಯರ ಕಾಲಕ್ಕೆ ಹುಟ್ಟಿರಬೇಕೆಂದೂ, ಅದು ಅವರಿಂದಲೇ ಕ್ರಮೇಣ ದಕ್ಷಿಣ ಭಾರತದ ಕಡೆ ಹಬ್ಬಿರಬೇಕೆಂದೂ ಬರೆಯುತ್ತಾರೆ. ಆದರೆ

'ಪೂರ್ವದ ಪ್ರಜಾಸತ್ತೆಗಳು' ಎಂಬ ಗ್ರಂಥದಲ್ಲಿ ರಾಧಾಕಮಲ ಮುಖರ್ಜಿಯವರು ಜಜಮಾನಿ ಪದ್ಧತಿಯು ಅಕ್ಕಿ ಬೆಳೆಯುವ ದಕ್ಷಿಣ ದ್ರಾವಿಡ ಜನಾಂಗಗಳಲ್ಲಿ ಮೊದಲಿಗೆ ಬಳಕೆಗೆ ಬಂದಿರಬೇಕೆಂದೂ ಅದು ನಿಧಾನವಾಗಿ ಉತ್ತರಕ್ಕೆ ಹರಡಿತೆಂದೂ ಅಭಿಪ್ರಾಯಪಡುತ್ತಾರೆ. ದ್ರಾವಿಡರಲ್ಲಿ ಪ್ರಚಲಿತವಾಗಿದ್ದ ಭೂಮಿಯ ಸಾಮುದಾಯಿಕ ಒಡೆತನ ಪದ್ಧತಿ ಮತ್ತು ಕಾಲಕಾಲಕ್ಕೆ ಭೂಮಿಯನ್ನು ಸಾಗುವಳಿಗಾಗಿ ಸರತಿಯಂತೆ ಹಂಚುವ ಪದ್ಧತಿ ಇವು ಆಯ ಪದ್ಧತಿಯ ಮೂಲವೆಂದು ತಿಳಿಯಲಾಗುತ್ತದೆ. ಗ್ರಾಮದ ಭೂಮಿಯು ಇಡೀ ಗ್ರಾಮದ ಒಡೆತನದಲ್ಲಿದ್ದಾಗ - ಅಂದರೆ 'ಪ್ರಾಚೀನ ಸಮತಾವಾದಿ' ಸಮುದಾಯಗಳು ಅಸ್ತಿತ್ವದಲ್ಲಿದ್ದಾಗ ಗ್ರಾಮದ ಕೆಲಸ ಕಾರ್ಯಗಳನ್ನು ನೋಡಿಕೊಳ್ಳುವ ಅಧಿಕಾರಿಗಳಿಗೂ ಸೇವಕರಿಗೂ ಕೈಕಸುಬಿನರಿಗೂ ನಿಶ್ಚಿತ ಪ್ರಮಾಣದಲ್ಲಿ ಧಾನ್ಯರೂಪದ ಸಂಭಾವನೆ ಕೊಡುವ ಪದ್ಧತಿಯು ಹುಟ್ಟಿಕೊಂಡಿರಬೇಕೆಂದು ಇವರ ಅಭಿಪ್ರಾಯ.

ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಕ್ರಿ.ಶ. 11ನೇ ಶತಮಾನದಿಂದ ಈಚೆಗೆ ಆಯಗಾರರ ಬಗ್ಗೆ ಹಲವು ಹತ್ತು ಪ್ರಸ್ತಾಪಗಳಿವೆ. ಈ ಆಯಗಾರರಲ್ಲಿ ಕೆಲವರನ್ನು ಒಂದೊಂದಾಗಿ ಹಿಂದಿನ ಶಾಸನಗಳು ಪ್ರಸ್ತಾಪಮಾಡಿವೆಯಾದರೂ ಇಲ್ಲಿಂದ ಮುಂದೆ ನಾಲ್ಕೈದು ಅಥವಾ ಹತ್ತುಹನ್ನೆರಡು ಆಯಗಾರರನ್ನು ಒಟ್ಟಾಗಿ ತಿಳಿಸುವ ಶಾಸನಗಳೂ ಸಿಗುತ್ತವೆ. ಕಲ್ಯಾಣಿ ಚಾಲುಕ್ಯ, ಹೊಯ್ಸಳ ಹಾಗೂ ಯಾದವ ಕಾಲದ ಶಾಸನಗಳಲ್ಲಿ ಗವುಂಡ, ಶಾನುಭೋಗ, ತಳಾರಿ, ಅಂಬಿಗ, ಬಾರಿಕಾರ, ತೋಟಿಗ, ಕಲ್ಲುಕುಟಿಕ, ಕಮ್ಮಾರ, ಅಕ್ಕಸಾಲಿಗ, ಬಡಗಿ, ಕ್ಷೌರಿಕ ಹಾಗೂ ಜ್ಯೋತಿಷಿಗಳ ಹೆಸರಿವೆಯೆಂದು ಡಾ. ದೀಕ್ಷಿತ್ ತಿಳಿಸುತ್ತಾನೆ. ಕ್ರಿ.ಶ. 1035ರ ಶಾಸನವೊಂದರಲ್ಲಿ 'ಅಕ್ಕಸಾಲಿಯಾಯ ಉಪ್ಪೊಳಗಾಗಿ ಧಾನ್ಯಂಗಳೊಳೆಲ್ಲಂ' ಎಂದು ಹೇಳಿದೆ. ಶೆಟ್ಟಿಕೆರೆಯ ಶಾಸನವೊಂದರಲ್ಲಿ ಜ್ಯೋತಿಷಿಗೆ ಇನಾಮು ಭೂಮಿ ಕೊಟ್ಟ ಪ್ರಸ್ತಾಪವಿದ್ದು ಅವನು 'ಊರಲಿದ್ದು ಊಳಿಗವ ನಡೆಸಿದರ' ಮಾತ್ರ ಈ ಭೂಮಿಯ ಹಕ್ಕು ಎಂದು ಹೇಳಲಾಗಿದೆ. ಕ್ರಿ.ಶ. 1077ರ ವೀರಗಲ್ಲೊಂದರಲ್ಲಿ ಆಳ ಎಂಬ ಅಕ್ಕಸಾಲಿ ಮತ್ತು ರಾಯ ಎಂಬ ಅಗಸ ಇವರಿಬ್ಬರಿಗೂ ಊರಿನವರಿಂದ ಆಯ ಪಡೆದುಕೊಂಡದ್ದನ್ನು ಹೇಳಿದೆ. 1098-99ರ ಶಾಸನದಲ್ಲಿ ಅಕ್ಕಸಾಲೆ, ಕಮ್ಮಾರನ ಆಯವನ್ನು ಪ್ರಸ್ತಾಪ ಮಾಡಲಾಗಿದೆ.[248]

ಆಯ ಹಾಗೂ ಆಯಗಾರರನ್ನು ಕುರಿತು ಈ ಕೆಳಗಿನ ಸಾಮಾನ್ಯ ವಿವರಣೆ ಇಟ್ಟುಕೊಳ್ಳಬಹುದೆಂದು ತೋರುತ್ತದೆ.

1. ಆಯವೆಂಬುದು ವಂಶಪಾರಂಪರ್ಯವಾಗಿ ವಿಶಿಷ್ಟ ಸೇವೆ ಮಾಡಿಕೊಂಡು ಬರುವ ವರ್ಗಕ್ಕೆ ಸಲ್ಲುವ ವಾರ್ಷಿಕ ಅಥವಾ ಆಯಾ ಬೆಳೆಯ ರಾಶಿಯ ಸಂಭಾವನೆ.

2. ಹಿಂದೆ ಒಕ್ಕಲುತನವೇ ನಮ್ಮ ಪ್ರಮುಖ ಉದ್ಯೋಗವಾಗಿದ್ದುದರಿಂದ, ಆಯಗಾರರು ಹೆಚ್ಚಾಗಿ ಒಕ್ಕಲಿಗರಿಗೇ ಸಂಬಂಧಪಟ್ಟವರಾಗಿರುತ್ತಿದ್ದರು. ಆ ಕಾರಣಕ್ಕಾಗಿ ಆಯವೆಂಬುದು ಧಾನ್ಯರೂಪದ ಸಂಭಾವನೆಯೆಂದು ಸಾಮಾನ್ಯವಾದ ಅರ್ಥ ರೂಢಿಗತವಾಯಿತು ಎನ್ನಬಹುದು.

3. ಒಕ್ಕಲಿಗರಲ್ಲದ ಇತರ ವೃತ್ತಿಕಾರರೂ ಇಂತಹ ಪರಂಪರಾಗತ ವರ್ಗದವರಿಂದ ಸೇವೆ ಪಡೆಯುತ್ತಿದ್ದರು. ಅವರು ನೀಡುತ್ತಿದ್ದ ತಮ್ಮ ಉತ್ಪಾದನೆ ಅಥವಾ ಸರಕುಗಳಾದ ಬಟ್ಟೆ, ಉಪ್ಪು, ಎಣ್ಣೆ ಮುಂತಾದ ಉಪಭೋಗ ವಸ್ತುಗಳೂ ವರುಷಕ್ಕೊಮ್ಮೆ ಅಥವಾ ಹಬ್ಬ ಹುಣ್ಣಿಮೆಗಳಿಗೊಮ್ಮೆ ಸಂದಾಯವಾಗುತ್ತಿದ್ದುದರಿಂದ ಅವುಗಳನ್ನೂ ಆಯದಲ್ಲೇ ಸೇರಿಸಬಹುದು.

4. ಆಯದ ಮೊತ್ತ ಎಷ್ಟಿರಬೇಕೆಂಬುದು ಹಲವು ಸಂದರ್ಭದಲ್ಲಿ ಆಯಾ ಸೇವಾ ಕಾರ್ಯದ ಅಗತ್ಯ ಹಾಗೂ ಪ್ರಮಾಣದ ಮೇಲಿಂದ ಸರ್ವಸಮ್ಮತ ತಿಳಿವಳಿಕೆಯ ಪ್ರಮಾಣದ ಮೇಲೆ ನಿಗದಿಯಾಗಿರುತ್ತಿತ್ತು. ಅಥವಾ ಪರಸ್ಪರ ಮನಃ ಸಮಾಧಾನದಿಂದ ನಿರ್ಣಯವಾಗುತ್ತಿದ್ದಿತು.

5. ಆಯಗಾರರಲ್ಲಿ ಸೇರುವವರು ಯಾರು ಯಾರು ಎಂಬುದು ಪ್ರದೇಶದಿಂದ ಪ್ರದೇಶಕ್ಕೆ ವಿಭಿನ್ನವಾಗುತ್ತದೆ. ಉತ್ತರ ಕರ್ನಾಟಕದಲ್ಲಿ ಗವುಡ, ತಳವಾರ, ಶಾನುಭೋಗ, ಜೋಯಿಸರು, ಆಯಗಾರರ ಪಟ್ಟಿಗೆ ಸೇರುವವರಲ್ಲ. ಅಗಸ, ನಾಯಿಂದ (ಕ್ಷೌರಿಕ), ಬಡಿಗ, ಕಮ್ಮಾರ, ಕುಂಬಾರ ಇವರು ಸರ್ವೇಸಾಮಾನ್ಯವಾಗಿ ಕಂಡುಬರುವ ಆಯಗಾರರು.[249]

## 4.9. ಹಣದ ವಿನಿಯೋಗ

ಕನ್ನಡ ಶಾಸನಗಳಲ್ಲಿ ದಾನಶಾಸನಗಳ ಸಂಖ್ಯೆಯೇ ಅತ್ಯಧಿಕ. ಶೇ.95ರಷ್ಟು ದಾನ ಶಾಸನಗಳೇ ಇವೆಯೆನ್ನಬಹುದು. ಇದು ಸಮಗ್ರ ಶಾಸನಗಳ ಅಧ್ಯಯನದಿಂದ ವಿಧಿತವಾಗುತ್ತದೆ. ದಾನಗಳನ್ನು 1) ವೈಯಕ್ತಿಕ ದಾನ, 2) ಸಾಮೂಹಿಕ ದಾನ ಎಂದು ವರ್ಗೀಕರಿಸಿ ಅಭ್ಯಸಿಸಬಹುದಾಗಿದೆ.

#### 4.9.1. ವೈಯಕ್ತಿಕ ದಾನ

ಕ್ರಿ.ಶ. 1221ರ ಕಡೂರು ಶಾಸನವು[250] 'ಬೊಪ್ಪೋಜನ ಮಗ ಅಕ್ಕಸಾಲೆ ಮಾರೋಜ ತನ್ನಕ್ಕಸಾಲಿಕೆಯ ಹಿಟ್ಟಿನ ಭೂಮಿಯೊಳಗೆ ಬ್ರಹ್ಮೇಶ್ವರ ದೇವರ ಅಂಗಭೋಗಕ್ಕೆ ಬಿಟ್ಟ ದತ್ತಿ' ಎಂಬ ಉಲ್ಲೇಖವು ಮಾರೋಜನು ಮಾಡಿದ ದಾನವನ್ನು ತಿಳಿಸುತ್ತದೆ. ಕುಂಬಾರರು ದೇವರ ಅಷ್ಟವಿಧಾರ್ಚನೆ ಹಾಗೂ ದಾನಶಾಲೆಯೊಂದಕ್ಕೆ ತಮ್ಮ ಆವಗೆಯೊಂದನ್ನು ದತ್ತಿ ಬಿಟ್ಟದ್ದನ್ನು ತೇರ್ದಾಳ್ ಶಾಸನ[251] ತಿಳಿಸುತ್ತದೆ. ಬೇಲೂರು ಶಾಸನವೊಂದು[252] 'ಗಾಣಿಗರ ಚೆಂನಿಸೆಟ್ಟಿಯ ಮಗನು ಸುರಿಸೆಟಿಯರು ಹೊಯಿಸಣೇಶ್ವರ ದೇವರಿಗೆ ಸುಂಣಕೆ ಕೊಟದುಯೆರಡು ಹೊನು' ಎಂಬ ಉಲ್ಲೇಖವು ಹೊಯಿಸಣೇಶ್ವರ ದೇವರಿಗೆ ಎರಡು ಹೊನ್ನು ಕೊಟ್ಟದ್ದನ್ನು ತಿಳಿಸುತ್ತದೆ. ಕ್ರಿ.ಶ. 1142ರ ಕೆಲ್ಲಂಗೆರೆಯ ಶಾಸನದಲ್ಲಿ ಜಕ್ಕವೆ ಎನ್ನುವ ತೆಲ್ಲಿಗ ಸ್ತ್ರೀ ಶಿವಾಲಯವನ್ನೆತ್ತಿಸಿದ[253] ಉಲ್ಲೇಖ ಬರುತ್ತದೆ. ಸಾಗರದ ಶಾಸನವೊಂದು[254] 'ಬಳ್ಳಿಗಾವೆಯ ನಗರದ ಕಂಚಗಾಱ ಮಾರೋಜ ಕಾಳಿಕಾದೇವಿಯ ದೇಗುಲವ ಕಲುವೆಸನಾಗಿ ಮಾಡಿಸಿದ ಈ ಧರ್ಮ್ಮವ ನಡೆಯಿಸುತಿರ್ಪ್ಪರ್ ಮಂಗಳ ಮಹಾಶ್ರೀ' ಎಂದು ಉಲ್ಲೇಖಿಸುತ್ತದೆ. ಮತ್ತೊಂದು ಶಾಸನದಲ್ಲಿ[255] ಕಂಚಗಾಱರು ಯಾವುದೇ ಹಣವನ್ನು ತೆಗೆದುಕೊಳ್ಳದೇ ದೇವರುಪಕರಣಗಳೆಲ್ಲವನ್ನು ಧರ್ಮಾರ್ಥವಾಗಿ ಮಾಡಿಕೊಟ್ಟದ್ದನ್ನು ತಿಳಿಸುತ್ತದೆ. ತರೀಕೆರೆ ಶಾಸನದಲ್ಲಿ[256] ಹತ್ತಿಯ ಕಾಳಿಸೆಟ್ಟಿಯ ಮೊಮ್ಮಗ ನಾಳ್ಪ್ರಭು ಬಸವೇಗೌಡ ಮಲ್ಲಿಕಾರ್ಜುನ ಗುಡಿಯ ನೈವೇದ್ಯ, ತ್ರಿಕಾಲಪೂಜೆ, ಚೈತ್ರಪವಿತ್ರ ಪರ್ವಕ್ಕೆ ಭೂದಾನ ಮಾಡಿದ ವಿವರಗಳಿವೆ. ಕ್ರಿ.ಶ. 1276ರ ಕೋಗಳಿಯ ಶಾಸನವು[257] 'ಕಂಮಾಱ ಕೇತೋಜನ ಮಗ ಬಸವೋಜ ಅಕ್ಷಯಭಂಡಾರವಾಗಿ ನಿತ್ಯಾಭಿಷೇಕಕ್ಕೆ ಕೊಟ್ಟ ಗ೧', ಅಂದರೆ ಚೆನ್ನಪಾರ್ಶ್ವದೇವರ ನಿತ್ಯಾಭಿಷೇಕಕ್ಕೆ ಕಂಮಾರ ಕೇತೋಜನ ಮಗ ಬಸವೋಜ ಹಣದ ದತ್ತಿ ನೀಡಿದ್ದನ್ನು ತಿಳಿಸುತ್ತದೆ.

ಕ್ರಿ.ಶ. 1101ರ ಮನಮತ್ತೂರ ಶಾಸನವು[258] ಬಡಗಿ ಚಿಕ್ಕೋಜನ ಮಗ ಮಸಣೋಜ ಚಿಕ್ಕೇಶ್ವರ ದೇವರನ್ನು ಪ್ರತಿಷ್ಠಾಪಿಸಿದ್ದನ್ನು ಉಲ್ಲೇಖಿಸುತ್ತದೆ.

ಹೀಗೆ ವಿರಳಸಂಖ್ಯೆಯಲ್ಲಿ ನಮಗೆ ವೈಯಕ್ತಿಕ ದಾನದ ವಿಷಯಗಳು ಶಾಸನಗಳಿಂದ ದೊರಕುತ್ತವೆ. ಒಟ್ಟಾರೆ ಶಾಸನಗಳನ್ನು ದೃಷ್ಟಿಯಲ್ಲಿಟ್ಟು ಹೇಳುವುದಾದರೆ ವೈಯಕ್ತಿಕವಾಗಿ ವರ್ತಕರುಗಳು ನೀಡಿದ ದಾನಗಳಲ್ಲಿ ಭೂದಾನಗಳ ಸಂಖ್ಯೆಯೇ ಜಾಸ್ತಿ ಇರುವುದು. ಈ ಹಿನ್ನೆಲೆಯಲ್ಲಿ ಇವರು ಮಾಡುತ್ತಿದ್ದ ವೈಯಕ್ತಿಕ ದಾನ-ಧರ್ಮಗಳನ್ನು ನೋಡಿದಾಗ

ಇವರ ಆರ್ಥಿಕ ಸ್ಥಿತಿ ಉತ್ತಮವಾಗಿದ್ದು ದೇವಾಲಯವನ್ನು ಕಟ್ಟಿಸುವ ಮಟ್ಟವನ್ನು ತಲುಪಿದ್ದು ಸಮಾಜದಲ್ಲಿ ಇವರ ಸ್ಥಾನಮಾನವನ್ನು ಗುರುತಿಸುತ್ತದೆ.

**4.9.2. ಸಾಮೂಹಿಕ ದಾನ**

ದೇವಾಲಯಗಳ ವಿವಿಧ ಕಾರ್ಯಗಳಿಗಾಗಿ ಸಂಯುಕ್ತವಾಗಿ ಬಿಟ್ಟ ದಾನಗಳನ್ನು ಸಾಮೂಹಿಕ ದಾನವೆನ್ನಲಾಗಿದೆ. ಅಭ್ಯಾಸದ ದೃಷ್ಟಿಯಿಂದ ವಿಭಾಗಿಸಲಾಗಿದೆ.

1. ಒಂದೇ ಪ್ರಕಾರದ ಕುಶಲಕರ್ಮಿಗಳು ನೀಡಿದ ದಾನಗಳು
2. ವಿವಿಧ ಪ್ರಕಾರದ ವರ್ತಕರು ಹಾಗೂ ಕುಶಲಕರ್ಮಿಗಳು ನೀಡಿದ ದಾನಗಳು

**ಒಂದೇ ಪ್ರಕಾರದ ಕುಶಲಕರ್ಮಿಗಳು ನೀಡಿದ ದಾನಗಳು**

ಕ್ರಿ.ಶ. 1174ರ ನಿಡಗುಂದಿ ಶಾಸನವು[259] ತೆಲ್ಲಿಗರೈವತ್ತೊಕ್ಕಲುಗಳವರು ಮಾಧವೇಶ್ವರದೇವರಿಗೆ ಊರೊಳಗಿನ ಗಾಣದಿಂದ ಪ್ರತ್ಯೇಕವಾಗಿ ಸೊಳಸಿಗೆ ಪ್ರಮಾಣದ ಸೊಂಟಿಗೆಯಷ್ಟು ಎಣ್ಣೆ ಹಾಗೂ ಬೇರೂರಿಂದ ಮಾರಲು ಬಂದ ಎಣ್ಣೆಯಲ್ಲಿ ಪ್ರತ್ಯೇಕ ಸೊಂಟಿಗೆಯೊಂದು ಎಣ್ಣೆಯನ್ನು ದೇವರಿಗೆ ದಾನವಾಗಿ ನೀಡಿದ್ದನ್ನು ತಿಳಿಸುತ್ತದೆ. ತೇರದಾಳ ತೆಲ್ಲಿಗರು[260] ಗೊಂಕಜಿನಾಲಯದ ದೇವರ ಸಂಜೆದೀಪ, ಧೂಪಾರತಿಗೆ ಗಾಣಕ್ಕೆ ಸೊಲ್ಲಗೆ, ಹಾಗೂ ಹೊರಗಿನಿಂದ ಬಂದ ಎಣ್ಣೆಯ ಕೊಡಕ್ಕೆ ಸೊಲ್ಲಗೆ ಎಣ್ಣೆಯನ್ನು ದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಕಂದಗಲ್ ಶಾಸನ [261] ತೆಲ್ಲಿಗೇಶ್ವರ ದೇವರ ಅಂಗರಂಗಭೋಗಕ್ಕೆ ಐವತ್ತೊಕ್ಕಲುಗಳು ತಾವು ಮಾಱುಗೊಂಡ ಎಳ್ಳಿಗೆ ಹೊಂಗೆ ವೀಸ, ಗಾಣಕ್ಕೆ ದಿನವೊಂದಕ್ಕೆ ಸೊಲಿಗೆಯೆಣ್ಣೆ, ಸಂತೆಯ ಕೊಡಕ್ಕೆ ಒಮ್ಮಾನ ಎಣ್ಣೆ ಹಾಗೂ ಮದುವೆಯಲಿ ವರ್ಷವೊಂದಕ್ಕೆ ೧ ಹಣವನ್ನು ಗಾಣ ಮೆಟ್ಟುವವರು ದಾನವಾಗಿ ಕೊಡುತ್ತಿದ್ದರು. ಇಂಗಳೇಶ್ವರ ಶಾಸನವು[262] 'ತೆಲ್ಲಿಗರ ಕೊತ್ತಳಿಗಳು ಗಾಣಕ್ಕೆ ಹಳಿಗೆವೊಂದು ಬಿಟ್ಟರು' ಎಂದು ಉಲ್ಲೇಖಿಸುತ್ತದೆ. ಇಲ್ಲಿ ತೆಲ್ಲಿಗರು ಸೋಮನಾಥ ಗುಡಿ ನಂದಾದೀವಿಗೆಗೆ ಹಳಿಗೆ ಪ್ರಮಾಣದ ಎಣ್ಣೆಯನ್ನು ದಾನ ನೀಡಿದ್ದು, ಕ್ರಿ.ಶ. 1206ರ ಧಾರವಾಡ ಶಾಸನವು[263] ತೆಲ್ಲಿಗರು ದೇವಿಯ ನಂದಾದೀವಿಗೆಗೆಂದು ಹಾಡ ಎಣ್ಣೆ ಸೌಟಿಗೆ ೧ ಕೊಟ್ಟಿದ್ದನ್ನು ಉಲ್ಲೇಖಿಸುತ್ತದೆ.

ಕ್ರಿ.ಶ. 1185ರ ಲಕ್ಕುಂಡಿ ಶಾಸನವು[264] 'ಬೆಳ್ಳಿಗಂಮಟದವರು ಅಜ್ಜಿಯ ವಸ್ತ್ರಾನಕ್ಕೆಂದು ಸಂಕ್ರಮಣದಲು ಕಮ್ಮಟಕ್ಕೆ ಬಿಟ್ಟ ಪಣ ೧ ಮತ್ತಂ ಬಡಗಿ ಕಮ್ಮಾರರು ವೊಕ್ಕಲಲೊನ್ದು ಹೊರೆಯಮಂ ಹನ್ನ ಸುಂ ಧಾನ್ಯದಲು ಬಳ್ಳವೊನ್ದುಮಂ ಬಿಟ್ಟರು ಎಂಬ ಉಲ್ಲೇಖವು ಬೆಳ್ಳಿಗಂಮಟದವರು ಒಂದು ಪಣವನ್ನು ಹಾಗೂ ಬಡಗಿ ಕಮ್ಮಾರವೊಕ್ಕಲಿನವರು ಒಂದು ಬಳ್ಳದಷ್ಟು ಧಾನ್ಯವನ್ನು (ಹನ್ನಸುಂ=?) ಧರ್ಮವಾಗಿ ಕೊಟ್ಟಿರುವುದನ್ನು ತಿಳಿಸುತ್ತದೆ.

ಕೆಲವು ಬಡಗಿಗಳನ್ನು ದೇವಾಲಯಗಳ ಸಂರಕ್ಷಣೆಗೆ ಅವರ ಜೀವನಕ್ಕೆ ರಾಜರು ದತ್ತಿಗಳನ್ನು ಬಿಟ್ಟಿದ್ದರ ಬಗ್ಗೆ ಶಾಸನ ಉಲ್ಲೇಖಿಸುತ್ತದೆ. ಮುಮ್ಮಡಿ ನರಸಿಂಹನ ಕಾಲದಲ್ಲಿ ಮರಿಯಾನೆಯೋಜ ಮತ್ತಿತರ ಬಡಗಿಗಳನ್ನು ಸೋಮನಾಥಪುರದ ದೇವಾಲಯದ ಸಂರಕ್ಷಣೆಗೆ ನೇಮಿಸಿದ್ದು ಸಂರಕ್ಷಣ ವೆಚ್ಚವಾಗಿ ದತ್ತಿ ನೀಡಿರುವುದನ್ನು ಟಿ. ನರಸೀಪುರದ ಶಾಸನ ವಿವರಿಸುವುದಾಗಿ ಆರ್. ಗೋಪಾಲ್‌ರವರು ಅಭಿಪ್ರಾಯಿಸುತ್ತಾರೆ.[265]

ಡಂಬಳದ ಶಾಸನವೊಂದು[266] ತೆಲ್ಲಿಗ ಐವತ್ತೊಕ್ಕಲನ್ನು ಅಲಂಕಾರಿಕವಾಗಿ ಸ್ತುತಿಸುತ್ತದೆ. ಈ ತೆಲ್ಲಿಗರು ಡಂಬಳದ ಬೌದ್ಧವಿಹಾರಕ್ಕೆ ಎಣ್ಣೆಯನ್ನು ದಾನ ಮಾಡುತ್ತಾರೆ. ಇವರು ತಮ್ಮ ದೇವರಿಗೆ (ತೆಲ್ಲಿಗೇಶ್ವರ) ಕಲ್ಲಿನ ದೇವಾಲಯಗಳನ್ನು ಕಟ್ಟಿಸಿ, ರಾಜ್ಯದ ಅಧಿಕಾರಿಗಳು, ಪ್ರತಿಷ್ಠಿತರು ಹಾಗೂ ತಪೋಧನರನ್ನು ಸೇರಿಸಿ ದಾನ ನೀಡಿ ಅದನ್ನು ಶಿಲಾಶಾಸನಗಳಲ್ಲಿ ದಾಖಲಿಸಿಕೊಳ್ಳುತ್ತಿದ್ದುದು ಅನೇಕ ಶಾಸನಗಳಲ್ಲಿ[267] ದೃಷ್ಟಾಂತವಾಗಿದೆ. ಇವರ ದೇವರು ಇವರ ಕುಲನಾಮವನ್ನೇ ಸಾಧಾರಣವಾಗಿ ಹೊತ್ತಿರುತ್ತಿತ್ತು. ತೆಲ್ಲಿಗೇಶ್ವರ ಎಂಬ ಹೆಸರು ಸಾಮಾನ್ಯವಾಗಿ ಕಂಡುಬರುತ್ತದೆ. ಇದಲ್ಲದೆ ಇವರಲ್ಲಿ ನಖರ ಶ್ರೇಣಿಯ ಸೆಟ್ಟಿಗಳು ನಖರೇಶ್ವರ ದೇವಾಲಯ[268]ವನ್ನು ಕಟ್ಟಿಸಿದ್ದು ಇದೆ. ಕೆಲವು ಉದಾಹರಣೆಗಳಲ್ಲಿ ಗಳಗೇಶ್ವರ ದೇವರು[269], ವೀರಭದ್ರದೇವರು[270], ದುರ್ಗಾದೇವತೆ [271] ಮುಂತಾದ ದೇವರಿಗೆ ದತ್ತಿ ಬಿಟ್ಟದ್ದು ಕಂಡುಬರುತ್ತದೆ. ಹೆಚ್ಚಾಗಿ ಈಶ್ವರ ದೇವಾಲಗಳಿಗೇ ದತ್ತಿ ಕೊಟ್ಟಿರುವುದು. ಅಯ್ಯಾವೊಳೆ ಐನೂರ್ವರು ಸ್ವಾಮಿಗಳು ಗವರೇಶ್ವರ ದೇವಾಲಯದ ಅಂಗಭೋಗ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ದತ್ತಿ ಬಿಟ್ಟಿದ್ದನ್ನು ಸಂಸಿ ಶಾಸನ[272] ತಿಳಿಸುತ್ತದೆ. ಕುರುಗೋಡ ನಕರರು ಗವರೇಶ್ವರ ದೇವಾಯಲಕ್ಕೆ ದತ್ತಿ ಬಿಟ್ಟದ್ದನ್ನು ಶಾಸನವೊಂದು[273] ತಿಳಿಸುತ್ತದೆ.

ಈ ಮೇಲಿನ ಶಾಸನಗಳ ವಿವರಗಳಿಂದ 1) ತೆಲ್ಲಿಗರು ಅಧಿಕ ಸಂಖ್ಯೆಯ ದಾನ ನೀಡಿದ್ದಾರೆ. 2) ತೆಲ್ಲಿಗರು ದೇವಾಲಯದ ನಂದಾದೀವಿಗೆಗೆ ಎಣ್ಣೆಯನ್ನೂ, ಕೆಲವು ಸಂದರ್ಭದಲ್ಲಿ ಹಣವನ್ನು ದತ್ತಿ ನೀಡಿದ್ದಾರೆ. 3) ಕೆಲವೊಮ್ಮೆ

ಸಂತೆಗೆ ಹೋದಾಗ ನೀಡಿದ ದಾನಗಳು ಇದರಲ್ಲಿವೆ. 4) ತೆಲ್ಲಿಗರು ತೆಲ್ಲಿಗೇಶ್ವರ, ನಕರರು ನಕರೇಶ್ವರ ಹೀಗೇ ತಮ್ಮ ತಮ್ಮ ವೃತ್ತಿಯ ಹೆಸರಿನ ದೇವಾಲಯಗಳನ್ನು ಕಟ್ಟಿಸುವುದು ಇಲ್ಲವೇ ದೇವಾಲಯಗಳಿಗೇ ವಿಶೇಷವಾಗಿ ದಾನ ಮಾಡಿದ್ದಾರೆ. 5) ಕೆಲವು ಸಲ ಬಣಜಿಗರು, ಮುಮ್ಮರಿದಂಡರು, ನಕರರು ಗವರೇಶ್ವರ ದೇವಾಲಯಕ್ಕೂ ಅಯ್ಯಾವೊಳೆ ಐನೂರ್ವರು, ತೆಲ್ಲಿಗೇಶ್ವರ, ಗವರೇಶ್ವರ ದೇವಾಲಯಗಳಿಗೂ ದತ್ತಿ ಬಿಟ್ಟಿದ್ದಾರೆ.

**ವಿವಿಧ ಪ್ರಕಾರದ ವರ್ತಕ ಕುಶಲಕರ್ಮಿಗಳು ನೀಡಿದ ದಾನಗಳು**

ನಾಡಿನ ಬೇರೆ ಬೇರೆ ಸ್ಥಳಗಳಿಂದ ಸಂತೆಗೆ ಬಂದ ನಕರ ಮುಮ್ಮರಿದಂಡ ಗವರೆ ಗಾತ್ರಿಗ ಸೆಟ್ಟಿಗುತ್ತ ಮೊದಲಾದ ವರ್ತಕ ಪ್ರಕಾರದವರು ಮಾತ್ರ ಒಟ್ಟಾಗಿ ಸೇರಿ ನೀಡಿದ ದಾನಗಳು ಇಲ್ಲಿ ಸಮಾವೇಶಗೊಳ್ಳುತ್ತವೆ.

ಲಕ್ಷ್ಮೇಶ್ವರ ಶಾಸನವು[274] 'ಗವಳಿ ರಾಜಸೆಟ್ಟಿ ಓಲೆಯ ಚಟ್ಟಿಸೆಟ್ಟಿ ಚುಂಗ [ರ ಕಾ] ಳ ಸೆಟ್ಟಿ ಚುಂಗರ ರೇವಿಸೆಟ್ಟಿ ಗನ್ದಿಗ ರೇವಿಸೆಟ್ಟಿ ಮುಖ್ಯವಾಗಿ ಮು(ಂ) ಮುರಿದಣ್ಡಮುಮಿರ್ದ್ದು ರಾಮೇಶ್ವರದೇವ ರಂಗಭೋಗಕ್ಕೆ ಹಸುಂಬೆ[ಗೆ] ಹಾಗವಂ ಸ್ಥಾಯಿಯಾಗಿ ಬಿಟ್ಟರು' ಎಂದು ಉಲ್ಲೇಖಿಸುತ್ತದೆ. ಅಂದರೆ ರಾಮೇಶ್ವರದೇವರಿಗೆ ಎಲ್ಲಾ ಸೆಟ್ಟಿಯರು ಸೇರಿ ದತ್ತಿ ಬಿಟ್ಟಿದ್ದನ್ನು ಇದು ತಿಳಿಸುತ್ತದೆ.

ಕ್ರಿ.ಶ. 1054ರ ಬಳ್ಳಿಗಾವೆಯ ಶಾಸನ [275]ವೊಂದರಲ್ಲಿ ಬಳ್ಳಿಗಾವೆಯ ವಡ್ಡ ವ್ಯವಹಾರಿ ಸೋವಿಸೆಟ್ಟಿ ಎಂಬಾತನು ಸೋಮೇಶ್ವರ ದೇವರನ್ನು ಪ್ರತಿಷ್ಟಿಸಿ ಅದಕ್ಕೆ ಬೇಕಾದಷ್ಟು ಭೂಮಿ, ತೋಟ, ಅಂಗಡಿಗಳನ್ನು ಬಿಡುತ್ತಾನೆ. ಅದು ಕಾಲಕ್ರಮೇಣ ಜೀರ್ಣವಾಗುತ್ತದೆ. ಅದು ಜೀರ್ಣವಾದಾಗ ಅದರ ಜೀರ್ಣೋದ್ಧಾರದ ವಿಷಯದಲ್ಲಿ ನಗರಕ್ಕೆ ನಗರವೇ ಆಸಕ್ತಿಯನ್ನು ವಹಿಸುತ್ತದೆ. ಅದರಲ್ಲಿಯೂ ಮುಖ್ಯವಾಗಿ ಅಲ್ಲಿಯ ವರ್ತಕರು, ಅವರ ನಾಯಕರಾದ ಪಟ್ಟಣಸಾವಿ ಮೇಚಿಸೆಟ್ಟಿ, ಕೀರ್ತಿಸೆಟ್ಟಿ ಮುಂತಾದವರೂ ಸಮಸ್ತ ನಗರವೂ ಸೇರಿ ಆ ಊರಿನ ಪಂಚಮಠ, ಹಿರಿಯಮಠ, ಭೇರುಂಡೇಶ್ವರದಾಚಾರ್ಯ ಮೂಲಿಗ ಮಧುಕೇಶ್ವರ ಪಂಡಿತದೇವರು ಮುಂತಾದ ಮಠಾಧಿಪತಿಗಳ ಮುಂದೆ, ಜೀರ್ಣೋದ್ಧಾರದ ಕಾರ್ಯವನ್ನು 'ತಮ್ಮ ಧರ್ಮವಾಗಿ ಕೊಂಡು', ಎಂದರೆ ಅದು ತಮ್ಮ ಧರ್ಮವೆಂಬಂತೆ ಭಾವಿಸಿ, ಜೀರ್ಣೋದ್ಧಾರದ ಬಳಿಕ ಅದಕ್ಕೆ ಗವಳೇಶ್ವರ ದೇವರೆಂದು ಹೆಸರಿಡುತ್ತಾರೆ. ಈ ವಿಷಯವನ್ನು ಹೇಳಿಯಾದ ಮೇಲೆ ಆ ದೇವಸ್ಥಾನಕ್ಕೆ ಬೇರೆ ಬೇರೆ ವ್ಯಕ್ತಿಗಳೂ, ಶ್ರೇಣಿಗಳೂ, ಅಧಿಕಾರಿಗಳೂ ಬಿಟ್ಟುಕೊಟ್ಟ ದತ್ತಿಗಳ ದೊಡ್ಡ ಪಟ್ಟಿಯೂ ಬರುತ್ತದೆ. ಶಾಸನದಲ್ಲಿ ಆ ನಗರದ ಅಂಗಡಿಯವರು, ಚಿನ್ನಗೆಯಿಕದ ವ್ಯವಹಾರಿಗಳು, ಸ್ಥಳದ ಗವಳಿಗಳು,

ನಾನಾದೇಶಿ ಗವಱೆಗಳು, ದೂಸಿಗ ವ್ಯವಹಾರಿಗಳು ತಮ್ಮ ತಮ್ಮ ಆದಾಯಗಳಲ್ಲಿ ಒಂದು ಭಾಗವನ್ನು ಬಿಟ್ಟುಕೊಡುತ್ತಾರೆ. ಹೆಜ್ಜುಂಕ ಮತ್ತು ವಡ್ಡರಾವುಳಗಳನ್ನು ನೋಡಿಕೊಳ್ಳುವ ದಂಡನಾಯಕರು ಹತ್ತರಲ್ಲಿ ಒಂದು ಹೇರಿನ ಸುಂಕವನ್ನು ಬಿಟ್ಟುಕೊಡುತ್ತಾರೆ.

ಬೆಳಗಾವಿಯ ಶಾಸನವೊಂದರಲ್ಲಿ[276] 'ವೇಣುಗ್ರಾಮದ ಸಮಸ್ತ ಮುಮ್ಮುರಿದಂಡರು, ನಾನಾದೇಶಿ ಮುಮ್ಮುರಿದಂಡರರು ಪರಶುರಾಮನಾಯಕ, ಪೊಮ್ಮಣನಾಯಕ, ಅಮ್ಮುಗಿನಾಯಕ ಮೊದಲಾದ ಸಮಸ್ತ ಲಾಳ ವ್ಯವಹಾರಿಗಳು, ಪಡಪನಾಯಕ, ಕೊಂಡ ನಂಬಿಶೆಟ್ಟಿ, ಪೊಱೆಯಚಶೆಟ್ಟಿ ಮೊದಲಾದ ಮಲೆಯಾಳ ವ್ಯವಹಾರಿಗಳು, ಮತ್ತೆ ಅದೇ ವೇಣುಗ್ರಾಮ ಸ್ಥಳದ ಚಿನ್ನದ ವ್ಯಾಪಾರಿಗಳು, ದೂಸಿಗ ಪರದರು (ಬಟ್ಟೆ ವ್ಯಾಪಾರಿಗಳು), ತೆಲ್ಲಿಗರು, ದಿಂಕಸಾಲಿಗರು ಮೊದಲಾದವರೆಲ್ಲ ಸೇರಿ ಶಾಂತಿನಾಥ ದೇವರ ಬಸದಿಗೆ ದಾನಕೊಟ್ಟ ಸಾಕಷ್ಟು ದಾನದ ವಿವರಗಳು ಇದರಲ್ಲಿವೆ.

ಮುಳುಗುಂದ ಶಾಸನವೊಂದರಲ್ಲಿ[277] ಅಲ್ಲಿನ ನಗರೇಶ್ವರ ದೇವಾಲಯದ ತಪೋಧನರಿಗೆ ಅಲ್ಲಿಯ ಗಾವುಂಡಗಳು ಭೂಮಿದಾನ ಕೊಡುವಾಗ 120 ಮಹಾಜನಗಳು, 5 ಜನ ಸಾಲಿಗರು, 120 ಜನ ತೆಲ್ಲಿಗರು, 5 ಜನ ಮಾಲೆಗಾರರು ಸೇರಿ ಕೊಟ್ಟಿದ್ದನ್ನು ತಿಳಿಸುತ್ತದೆ.

ಹೀಗೆ ಮಧ್ಯಕಾಲೀನ ಕರ್ನಾಟಕದ ಉತ್ಪಾದಕ ವಿನಿಮಯ ವರ್ತಕರು ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ದಾನ ಕಾರ್ಯ ನಿರ್ವಹಿಸಿದ್ದಾರೆ. ಇವುಗಳಲ್ಲಿ ಸಾಮೂಹಿಕ ದಾನಗಳೇ ಅತ್ಯಧಿಕವಾಗಿರುತ್ತವೆ. ಇಲ್ಲಿ ವರ್ತಕರ ತ್ಯಾಗಗುಣ ಹಾಗೂ ಭಕ್ತಿಭಾವಗಳು ಕಂಡುಬರುತ್ತವೆ. ಇದಲ್ಲದೆ ವರ್ತಕರು ಅಂದಿನ ಕಾಲದಲ್ಲಿ ಹೊಂದಿದ್ದ ಉತ್ತಮ ಆರ್ಥಿಕ ಸ್ಥಿತಿಗತಿ ಹಾಗೂ ವಿವಿಧ ಸಂಘಗಳೊಂದಿಗೆ ಅವರು ಇಟ್ಟುಕೊಂಡಿದ್ದ ಸಹಕಾರ ಭಾವನೆಗಳೂ ವ್ಯಕ್ತವಾಗುತ್ತದೆ.

## 4.10. ಸಂಘಟನೆಗಳು

ಉತ್ಪಾದನೆ, ವಿನಿಮಯ ವ್ಯವಹಾರಗಳು ಬೆಳೆಯುತ್ತ ಬಂದಂತೆ ಅವನ್ನು ವ್ಯವಸ್ಥಿತಗೊಳಿಸಿಕೊಳ್ಳುವ ಅಗತ್ಯತೆ ತಲೆದೋರಿದ್ದು ಸಂಘ ನಿರ್ಮಾಣಕ್ಕೆ ಕಾರಣವಾದಂತಿದೆ. ಆದ್ದರಿಂದ ಸಮಾಜ ವ್ಯವಸ್ಥೆಯಲ್ಲಿ ಸಹಕಾರ ತತ್ವಕ್ಕಿರುವ ಮಹತ್ವ ಮನಗಂಡು ಸಮಾನ ವೃತ್ತಿಯವರು ತಮ್ಮ ಸಮಾಜದ ಇಲ್ಲವೆ ಸಮುದಾಯದ ಜನರೊಂದಿಗೆ ಕೂಡಿಕೊಂಡು

ಕಟ್ಟಿದ ಶ್ರೇಣಿ (Guilds) ಗಳೇ ಸಂಘಗಳಾದವು. ಪ್ರಾಚೀನ ಬರಹಗಳಲ್ಲಿ ಶ್ರೇಣಿ, ಸಂಘ, ಗಣ, ಪೂಗ, ವ್ರಾತ ಇತ್ಯಾದಿ ಅನೇಕ ಸಮಾನಾರ್ಥ ಪದಗಳಿವೆ. ವೇದ ಗ್ರಂಥಗಳಲ್ಲಿ ಈ ಪದಗಳನ್ನು ಒಂದು ಗುಂಪು ಅಥವಾ ಪಂಗಡ ಎಂಬ ಸಾಮಾನ್ಯ ಅರ್ಥದಲ್ಲಿ ಉಪಯೋಗಿಸಲಾಗಿದೆ. ಆದರೆ ಕ್ರಮೇಣ ಈ ಪದಗಳು ಪಾರಿಭಾಷಿಕ ಧ್ವನಿ ಹೊಂದಿದವು. ಪಂಡಿತರುಗಳು ಈ ಪದಗಳಿಗೆ ವಿವಿಧ ಪಾರಿಭಾಷಿಕ ಅರ್ಥಗಳನ್ನು ಕೊಟ್ಟರು. ಕನಿಷ್ಠ ಪಕ್ಷ ಬೌದ್ಧಶಕೆಯ ಆರಂಭದಿಂದಲಾದರೂ ಕೈಗಾರಿಕಾ ಶ್ರೇಣಿಗಳು ಮತ್ತು ವೃತ್ತಿ ಸಂಬಂಧಿ (ಅಥವಾ ವಾಣಿಜ್ಯ) ಶ್ರೇಣಿಗಳು ಎಂಬ ಎರಡು ವಿಧದ ಶ್ರೇಣಿಗಳು ಪ್ರಬುದ್ಧಮಾನಸ್ಥಿತಿಯಲ್ಲಿದ್ದವೆಂದೂ, ಇವುಗಳಲ್ಲಿ ಕೆಲವು ಆಯಾ ಜಾತೀಯರಿಗೆ ಮಾತ್ರವೂ ಇನ್ನು ಕೆಲವು ವಿವಿಧ ಜಾತೀಯರಿಗೂ ಸದಸ್ಯತ್ವದ ಅವಕಾಶವನ್ನು ನೀಡಿದ್ದಾವೆಂದೂ ನಾವು ಈ ಅರ್ಥ ವಿವರಣೆಗಳಿಂದ ನಿರ್ಣಯಿಸಬಹುದಾಗಿದೆ.

ಎ) 'ಶ್ರೇಣಿ'ಯು ಒಂದೇ ಜಾತಿಗೆ ಸೇರಿದ ಕುಶಲವೃತ್ತಿಯವರ ಗುಂಪು ಎಂಬುದಾಗಿ 'ವೈಜಯಂತಿ' (237.90)ಯಲ್ಲಿ ಹೇಳಲಾಗಿದೆ. ಒಂದೇ ಜಾತಿಗೆ ಸೇರಿದ ಒಂದೇ ತರಹ ವೃತ್ತಿಯಿಂದ ಜೀವನ ಮಾಡುವ ಜನರಗೋಷ್ಠಿಯೇ 'ಶ್ರೇಣಿ' ಎಂದು ಅಪಾರ್ಕನ ಯಾಜ್ಞವಲ್ಕ್ಯ ವ್ಯಾಖ್ಯಾನ (II.192)ದಲ್ಲಿ ವಿವರಿಸಲಾಗಿದೆ. ಇವುಗಳಿಗೆ ಪ್ರತಿಯಾದ ಅರ್ಥವನ್ನು ವಿಜ್ಞಾನೇಶ್ವರನು (ಯಾಜ್ಞವಲ್ಕ್ಯ ಕುರಿತು, II 30 ಮತ್ತು 192) ಕೊಟ್ಟಿರುತ್ತಾನೆ. ಅವನ ಪ್ರಕಾರ, ವಿವಿಧ ಜಾತಿಯವರಾದರೂ ಒಂದೇ ಜಾತಿಯ ವೃತ್ತಿಯನ್ನು ಅನುಸರಿಸುವ ಒಂದು ಜನ ಸಮುದಾಯವನ್ನು 'ಶ್ರೇಣಿ' ಎಂದು ಕರೆಯಬಹುದು. ಕುದುರೆ ವ್ಯಾಪಾರಿಗಳ, ವಿಳ್ಳೆದೆಲೆ ಮಾರುವವರ, ನೇಯ್ಗೆಯವರ, ಚಮ್ಮಾರರ ಮತ್ತು ಸಾಮಾನ್ಯವಾಗಿ ಯಾವುದಾದರೂ ಸರಕನ್ನು ತಯಾರಿಸುವುದರಿಂದ ಜೀವಿಸುವವರ ಒಂದು ಜನ ಸಮುದಾಯವನ್ನು 'ಶ್ರೇಣಿ' ಎಂದು ಆತನು ವಿವರಿಸುತ್ತಾನೆ.

ಬಿ) 'ನೈಗಮ' ಎಂದರೆ ವ್ಯಾಪಾರಕ್ಕಾಗಿ ಇತರೆ ದೇಶಗಳಿಗೆ ಹೋಗುವ ವಿವಿಧ ಜಾತಿಯವರ ಗುಂಪು ಎಂದು ಅಪಾರ್ಕನ (ಯಾಜ್ಞವಲ್ಕ್ಯ ಕುರಿತುII 192) ಪ್ರಕಾರವೂ ಪ್ರವಾಸಿಗರ ತಂಡದ ವ್ಯಾಪಾರಿಗಳು ಎಂದು 'ಸ್ಮೃತಿಚಂದ್ರಿಕಾ' (ಸಂಪುಟ III ಪು. 523) ಪ್ರಕಾರವೂ ಅರ್ಥವಾಗುತ್ತದೆ.

ಸಿ) 'ಗಣ' ಎಂದರೆ ಕುಲಗಳ ಗುಂಪು ಎಂದರ್ಥ (ಕಾತ್ಯಾಯನ ಸ್ಮೃತಿ, ಶ್ಲೋಕ 680), ಒಂದೇ ವೃತ್ತಿ ಅನುಸರಿಸುವ ಸಶಸ್ತ್ರ ಜನರ ಸಭೆ ಅಥವಾ ಕುದುರೆ ವ್ಯಾಪಾರಿಗಳ ಶ್ರೇಣಿ ಎಂದೂ ಹೇಳಲಾಗಿದೆ.

ಡಿ) 'ಪೂಗ ' ಎಂಬುದು ವ್ಯಾಪಾರಿಗಳು ಇತ್ಯಾದಿಯವರ ಸಂಘ (ಕಾತ್ಯಾಯನ ಸ್ಮೃತಿ), ವಿಜ್ಞಾನೇಶ್ವರನ ಪ್ರಕಾರ 'ಪೂಗ' ಒಂದು ಪ್ರದೇಶದಲ್ಲಿರುವ ವಿವಿಧ ಜಾತಿ ಹಾಗೂ ವಿವಿಧ ವೃತ್ತಿಯವರ ಸಂಘವಾಗಿರುತ್ತದೆ (ಯಾಜ್ಞವಲ್ಕ್ಯ ಕುರಿತು ವಿಜ್ಞಾನೇಶ್ವರ, II 30) ; ಕೃಷಿ, ವ್ಯಾಪಾರ ಮತ್ತು ಯುದ್ಧ ಮಾಡುವ ವೃತ್ತಿಯಿಂದ ಜೀವಿಸುವವರ ಒಂದು ಮಾದರಿಯ ಸಂಘದ ಬಗ್ಗೆ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಉಲ್ಲೇಖವಿದೆ.[278]

### 4.10.1. ವೃತ್ತಿ ಸಂಘಗಳು

ಜೀವನ ನಿರ್ವಹಣೆಗೆ ವೃತ್ತಿ ದುಡಿಮೆ ಅಗತ್ಯ. ಇದನ್ನು ಪ್ರೀತಿಸುವ ಗೌರವಿಸುವ, ಮೇಲಾಗಿ ಲೋಕಹಿತಕ್ಕಾಗಿ ಬಳಸುವ ಮನೋಧರ್ಮ ಭಾರತದಲ್ಲಿ ಒಂದು ಪರಂಪರೆಯಾಗಿ ಬೆಳೆದಿದೆ. ದೈಹಿಕವೇ ಇರಲಿ, ಬೌದ್ಧಿಕವೇ ಇರಲಿ, ತಮ್ಮ ತಮ್ಮ ವೃತ್ತಿಗಳ ಅಭಿವೃದ್ಧಿಗಾಗಿ ಪ್ರಾಚೀನ ಕನ್ನಡಿಗರು ಸಂಘಗಳನ್ನು ಅಸ್ತಿತ್ವಕ್ಕೆ ತಂದಿದ್ದರು. ಮುಂದಿನ ಕಾಲಾವಧಿ ಯಲ್ಲಿ ಇವು ತಮ್ಮ ಅಸ್ತಿತ್ವವನ್ನು ಕಳೆದುಕೊಂಡರೂ ಅನುಯಾಯಿಗಳು ಮಾತ್ರ ಅವುಗಳ ಹೆಸರನ್ನು ಬಳಸುತ್ತ ಬರುತ್ತಿದ್ದರು. ಶಾಸನಗಳಲ್ಲಿ ಇಂಥ ವೃತ್ತಿಜೀವಿಗಳ ವೃತ್ತಿ ಸಂಘಗಳ ವಿಷಯ ಪದೇ ಪದೇ ದಾಖಲಾಗಿದೆ.[279]

ಪ್ರಾಚೀನ ಮತ್ತು ಮಧ್ಯಕಾಲೀನ ಕನ್ನಡ ಶಾಸನಗಳಲ್ಲಿ ಸಂಘಕ್ಕೆ ಪರ್ಯಾಯವಾಗಿ ಕೊತ್ತಳಿ, ಒಕ್ಕಲು, ಸಮಯ, ಹಿಟ್ಟು, ಸಂಖ್ಯೆ (30, 40, 50, 60, 500, 1000 ಇತ್ಯಾದಿ) ಗಳು ಬಳಕೆಯಾಗಿವೆ. ಇವುಗಳಲ್ಲಿ ಸಂಘ ಸೂಚಿಯಾಗಿ ಸಂಖ್ಯೆಗಳನ್ನೇ ಅಧಿಕವಾಗಿ ಉಪಯೋಗಿಸಲಾಗಿದೆ. ಅರುವತ್ತೊಕ್ಕಲು, ಐಯ್ವತ್ತೊಕ್ಕಲು, ಅಯ್ಯಾವೊಳೆ ಐನೂರ್ವರು, ಸಾಲಿಗಸಮಯ, ಎಂಟುಹಿಟ್ಟು, ಪಂಚಮಠ ಇವೇ ಮೊದಲಾದವು ಈ ಸಂಘ ಸಂಸ್ಥೆಗಳು.

ಈ ಸಂಘಸೂಚಿ ಪದಗಳ ಪೂರ್ವಸ್ಥಾನದಲ್ಲಿ ಹೆಚ್ಚಾಗಿ ವೃತ್ತಿ ಸೂಚಿ ಪದಗಳಿರುತ್ತವೆ. ಉದಾ : ತಂಗುಲಿಗ ಸಾಸಿರ್ವರು, ತೆಲ್ಲಿಗರೈವತ್ತೊಕ್ಕಲು, ಸಾಲಿಗ ಸಮಯ ಇತ್ಯಾದಿ. ಇವುಗಳನ್ನು ಒಂದೊಂದಾಗಿ ಹೀಗೆ ಪರಿಶೀಲಿಸಬಹುದು.

ನೇಕಾರರು ಆಯಾ ಗ್ರಾಮಗಳಲ್ಲಿ ರಚಿಸಿಕೊಂಡ ಸಂಘದ ಹೆಸರು 'ಸಾಲೆ ಸಾಸಿರ್ವರು'[280] ಈ ಸಂಘದ ಪರ್ಯಾಯ ಪದ 'ಸಾಸಿರ್ವ್ವರ ಸಮಯ'[281], 'ಪಟ್ಟಗಾಱ ಸಮಯ'[282], 'ಜೇಡಗೊತ್ತಳಿ'[283], 'ಪಟ್ಟಗಾಱ ಸೇಣಿ'[284] ಎಂಬುವು ಈ ಸಂಘದ ವಿವಿಧ ಹೆಸರುಗಳಾಗಿವೆ. 'ಸಾಲಿಗರಯ್ವದಿಂಬರು'[285], 'ಸಾಲಿಗ ಮೂನೂರ್ವರು'[286] ಮುಂತಾದ ಉಲ್ಲೇಖಗಳು ಕೆಲವೊಮ್ಮೆ ಬರುವುದರಿಂದ ಆಯಾ ವಸತಿಯಲ್ಲಿ ಸಾಲಿಗರು ರಚಿಸಿಕೊಂಡ ಸಂಘಟನೆಯ ಸದಸ್ಯತ್ವವನ್ನು ಇದು ನಿರ್ದಿಷ್ಟವಾಗಿ ಸೂಚಿಸಿದಂತೆ ತೋರುತ್ತದೆ. ಆಂತರಂಗಿಕ ವೈವಿಧ್ಯತೆ ಇವರಲ್ಲಿ ಕಂಡುಬರುತ್ತದೆ.

ಇವರಲ್ಲೇ ವೃತ್ತಿಯ ಜೊತೆಗೆ ಉಪವೃತ್ತಿಗಳನ್ನು ಮಾಡಿಕೊಂಡು ಹೋಗುತ್ತಿದ್ದ ವರ್ಗ ಇದಾಗಿದೆ. ಉದಾ: ನೇಕಾರರೆಂಬುದು ಸಾಮಾನ್ಯ ವೃತ್ತಿಯಾದರೆ, ಪಟ್ಟಗಾರರು ರೇಷ್ಮೆ ಬಟ್ಟೆಗಳನ್ನು ನೇಯುವವರು, ಜೇಡರು ಬಹುಶಃ ಹತ್ತಿ ಬಟ್ಟೆಗಳನ್ನು ನೇಯುವವರು, ಕದಿರ ಕಾಯಕದವರು ಹತ್ತಿಯಿಂದ ನೂಲು ತಯಾರಿಸುವವರು ಹಾಗೂ ಸೆಟ್ಟಿಗಳು ಕೂಡ ಇದ್ದರು.

ಕಮ್ಮಾರರ ಕೇರಿಯಲ್ಲಿ ಇರುತ್ತಿದ್ದ ಕಮ್ಮಾರರನ್ನು ಒಕ್ಕಲುಗಳೆಂದು ಕರೆಯಲಾಗಿದೆ. ಇಲ್ಲಿ ಒಕ್ಕಲು ಎಂಬ ಶಬ್ದ ಕಬ್ಬಿಣ ಕೆಲಸ ಮಾಡುತ್ತಿದ್ದ ಕಮ್ಮಾರರನ್ನು ಸೂಚಿಸುತ್ತದೆ ಎಂಬುದು 'ಅಕ್ಕಸಾಲಿ ಬಡಗಿ ಕಮ್ಮಾಱರೊಕ್ಕಲದೊಂದು ತೆನೆಯ ಹೊಱ ಹೆಡಗೆಯಲುಪ್ಪು ಮಾನ ೧ ನೂಲಪರ್ವ್ವಕ್ಕೆಯೊಕ್ಕಲದೊಂದು'[287], 'ಬಡಗಿ ಕಮ್ಮಾರರು ವೊಕ್ಕಲಲೊಸ್ದು ಹೊರೆಯಮಂ ಹನ್ನ ಸುಂ ಧಾನ್ಯದಲು ಬಳ್ಳವೊಸ್ದುಮಂ ಬಿಟ್ಟರು'[288] ಮೊದಲಾದ ಶಾಸನೋಲ್ಲೇಖಗಳಿಂದ ಗೊತ್ತಾಗುತ್ತದೆ. ಹಾಗೂ ಈ ಒಕ್ಕಲುಗಳಿಂದ ದೇವಾಲಯಕ್ಕೆ ದತ್ತಿ ನೀಡಿದ್ದನ್ನು ತಿಳಿಸುತ್ತವೆ. ಆದರೂ ಈ ಒಕ್ಕಲುಗಳಿಗೆ ಸಂಬಂಧಿಸಿದಂತೆ ಮಾಹಿತಿಯ ಕೊರತೆ ಶಾಸನಗಳಲ್ಲಿದೆ.

ಗದಗ ತಾಲ್ಲೂಕಿನ ಶಾಸನವೊಂದು[289] ಕುಂಬಾಱರೊಕ್ಕಲನವರು ಒಂದು ಆವಗೆಯನ್ನು ದೇವರಿಗೆ ದತ್ತಿ ಬಿಟ್ಟಿದ್ದನ್ನು ಉಲ್ಲೇಖಿಸುತ್ತದೆ.

ಮಾಲೆಗಾರರು ಕಟ್ಟಿಕೊಂಡ ಸಂಘ 'ಮಾಲೆಗಾರ ನಾಲ್ವತ್ತೊಕ್ಕಲು'[290] ಈ ಸಂಘದ ಪರ್ಯಾಯ ಪದ, 'ಮಾಲೆಗಾಱ ಕೊತ್ತಳ'[291], 'ಮಾಲೆಗಾಱರೊಂದೊಕ್ಕಲಂ'[292] ಹಾಗೂ 'ಮಾಲೆಗಾರರೊಕ್ಕಲೊಂದು'[293]. ಆರಂಭದಲ್ಲಿ ನಾಲ್ವತ್ತು ಜನ ಸದಸ್ಯರಿದ್ದ ಈ ಸಂಘದ ಸದಸ್ಯರ ಸಂಖ್ಯೆ ಕೆಲವೊಂದು ಗ್ರಾಮಗಳಲ್ಲಿ ಹೆಚ್ಚು ಕಡಿಮೆಯಾಗಿದ್ದುದು ಗೊಬ್ಬೂರ[294] ಮತ್ತು ಮುಳುಗುಂದ[295] ಗ್ರಾಮದ ಶಾಸನಗಳಲ್ಲಿಯ 'ಮಾಲಗಾಱ ಅರುವತ್ತೊಕ್ಕಲು', 'ಮಾಲಗಾಱ [ಱ]ಯಿವದಣ್ಬುರು' ಎಂಬ ಉಕ್ತಿಗಳಿಂದ ವ್ಯಕ್ತವಾಗುವುದು ಇನ್ನು ಕೆಲವು ಕಡೆ ಈ ಸಂಘದ ಸದಸ್ಯರ ಸಂಖ್ಯೆ ಹೆಚ್ಚಿರಲಿ, ಕಡಿಮೆಯಿರಲಿ 'ಮಾಲೆಗಾರ ನಾಲ್ವತ್ತೊಕ್ಕಲು' ಎಂದೇ ಕರೆಯಲಾಗಿದೆ. ಹೀಗೆ ಮಾಲೆಗಾರರು ತಮ್ಮ ಸಂಘದ ಮೂಲಕ ಹೂವು ಕಾಯಿ ಮೊದಲಾದವುಗಳನ್ನು ಉತ್ಪಾದನೆ ಹಾಗೂ ಮಾರಾಟಗಳೆರಡನ್ನೂ ನಿರ್ವಹಿಸಿದರು.

ಕ್ರಿ.ಶ. 1110ರ ಏವೂರು ಶಾಸನವು[296] 'ಕಲ್ಕುಟಿಗ ಗೊತ್ತಳಿ' ಹಾಗೂ 'ಕಂಚಗಾಱ ಗೊತ್ತಳಿ'ಯನ್ನು ಉಲ್ಲೇಖಿಸುವುದು. ಇವುಗಳ ಬಗ್ಗೆ ಹೆಚ್ಚಿನ ವಿವರಗಳು ಲಭಿಸುವುದಿಲ್ಲ.

ಮಧ್ಯಕಾಲೀನ ಕರ್ನಾಟಕದ ದಾನಶಾಸನಗಳಲ್ಲಿ ಹೆಚ್ಚು ಕಾಣಿಸಿಕೊಳ್ಳುವ ವರ್ಗ ತೆಲ್ಲಿಗರು. ಇವರು ಗ್ರಾಮ, ಪಟ್ಟಣಗಳಲ್ಲಿ ಎಣ್ಣೆ ಉತ್ಪಾದನೆ ಮಾಡುವವರು, ಇವರು ಕಟ್ಟಿಕೊಂಡ ಸಂಘ, 'ತೆಲ್ಲಿಗರ್ಯೆವತ್ತೊಕ್ಕಲು'[297], ಇದರ ಪರ್ಯಾಯ ಪದಗಳು 'ತೆಲ್ಲಿಗರ ಕೊತ್ತಳಿ'[298], 'ತೆಲ್ಲಿಗಸೇಣಿ'[299], 'ಐವತ್ತೊಕ್ಕಲು'[300], 'ಗಾಣಿಗರೊಕ್ಕಲು'[301], 'ಊರ್ಯೆವತ್ತೊಕ್ಕಲು'[302] ಎಂಬ ಹೆಸರುಗಳಿಂದಲೂ ಕರೆಯಲ್ಪಡುತ್ತಿದ್ದಿತು.

ತೆಲ್ಲಿಗರಿಪ್ಪತ್ತೊಕ್ಕಲು[303], ಐವತ್ತೊಕ್ಕಲು[304], ಅರುವತ್ತೊಕ್ಕಲು[305], ತೆಲ್ಲಿಗನ್ನೂರ್ಱಱ್ಪ್ವದಿಂಬರುಂ[306], ಸಾಯಿರೊಕ್ಕಲು[307] ಮುಂತಾದ ಉಲ್ಲೇಖಗಳು ಕೆಲವೊಮ್ಮೆ ಬರುವುದರಿಂದ ಆಯಾ ವಸತಿಯಲ್ಲಿ ತೆಲ್ಲಿಗರು ರಚಿಸಿಕೊಂಡ ಸಂಘಟನೆಯ ಸದಸ್ಯತ್ವವನ್ನು ಇದು ನಿರ್ದಿಷ್ಟವಾಗಿ ಸೂಚಿಸಿದಂತೆ ತೋರುತ್ತದೆ. ಹಾಗಾಗಿ ತೆಲ್ಲಿಗರ್ಯೆವತ್ತೊಕ್ಕಲು ಎನ್ನುವುದು ಒಂದು ಮಂಡಳಿಯಂತೆ ಇದ್ದು ಗಾಣದ ಒಡೆಯರು ಐವತ್ತು ಮಂದಿ ಅದರ ಸದಸ್ಯರಾಗಿದ್ದ ಸಾಧ್ಯತೆ ಇದೆ.

## ಪರಾಮರ್ಶನ ಗ್ರಂಥಗಳು


1. ಸೋಮೇಶ್ವರ ವಿರಚಿತ ***ಮಾನಸೋಲ್ಲಾಸ,*** ಸಂಪುಟ-1, (ಸಂ) ಕಲಬುರ್ಗಿ, ಎಂ.ಎಂ., ಪ್ರಸಾರಾಂಗ, ಕರ್ನಾಟಕ ವಿ.ವಿ., ಧಾರವಾಡ, 1998, ಪು. xviii.

2. Appadorai, A., *Economic Conditions in Southern India II*, University of Madras, 1990, pp. 452.

3. ಹರಿಹರ ಕವಿಯ ***ಬಸವರಾಜದೇವರ ರಗಳೆ,*** (ಸಂ) ವೆಂಕಣಯ್ಯ, ಟಿ.ಎಸ್., ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, 1976, ಪು. 38.

4. ಸೋಮೇಶ್ವರನ ***ವಿಕ್ರಮಾಂಕಾಭ್ಯುದಯ,*** ಸಂಪುಟ-2, ಗಾಯಕ್‌ವಾಡ ಓರಿಯೆಂಟಲ್ ಸೀರೀಸ್, ಬರೋಡಾ, 1966, 5-11, ಪು. 11.

5. These are the most delicate buckrams and of the highest price in Sooth they look like the tissue of Spider's web. There can be no king or queen in the world, but might be glad to wear them.

   *The book of Sir Marco Polo*, (Ed) Sir Henry Yule, II, pp. 391.

6. (Article) Singh Rajėshwar Prasad, 'Artisans in Manu', *Essays in Ancient Indian Economic History*, (Ed.) Chattopadhyya Brajadulal, Munshiram Manoharlal Publishers, 1987, pp. 96.

7. ಎರಡನೇ ನಾಗವರ್ಮ, ***ಅಭಿದಾನವಸ್ತುಕೋಶ,*** ಪ. 18, ಪು. 78.

8. ಮಿತಾಕ್ಷರ, ***ಅಭಿಲಷಿತಾರ್ಥ ಚಿಂತಾಮಣಿ,*** (ಸಂ) ಶಾಮಾಶಾಸ್ತ್ರಿ, ಓರಿಯೆಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್, ಮೈಸೂರು, 1926, I, 187.

9. Appadorai, A., *Op. Cit.,* pp. 453.

10. ಮಿತಾಕ್ಷರ, ***ಅಭಿದಾನವಸ್ತುಕೋಶ, ಸಂಪುಟ-2,*** 37, ಪು. 78.

11. SII XX, ನಂ. 347, ನಿಂಬಾಲ್, ಇಂಡಿ (ತಾ), 13ನೇ ಶ., ಪು. 361.

    ('ಹೊಂಗೆ ಮಾ ೧ ಕುಱುಬರಲ್ಲಿ ಕಂಬಳಿ ೧ ಮಾದರು ಮಿಳ .. ಕಿ ದೇವರ')

12. ***ಬಸವಣ್ಣನವರ ವಚನ ಸಂಪುಟ,*** ವಚನ 260, (ಕಂಬಳಿಯಲ್ಲಿ ಕಣಕವ ನಾದಿದಂತೆ ಕಾಣಿರೇ ಎನ್ನ ಮನ), ಕ.ಪು.ಪ್ರಾ. ಬೆಂಗಳೂರು, 2001, ಪು. 65.

13. ಮಿತಾಕ್ಷರ, ***ಅಭಿದಾನವಸ್ತುಕೋಶ, ಸಂಪುಟ-2,*** 19, ಪು. 78.

14. ಮಿತಾಕ್ಷರ, ಸಂಪುಟ-2, ಪು. 179.

15. ಅದೇ, ಪು. 180.

16. (ಲೇ) ಗೋಪಾಲ್, ಆರ್., 'ಹೊಯ್ಸಳ ಕಾಲದ ಕೈಗಾರಿಕೆಗಳು', ಇತಿಹಾಸ ದರ್ಶನ, ಸಂಪುಟ-6, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, 1991, ಪು. 121.

17. ***ಸಂಕೀರ್ಣ ವಚನ ಸಂಪುಟ-1***, ಒಕ್ಕಲಿಗ ಮುದ್ದಣ್ಣಗಳ ವಚನ 1735, (ಕುಂಭದ ಮಳೆ ಹೊಯ್ಯಿತ್ತು ಮೂರಂಗದ ನೇಗಿಲ ತರಿಯಬೇಕು), ಕ.ಪು.ಪ್ರಾ. ಬೆಂಗಳೂರು, 2001, ಪು. 657.

18. ಅದೇ, ಒಕ್ಕಲಿಗ ಮುದ್ದಣ್ಣಗಳ ವಚನ 1739,
(ಪೂರ್ವಕ್ಕೆ ತಾಳಾಗಿ ಉತ್ತರಕ್ಕೆ ತಲಹಾ ಬಿದ್ದ ಮರನ ತಂದು, ನಿಬದ್ಧಿಯ
ಕಾರುಕನ ಕೈಯಲ್ಲಿ ಸುಬದ್ಧಿಸಿ, ಶುದ್ಧೈಸಿ, ಅನಾದಿಯೆಂಬ ಹುಗಿಲುದೆಗೆದು,
ಆದಿಯೆಂಬ ಈಯವನಿಕ್ಕಿ, ಇಷ್ಟವೆಂಬ ವಿಶ್ವಾಸವ ಮೇಳಿಯಂ ಬೆಟ್ಟ,
ಭಾವವೆಂಬ ಜಿಗುಳಿಯನಿಕ್ಕಿ, ಸದ್ಭಾವವೆಂಬ ಗುಳುವ ತೊಡಿಸಿ,
ಸತ್ಕ್ರಿಯೆಯೆಂಬ ಕಣ್ಣಿಯಲ್ಲಿ ನೇಗಿಲ ತೊಡಚಿ, ಜ್ಞಾನಚಕ್ಷುವೆಂಬ ನೊಗದ
ಉಭಯದ ಕೊನೆಯಲ್ಲಿ ಎಡಗೋಲಿನಲ್ಲಿ ಕಾರಿಯ ಹೂಡಿ, ಬಲಗೋಲಿನಲ್ಲಿ
ಬೆಳ್ಳಿಯ ಹೂಡಿ, ಅಡಿ ಕೆತ್ತುವಂತೆ ಧಾಯೆಂದು ಹೊಡೆಯಲಾಗಿ, ಭೂಮಿಯೊಡ
ಗೂಡಿ ಸವೆಯಿತ್ತು ಬಿತ್ತವಟ್ಟಕ್ಕೆ ದಿಕ್ಕಿಲ್ಲ, ಕಾಮ ಭೀಮ ಜೀವಧನದೊಡೆಯ
ನೀನೆ ಬಲ್ಲೆ), ಪು. 659.

19. ***ಸಂಕೀರ್ಣ ವಚನ ಸಂಪುಟ-4***, ವಚನ ಭಂಡಾರಿ ಶಾಂತರಸನ ವಚನ 42, (ಕಾಲಲ್ಲಿ ಕಟ್ಟಿದ ಸಡ್ಡೆಯ ಕೀಳುವರಿಲ್ಲ, ಕೈಯಲ್ಲಿ ಹಿಡಿದ ಮೊರನ ಬೇಡಾ ಎಂಬುವರಿಲ್ಲ), ಕ.ಪು.ಪ್ರಾ. ಬೆಂಗಳೂರು, 2001, ಪು. 14.

20. ***ಸಂಕೀರ್ಣ ವಚನ ಸಂಪುಟ-2***, ಜೇಡರ ದಾಸಿಮಯ್ಯನ ವಚನ 767, (ಕಡೆಗೀಲಿಲ್ಲದ ಬಂಡಿ ಹೊಡೆಗೆಡೆಯದೆ ಮಾಣ್ಬುದೆ? ಕಡೆಗೀಲು ಬಂಡಿಗಾಧಾರ), ಕ.ಪು.ಪ್ರಾ. ಬೆಂಗಳೂರು, 2001, ಪು. 242.

21. ನಯಸೇನ ವಿರಚಿತ ***ಧರ್ಮಾಮೃತಂ***, ಗದ್ಯಾನುವಾದ : ವೆಂಕಟರಾಮಪ್ಪ ಕೆ., ಕ.ಸಾ.ಪ. ಬೆಂಗಳೂರು, 1977, ಪು. 444.

22. (ಲೇ) ಶ್ರೀಕಂಠಯ್ಯ, ಕೆ., 'ಕನ್ನಡ ಕಾವ್ಯಗಳಲ್ಲಿ ಸಮರಾಯುಧಗಳು ಒಂದು ಅವಲೋಕನ', ***ಸಂಶೋಧನ***, (ಸಂ) ತೆಲಗಾವಿ ಲಕ್ಷ್ಮಣ್, ಎಂ. ಚಿದಾನಂದಮೂರ್ತಿ ಅಭಿನಂದನ ಸಮಿತಿ, ಬೆಂಗಳೂರು, 1991, ಪು. 606-608.

23. (ಲೇ) ಗೋಪಾಲ್, ಆರ್., 'ಹೊಯ್ಸಳ ಕಾಲದ ಕೈಗಾರಿಕೆಗಳು', ಪೂರ್ವೋಕ್ತ ಪು. 123.

24. ***ಅಲ್ಲಮಪ್ರಭುದೇವರ ವಚನ ಸಂಪುಟ***, ವಚನ 180, (ಒಡೆದ ಮಡಕೆಗೆ ಒತ್ತಿ ಮಣ್ಣ ಮೆತ್ತಿದಡೆ, ಅದು ತರಹರವಾಗಬಲ್ಲುದೆ ಗುಹೇಶ್ವರಾ?), ಕ.ಪು.ಪ್ರಾ. ಬೆಂಗಳೂರು, 2001, ಪು. 58.

25. ***ಬಸವಣ್ಣನವರ ವಚನ ಸಂಪುಟ***, ವಚನ 90, (ತಾಳಮರದ ಕೆಳಗೆ ಒಂದು ಹಾಲ ಹರವಿಯಿದ್ದಡೆ ಅದ ಹಾಲಹರವಿಯೆನ್ನರು), ಪೂರ್ವೋಕ್ತ, ಪು. 25.

26. ಅದೇ, ವಚನ 603, (ಪಾಕವ ಮಾಡುವ ಭಾಂಡ ಸೊಣಗನ ಡೊವಿಗೆಯಯ್ಯಾ! ), ಪು. 151.

27. ಅದೇ, ವಚನ 1380, (ಒಂದೆ ಭಾಜನದಲ್ಲಿ ಸಹಭೋಜನವ ಮಾಡುವರಿಂಗೆ ಇನ್ನೆಲ್ಲಿಯ ಸಂಕಲ್ಪವೊ), ಪು. 382.

28. ಅದೇ, ವಚನ 113, (ಅಳೆವುತ್ತ ಅಳೆವುತ್ತ ಬಳಲುವರಲ್ಲದೆ, ಕೊಳಗ ಬಳಲುವುದೆ?), ಪು. 31.

29. ***ಅಲ್ಲಮಪ್ರಭುದೇವರ ವಚನ ಸಂಪುಟ***, ವಚನ 680, (ಬೆಣ್ಣೆಯ ಕಂದಲ ಕರಗಲಿಟ್ಟಡೆ ಕಂದಲು ಕರಗಿತ್ತು ಬೆಣ್ಣೆ ಉಳಿಯಿತ್ತು!), ಪೂರ್ವೋಕ್ತ, ಪು. 183.

30. ***ಬಸವಣ್ಣನವರ ವಚನ ಸಂಪುಟ***, ವಚನ 517, (ಸಕ್ಕರೆಯ ಕೊಡನ ತುಂಬಿ ಹೊರಗೆ ಸವಿದಡೆ ರುಚಿಯುಂಟೇ), ಪೂರ್ವೋಕ್ತ, ಪು. 125.

31. ***ಅಲ್ಲಮಪ್ರಭುದೇವರ ವಚನ ಸಂಪುಟ***, ವಚನ 699, (ಲಿಂಗಕ್ಕೆಂದಡೆ ಚಿಕ್ಕ ಗಿಣ್ಣಲು ತುಂಬಿ ಬೋನವ ತಾ ಎಂಬರು), ಪೂರ್ವೋಕ್ತ, ಪು. 191.

32. ***ಬಸವಣ್ಣನವರ ವಚನ ಸಂಪುಟ***, ವಚನ 890, (ಆ ಗಡಿಗೆಯಲ್ಲಿ ಚೆನ್ನಬಸವಣ್ಣ ನೀರ ತಂದ), ಪೂರ್ವೋಕ್ತ, ಪು. 232.

33. ಅದೇ, ವಚನ 852, (ಕಾಯವೆಂಬ ಘಟಕ್ಕೆ ಚೈತನ್ಯವೆ ಸಯದಾನ), ಪು. 218.

34. ಅದೇ, ವಚನ 1112, (ಒಡೆದ ಹಂಚು ಮರಳಿ ಮಡಕೆಯಾಗಬಲ್ಲುದೇ?), ಪು. 302.

35. ***ಅಲ್ಲಮಪ್ರಭುದೇವರ ವಚನ ಸಂಪುಟ***, ವಚನ 78, (ಪ್ರಣತೆಯೂ ಇದೆ, ಬತ್ತಿಯೂ ಇದೆ ; ಜ್ಯೋತಿಯ ಬೆಳಗುವಡೆ), ಪೂರ್ವೋಕ್ತ, ಪು. 26.

36. ಅದೇ, ವಚನ 699, (ಚಿಕ್ಕ ಕುಡಿಕೆ ಗಿಣ್ಣಲು ಲಿಂಗಕ್ಕೆ ಬೋನವ ಹಿಡಿವ ಈ ಮಡಕೆ ಮಾರಿಗಳನೇನೆಂಬೆ ಗುಹೇಶ್ವರಾ), ಪು. 191.

37. ಕನ್ನಡ ವಿ.ವಿ. ಶಾಸನ ಸಂಪುಟ-2, ಕೊಪ್ಪಳ (ಜಿ), ನಂ. 18, ಸು. 13ನೇ ಶ., ಪು. 325.

38. (ಲೇ) ಗೋಪಾಲ್, ಆರ್., 'ಹೊಯ್ಸಳ ಕಾಲದ ಕೈಗಾರಿಕೆಗಳು', ಪೂರ್ವೋಕ್ತ, ಪು. 122.

39. ಸಕಲ ಪುರಾತನರ ವಚನಗಳು-2, ನಗೆಯ ಮಾರಿತಂದೆಗಳ ವಚನ 1190, (ಸಂ) ಸುಂಕಾಪುರ, ಎಂ.ಎಸ್. (ನಿನಗೆ ಇವು ಒಡವೆಯಲ್ಲ), ಕರ್ನಾಟಕ ವಿ.ವಿ., ಧಾರವಾಡ, 1976, ಪು. 416.

40. ***ಚನ್ನಬಸವಣ್ಣನವರ ವಚನಗಳು***, ವಚನ 30, (ದರಿದ್ರ ಬಲ್ಲನೆ ನವರತ್ನಂಗಳ?), (ಸಂ) ಹಿರೇಮಠ, ಆರ್.ಸಿ., ಕರ್ನಾಟಕ ವಿ.ವಿ. ಧಾರವಾಡ, 1971, ಪು. 15.

41. ಅದೇ, ವಚನ 433, (ವಜ್ರವ ಗೋಟಿಲೆ ಮುಟ್ಟ ಬಲ್ಲುದೆ ಅಯ್ಯಾ?), ಪೂರ್ವೋಕ್ತ, ಪು. 193.

42. ***ಬಸವಣ್ಣನವರ ವಚನ ಸಂಪುಟ***, ವಚನ 870, (ಹೊನ್ನ ಕಬ್ಬುನವಾಗದು ಕ್ರೀಯಳಿದು), ಪೂರ್ವೋಕ್ತ, ಪು. 227.

43. ***ಸಂಕೀರ್ಣ ವಚನ ಸಂಪುಟ-1***, ಆದಯ್ಯಗಳ ವಚನ 1071, (ಮುತ್ತು ನೀರೊಳಗೆ ಹುಟ್ಟಿ ಮರಳಿ ನೀರಾಗದಂತೆ) ಪೂರ್ವೋಕ್ತ, ಪು. 331.

44. ***ಸಕಲ ಪುರಾತನರ ಬೆಡಗಿನ ವಚನಗಳು***, ಆದಯ್ಯಗಳ ವಚನ 299, (ಸಂ) ಸುಂಕಾಪುರ ಎಂ.ಎಸ್., ಕರ್ನಾಟಕ ವಿ.ವಿ., ಧಾರವಾಡ, 1978, ಪು. 389.

45. ***ಅಕ್ಕನ ವಚನಗಳು***, ವಚನ 76, (ಸಂ) ಬಸವರಾಜು ಎಲ್., ಗೀತಾ ಬುಕ್ ಹೌಸ್, ಮೈಸೂರು, 1990
(ಪಚ್ಚೆಯ ನೆಲಗಟ್ಟು, ಕನಕದ ತೋರಣ, ವಜ್ರದ ಕಂಭ,
ಪವಳದ ಚಪ್ಪರವಿಕ್ಕಿ ಮದುವೆಯ ಮಾಡಿದರು
ನಮ್ಮವರೆನ್ನ ಮದುವೆಯ ಮಾಡಿದರು
ಕಂಕಣ (ಕೈದಾರಗಟ್ಟಿ) ಸ್ಥಿರಸೇಸೆಯ ನಿಟ್ಟು
ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ ಮದುವೆಯ ಮಾಡಿದರು) ಪು. 71.

46. ***ಚನ್ನಬಸವಣ್ಣನವರ ವಚನಗಳು***, ವಚನ 431, (ಪಚ್ಚೆಯ ಪವಳದ ಗುಡಿಗೂಡಾರವೇಕೆ ಗೂಗೆಗೆ?), ಪೂರ್ವೋಕ್ತ, ಪು. 192.

47. ***ಬಸವಣ್ಣನವರ ವಚನ ಸಂಪುಟ***, ವಚನ 768, (ಮುತ್ತು ನೀರಲ್ಲಿ ಹುಟ್ಟಿ ಮತ್ತೆ ನೀರಪ್ಪುದೆ?), ಪೂರ್ವೋಕ್ತ, ಪು. 195.

48. ***ಚನ್ನಬಸವಣ್ಣನವರ ವಚನಗಳು***, ವಚನ 1121, (ಸ್ಫಟಿಕದ ಘಟದೊಳಗಿರಿಸಿದ ರತ್ನದಂತಿರಬೇಕು), ಪೂರ್ವೋಕ್ತ, ಪು. 521.

49. ***ಬಸವಣ್ಣನವರ ವಚನಗಳು***, ವಚನ 1178, (ನವರತ್ನದ ಹಾರವ ತೋರಣವ ಕಟ್ಟಿ), (ಸಂ) ಹಿರೇಮಠ, ಆರ್.ಸಿ., ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1968, ಪು. 490.

50. ***ಚನ್ನಬಸವಣ್ಣನವರ ವಚನಗಳು***, ವಚನ 30, (ಗಾರ್ದಭ ಬಲ್ಲುದೆ ಚಿಂತಾಮಣಿಯ?), ಪೂರ್ವೋಕ್ತ, ಪು. 15.

51. ***ಸಂಕೀರ್ಣ ವಚನ ಸಂಪುಟ***, ಸಂಪುಟ 1, ಆದಯ್ಯಗಳ ವಚನ 873, (ಗೋರಿಕಲ್ಲೊಳಗೆ ಚಿಂತಾಮಣಿಯನರಸಿ ಬೆರಟುಗೊಂಡವನಂತೆ) ಪೂರ್ವೋಕ್ತ, ಪು. 264.

52. ***ಚನ್ನಬಸವಣ್ಣನವರ ವಚನಗಳು***, ವಚನ 1121, ಪೂರ್ವೋಕ್ತ, ಪು. 521.

53. ಸಕಲ ಪುರಾತನರ ಬೆಡಗಿನ ವಚನಗಳು, (ಸಂ) ಸುಂಕಾಪುರ, ಎಂ.ಎಸ್., ಮನುಮುನಿ ಗುಮ್ಮಟಯ್ಯಗಳ ವಚನ 175

(ಗುಡಿಯೊಡೆಯಂಗೆ ಕಂಭವೊಂದು, ಬಿಗಿಮೊಳೆ ಎಂಟು
ಕಂಬಕ್ಕೆ ಕಟ್ಟಿದ ಆಧಾರದ ದಾರವೈದು,
ಗುಡಿಯ ಸಂದು ಹದಿನಾಱು,
ಕೂಟದ ಸಂಪಿನ ಪಟ್ಟೆ ಇಪ್ಪತ್ತೈದು,
ಒಂಭತ್ತುಬಾಗಿಲು, ಮುಗಿಯಿತ್ತುಗುಡಿ ;
ಗುಡಿಯ ಮೇಲೆ ಮೂಱು ಕಳಸ
ಮೂಱಕ್ಕೊಂದೇ ರತ್ನದ ಕುಡಿ ಬೆಳಗು
ಬೆಳಗಿನ ಪ್ರಜ್ವಲಿತದಿಂ ಗುಡಿಯೊಡಯಿತ್ತು;
ಗುಡಿಯೊಳಗಾದವೆಲ್ಲವೂ ಅಲ್ಲಿಯೇ ಅಡಗಿತ್ತು,
ಕಳಸದ ಕಳೆ ಅಡಗಿತ್ತುಮಾಣಿಕ್ಯದ ಬೆಳಗಿನಲ್ಲಿ
ಆ ಬೆಳಗಡಗಿತ್ತುಅಗಮ್ಯೇಶ್ವರಲಿಂಗದಲ್ಲೊಡಗೂಡಿತ್ತು)
ಕರ್ನಾಟಕ ವಿ.ವಿ. ಧಾರವಾಡ, 1978, ಪು. 201.

54. ***ಅಕ್ಕನ ವಚನಗಳು***, ವಚನ 176, (ಸಂ) ಬಸವರಾಜು, ಎಲ್., ಪೂರ್ವೋಕ್ತ ಪು. 104.

55. ***ಶಿವಲೆಂಕ ಮಂಚಣ್ಣ ಮತ್ತು ಢಕ್ಕೆಯ ಬೊಮ್ಮಣ್ಣಗಳ ವಚನಗಳು***, ಢಕ್ಕೆಯ ಬೊಮ್ಮಣ್ಣಗಳ ವಚನ 1 (ಸಂ) ಸಣ್ಣಯ್ಯ ಬಿ.ಎಸ್.

(ತನುವೆಂಬ ಮೊರದಲ್ಲಿ
ಮಾಯಾಗುಣವೆಂಬ ಮಾರಿಯ ಹಿಡಿದು
ರಾಜಸ ತಾಮಸವೆಂಬ ಬಾಳು ಬಟ್ಟಲು ಕೈಯಲ್ಲಿ
ಪ್ರಳಯ ಸಂಹಾರವೆಂಬ ಬಳೆಯ ಕೈಯಲ್ಲಿಕ್ಕಿ
ಅಂಗದ ಮನೆಯ ಬಾಗಿಲಲಲ್ಲಿ ಕೊಂಡು ಬಂದಿದೇನೆ) ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. 1971, ಪು. 53.

56. ***ಬಸವಣ್ಣನವರ ವಚನಗಳು***, ವಚನ 1197, (ಕಣಗಿಲೆಲೆಯ ಉಂಗುರವನಿಕ್ಕಿ), ಪೂರ್ವೋಕ್ತ ಪು. 496.

57. ***ಚೆನ್ನಬಸವಣ್ಣನವರ ವಚನ ಸಂಪುಟ***, ವಚನ 244, (ಅನ್ಯಮಣಿಮಾಲೆ ನಂದಿವುಂಗುರ ನಾಗಕುಂಡಲ ಮೊದಲಾದ), ಪೂರ್ವೋಕ್ತ ಪು. 108.

58. ***ಅಲ್ಲಮ ಪ್ರಭುದೇವರ ವಚನಗಳು***, ವಚನ 1142, (ಸಂ) ಹಿರೇಮಠ ಆರ್.ಸಿ. ಮತ್ತು ಸುಂಕಾಪುರ ಎಂ.ಎಸ್.

(ಉದಕದ ಕೊಡನ ಹೊತ್ತಾಡುವ ಗೊರವಿತಿಯ ಕೈಯಲ್ಲಿ ಕಂಕಣ,
ಉರಿವ ಗೆಜ್ಜೆ ಚರಣದಲ್ಲಿ.....)
ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿ.ವಿ., ಧಾರವಾಡ, 1976, ಪು. 423.

59. ***ಅಕ್ಕನ ವಚನಗಳು***, ವಚನ 176, (ಕರದಲ್ಲಿ ಕಂಕಣ, ಉರದ ಮೇಲಂದುಗೆ, ಕಿವಿಯಲ್ಲಿ ಹಾವುಗೆ! ಉಭಯ - ಸಿರಿವಂತನ ಮೊಣಕಾಲಲ್ಲಿರ್ಝುಳವಟ್ಟಿಗೆ), (ಸಂ) ಬಸವರಾಜು ಎಲ್., ಪೂರ್ವೋಕ್ತ, ಪು. 105.

60. ***ಬಸವಣ್ಣನವರ ವಚನಗಳು***, ವಚನ 251, (ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡೆಯಣೆಯ ಮಾಡಿ, ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹಯ್ಯಾ), ಪೂರ್ವೋಕ್ತ, ಪು. 104.

61. ***ಅಕ್ಕನ ವಚನಗಳು***, ವಚನ 176, (ಸಂ) ಬಸವರಾಜು, ಎಲ್., ಪೂರ್ವೋಕ್ತ, ಪು. 104.

62. ಅದೇ, ವಚನ 87, ಪು. 76.

63. ***ಚನ್ನಬಸವಣ್ಣನವರ ವಚನಗಳು***, ವಚನ 244, ಪೂರ್ವೋಕ್ತ, ಪು. 108.

64. ***ಅಕ್ಕನ ವಚನಗಳು***, ವಚನ 86, (ಫಣಿಮಣಿ ಕರ್ಣಕುಂಡಲದವ ನೋಡವ್ವ), ಪೂರ್ವೋಕ್ತ, ಪು. 75

65. ***ಚೆನ್ನಬಸವಣ್ಣನವರ ವಚನಗಳು***, ವಚನ 244, ಪೂರ್ವೋಕ್ತ, ಪು. 108.

66. ***ಸಕಲ ಪುರಾತನರ ಬೆಡಗಿನ ವಚನಗಳು,*** ಭೋಗಣ್ಣಗಳ ವಚನ 471, (ಸಂ) ಸುಂಕಾಪುರ, ಎಂ.ಎಸ್., ಪೂರ್ವೋಕ್ತ, ಪು. 667.

67. ಅಲ್ಲಮ ಪ್ರಭುದೇವರ ವಚನಗಳು, ವಚನ 374, (ಸಂ) ಹಿರೇಮಠ ಆರ್.ಸಿ. ಮತ್ತು ಸುಂಕಾಪುರ ಎಂ.ಎಸ್., ಪೂರ್ವೋಕ್ತ, ಪು. 142.

68. SII XI(ii), ನಂ. 153, ಸೂಡಿ, ರೋಣ (ತಾ), ಕ್ರಿ.ಶ. 1103, ಪು. 192.

69. SII IX(i), ನಂ. 228, ಪೆದ್ದತುಂಬಲಂ, ಆದೋನಿ (ತಾ), ಕ್ರಿ.ಶ. 1133, ಪು. 233.

70. SII IX(i), ನಂ. 165, ಕುರುವತ್ತಿ, ಹರಪನಹಳ್ಳಿ(ತಾ), ಕ್ರಿ.ಶ. 1099, ಪು. 159.

71. ನಯಸೇನ ವಿರಚಿತ ***ಧರ್ಮಾಮೃತಂ*** ಗದ್ಯಾನುವಾದ : ವೆಂಕಟರಾಮಪ್ಪ, ಕೆ., ಕ.ಸಾ.ಪ. ಬೆಂಗಳೂರು, 1976, ಪು. 113.

72. ***ದೇವರ ದಾಸಿಮಯ್ಯನ ವಚನಗಳು***, 128, (ಸಂ) ಬಸವರಾಜು ಎಲ್.
(ನೆರೆದರೆ ಗಣಂಗಳು ಹರೆದರೆ ಕಂಚುಗಾಱರು
ಲಿಂಗವ ಮಾಱಿ ಉಂಬರೆ ಭಂಗಾಱರು
ತಮ್ಮ ತಳಿಗೆಯ ಕೊಂಡು ಹೋಗಿ
ಅನ್ಯರ ಮನೆಯಲುಂಬ ಕುನ್ನಿಗಳ ನಾನೇನೆಂಬೆ ರಾಮನಾಥ) ಗೀತಾ ಬುಕ್ ಹೌಸ್, ಮೈಸೂರು, 1985, ಪು. 95

73. ***ಬಸವಣ್ಣನವರ ವಚನ ಸಂಪುಟ***, ವಚನ 693, (ಕಂಚಿಟ್ಟುಂಡಡೆಯೂ ಮಾಣೆ), ಪೂರ್ವೋಕ್ತ, ಪು. 174.

74. ಅದೇ, ವಚನ 861, (ಉಂಬ ಬಟ್ಟಲು ಬೇರೆ ಕಂಚಲ್ಲ, ನೋಡುವ ದರ್ಪಣ ಬೇರೆ ಕಂಚಲ್ಲ ಭಾಂಡ ಒಂದೆ ಭಾಜನ ಒಂದೆ, ಬೆಳಗೆ ಕನ್ನಡಿಯೆನಿಸಿತ್ತಯ್ಯಾ), ಪು. 224.

75. Kuppuswamy, G.R., *Economic Conditions in Karnataka,* Prasaranga, Karnataka University, Dharwar, 1975, p. 106.

76. Gururajachar, S., *Some Aspects of Economic and Social Life in Karnataka*, Prasaranga, Mysore University, Mysore, 1974, p. 89.

77. SII XV, ನಂ. 73, ಹೊಂಬಳ್, ಗದಗ (ತಾ), ಕ್ರಿ.ಶ. 1189, ಪು. 104.

78. *ಸಂಕೀರ್ಣ ವಚನ ಸಂಪುಟ 1,* ಅಂಬಿಗರ ಚೌಡಯ್ಯಗಳ ವಚನ, ವಚನ 289
( ಹಿಪ್ಪೆಯನುಂಡ ತೊಗಲು ಹರಿಗೋಲವಾಯಿತ್ತು
ಗುರುಗಳಿಗೆ ಚಮ್ಮಾವುಗೆಯಾಯಿತ್ತು
ಹೂಡಲಿಕೆ ಮಿಣಿಯಾಯಿತ್ತು
ಹೊಡೆಯಲಿಕ್ಕೆ ಬಾರುಕೋಲವಾಯಿತ್ತು......), ಪೂರ್ವೋಕ್ತ ಪು. 93.

79. *ಅಕ್ಕನ ವಚನಗಳು,* ವಚನ 26, (ಜಗದ ಜಂಗುಳಿಗೆ ಬೆಂಗೋಲನೆತ್ತಿ ಕಾಡಿತ್ತು ಮಾಯೆ !), (ಸಂ) ಬಸವರಾಜು, ಎಲ್., ಪೂರ್ವೋಕ್ತ ಪು. 55.

80. *ಸಂಕೀರ್ಣ ವಚನ ಸಂಪುಟ,* ಸಂಪುಟ 3, ಮಾದಾರ ಚನ್ನಯ್ಯನ ವಚನ 9, (ಸ್ಥೂಲ ಸೂಕ್ಷ್ಮ ಕಾರಣವೆಂಬ ಮೂರು ಕಂಬವ ನೆಟ್ಟು, ಆಗುಚೀಗೆಯೆಂಬ ದಡಿಗೋಲಿನಲ್ಲಿ ಅಗಡದ ಎಮ್ಮೆಯ ಚರ್ಮವ ತೆಗೆದು), ಪು. 408.

81. *ಬಸವಣ್ಣನವರ ವಚನಗಳು,* ವಚನ 1098, (ಬೆಟ್ಟದ ಬಿದಿರೆ, ನೀನು ಅಟ್ಟಕ್ಕೇಣಿಯಾದ), ಪೂರ್ವೋಕ್ತ ಪು. 460.

82. *ಸಂಕೀರ್ಣ ವಚನ ಸಂಪುಟ,* ಸಂಪುಟ 3, ಮೇದರ ಕೇತಯ್ಯನ ವಚನ 1405, ಕ.ಪು.ಪ್ರಾ. ಬೆಂಗಳೂರು, 2001, ಪು. 478.

83. EC IX, ಬೇ 562, ಕ್ರಿ.ಶ. 1280, ಪು. 491.

84. EC IX, ಬೇ 112, ಕ್ರಿ.ಶ. 1485, ಪು. 73.

85. EC V, ಮೈ 216, ಕ್ರಿ.ಶ. 1195, ಪು. 318.

86. *ಮೋಳಿಗೆ ಮಾರಯ್ಯನ ವಚನಗಳು,* ವಚನ 72, (ಹೇರಂಡದ ಬಿತ್ತ ತುಳಿದು ವಾರಿದು ಕಲಸಿ ಬೇಯಿಸಿದಲ್ಲಿ ವಾರಿ ಬೇಱ ತಾ ಬೇಱಾದ ಭೇದವ ಬಲ್ಲರೆ ಇಷ್ಟಲಿಂಗ ಸಂಬಂಧಿ), (ಸಂ) ಸಣ್ಣಯ್ಯ, ಬಿ.ಎಸ್., ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿ.ವಿ., 1969, ಪು. 90.

87. SII IX(i), ನಂ. 336, ಕುಡುತಿನಿ, ಬಳ್ಳಾರಿ (ತಾ), ಕ್ರಿ.ಶ. 1218, ಪು. 357.

88. *ಬಸವಣ್ಣನವರ ವಚನ ಸಂಪುಟ* , ವಚನ 384, (ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತ್ತೆನ್ನ ಭಕ್ತಿ), ಪೂರ್ವೋಕ್ತ, ಪು. 92.

*ಸಂಕೀರ್ಣ ವಚನ ಸಂಪುಟ*, ಸಂಪುಟ 3, ಮೋಳಿಗೆ ಮಾರಯ್ಯನ ವಚನ 1719, (ಗಾಣದಲ್ಲಿ ಸಿಲುಕಿದ ಎಳ್ಳು, ನೋಯದೆ ಎಣ್ಣೆಯ ಬಿಡುವುದೆ?), ಪೂರ್ವೋಕ್ತ, ಪು. 565.

89. ಪಂಪಮಹಾಕವಿ ವಿರಚಿತ *ಆದಿಪುರಾಣಂ*, ಗದ್ಯಾನುವಾದ : ನರಸಿಂಹಶಾಸ್ತ್ರಿ ಕೆ.ಎಲ್., ಕ.ಸಾ.ಪ. ಬೆಂಗಳೂರು, 1999, ಪು. 338.

90. ಹಿರೇಮಠ, ಬಿ.ಆರ್. *ಶಾಸನಗಳಲ್ಲಿ ಕರ್ನಾಟಕದ ವರ್ತಕರು*, ಪ್ರಸಾರಾಂಗ, ಕರ್ನಾಟಕ ವಿ.ವಿ. ಧಾರವಾಡ, 1986, ಪು. 19 ಮತ್ತು 70.

91. ಚಿದಾನಂದ ಮೂರ್ತಿ, ಎಂ., *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಪ್ರಸಾರಾಂಗ, ಮೈಸೂರು ವಿ.ವಿ., ಮೈಸೂರು, 1979, ಪು. 385.

92. EC V (Old), ತಿನ.261, ಕ್ರಿ.ಶ. 1277.

93. EC X (Old), ಶಿಘ 112, ಕ್ರಿ.ಶ. 1378, ಪು. 241.

94. SII XX, ನಂ. 175, ಹಿರೇಬೇವಿನೂರು, ಇಂಡಿ (ತಾ), ಕ್ರಿ.ಶ. 1190, ಪು. 220.

95. EC XI (Old), ದಾಗೆ 105, ಕ್ರಿ.ಶ. 1218, ಪು. 176.

96. EC XI (Old), ದಾಗೆ 105, ಕ್ರಿ.ಶ. 1218, ಪು. 176.

97. ಹಿರೇಮಠ, ಬಿ.ಆರ್., *ಶಾಸನಗಳಲ್ಲಿ ಕರ್ನಾಟಕದ ವರ್ತಕರು*, ಪೂರ್ವೋಕ್ತ, ಪು. 113.

98. SII XX, ನಂ. 225, ಬಾಡೋಳ್, ಇಂಡಿ (ತಾ), ಕ್ರಿ.ಶ. 1304, ಪು. 274.

99. ಹಿರೇಮಠ, ಬಿ.ಆರ್., *ಶಾಸನಗಳಲ್ಲಿ ಕರ್ನಾಟಕದ ವರ್ತಕರು*, ಪೂರ್ವೋಕ್ತ, ಪು. 116.

100. SII XX, ನಂ. 216, ಕಲ್ಕೇರಿ, ಸಿಂದಗಿ (ತಾ), ಕ್ರಿ.ಶ. 1250, ಪು. 266.

101. *ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ*, (ಸಂ) ರಿತ್ತಿ ಶ್ರೀನಿವಾಸ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, 2000, ಪು. 71.

102. EC XII, ತಕೆ 12, ಕ್ರಿ.ಶ. 1196, ಪು. 353.

103. KI II, ನಂ. 10. ಲಕ್ಕುಂಡಿ, ಗದಗ (ತಾ) ಕ್ರಿ.ಶ. 1080, ಪು. 31.

104. ಹಿರೇಮಠ, ಬಿ.ಆರ್., *ಶಾಸನಗಳಲ್ಲಿ ಕರ್ನಾಟಕದ ವರ್ತಕರು*, ಪೂರ್ವೋಕ್ತ, ಪು. 120.

105. EC VII (Old), ಶಿಪು 118, ಕ್ರಿ.ಶ. 1054, ಪು. 220.

106. ***ಸಕಲ ಪುರಾತನರ ವಚನಗಳು-2,*** ವಚನ 1862, (ಸಂ) ಸುಂಕಾಪುರ, ಎಂ.ಎಸ್. ಕರ್ನಾಟಕ ವಿ.ವಿ., ಧಾರವಾಡ, 1976, ಪು. 653.

107. ಸಂಕೀರ್ಣ ವಚನ ಸಂಪುಟ 1, ಅಂಬಿಗರ ಚೌಡಯ್ಯಗಳ ವಚನ, ವಚನ 243, ಪೂರ್ವೋಕ್ತ, ಪು. 78.

108. ಶಿವಕೋಟ್ಯಾಚಾರ್ಯನ ***ವಡ್ಡಾರಾಧನೆ,*** ಗದ್ಯಾನುವಾದ : ಕೇಶವಭಟ್ಟ, ಬಿ., ಕ.ಸಾ.ಪ. ಬೆಂಗಳೂರು, 2003, ಪು. 135.

109. ನಯಸೇನ ವಿರಚಿತ ***ಧರ್ಮಾಮೃತಂ.*** ಗದ್ಯಾನುವಾದ : ವೆಂಕಟರಾಮಪ್ಪ, ಕೆ., ಪೂರ್ವೋಕ್ತ, ಪು. 114.

110. KI. IV, ನಂ. 18, ಎಮ್ಮಿಗನೂರು, ಹಿರೇಕೆರೂರು (ತಾ), ಕ್ರಿ.ಶ. 1176, ಪು. 51.

111. EC VII (Old), ಹೊ 85, ಕ್ರಿ.ಶ. 1189, ಪು. 410.

112. ***ಸಕಲ ಪುರಾತನರ ವಚನಗಳು-2,*** ವಚನ 1844, 1845, (ಸಂ) ಸುಂಕಾಪುರ, ಎಂ.ಎಸ್. ಪೂರ್ವೋಕ್ತ, ಪು. 649.

113. ಅದೇ, ವ.ಸಂ. 1863, (ವೇಷ ಲಾಂಛನವೆಂಬ ಪಾತದ ಹೊಜೆಯ ಹೊತ್ತು), ಪು. 653.

114. ***ಸಂಕೀರ್ಣ ವಚನ ಸಂಪುಟ,*** ಸಂಪುಟ 2, ಜೇಡರ ದಾಸಿಮಯ್ಯನ ವಚನ 872, ಕ.ಪು.ಪ್ರಾ. ಬೆಂಗಳೂರು, 2001, ಪು. 265.

115. ಸಂಕೀರ್ಣ ವಚನ ಸಂಪುಟ 1, ಆದಯ್ಯಗಳ ವಚನ, ವಚನ 1044, ಪೂರ್ವೋಕ್ತ, ಪು. 322.

116. ಶರಣ ಚರಿತ ಮಾನಸಂ, (ಸಂ) ದೇವೀರಪ್ಪ, ಎಚ್., (ಒಂದು ದೆಸೆಯ ತ್ರಾಸನಮರ ನೀತಿಗಳೇಜ್, ಒಂದು ದೆಸೆಯ ತ್ರಾಸನೆಮ್ಮ ಶಂಕರನೇಜ್), ಶ್ರೀ ಗೌರಿಶಂಕರ ಬುಕ್ ಡಿಪೋ, ಮೈಸೂರು, 1968, ಪು. 102.

117. ***ಸಂಕೀರ್ಣ ವಚನ ಸಂಪುಟ,*** ಸಂಪುಟ 1, ಆದಯ್ಯಗಳ ವಚನ 1044
(ಬ್ರಹ್ಮನೆ ಬಟ್ಟಲು, ವಿಷ್ಣುವೆ ನೇಣು, ರುದ್ರನೆ ತೊಲೆ, ಈ ಮೂವರು ಕೂಡಿದ ತ್ರಾಸಿನಲ್ಲಿ ಬ್ರಹ್ಮಾಂಡವೆಂಬ ಗಣಿಕೆಯ ಪಿಂಡವೆಂಬ ಕಟ್ಟಳೆಯನಿಕ್ಕಿ ತೂಗುವೆನಯ್ಯಾ ! ಇಚ್ಛಾ, ಜ್ಞಾನ, ಕ್ರಿಯಂಗಳೆಂಬ ಶಕ್ತಿತ್ರಯದ ಮುಳ್ಳು ಸರಿಸಮವಾಗಿ ತೂಗುವೆನಯ್ಯಾ! ), ಪೂರ್ವೋಕ್ತ, ಪು. 322.

118. ***ಬಸವಣ್ಣನವರ ಷಟ್‌ಸ್ಥಲ ವಚನಗಳು,*** ವಚನ 443, (ಸಂ) ಬಸವನಾಳ ಶಿವಲಿಂಗಪ್ಪನವರು, ಲಿಂಗಾಯಿತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ, 1990, ಪು. 112.

119. ***ಅರಿವಿನ ಮಾರಿತಂದೆಗಳ ವಚನಗಳು,*** ವಚನ 50, (ಸಂ). ಸಣ್ಣಯ್ಯ, ಬಿ.ಎಸ್ ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, 1971, ಪು. 12.

120. ಶರಣ ಚರಿತ ಮಾನಸಂ, (ಸಂ) ದೇವೀರಪ್ಪ ಎಚ್., ಪೂರ್ವೋಕ್ತ, ಪು. 95.

121. (ಸಂ) ನಾಗೇಗೌಡ, ಎಚ್.ಎಲ್., *ಪ್ರವಾಸಿ ಕಂಡ ಇಂಡಿಯಾ,* ಸಂಪುಟ-1, ಪ್ರಸಾರಾಂಗ, ಮೈಸೂರು ವಿ.ವಿ., 1964, ಪು. 354.

122. *ಆದಯ್ಯ ವಚನ 40,* (ಸಂ) ಉತ್ತಂಗಿ ಚೆನ್ನಪ್ಪ, 1957, ಪು. 22.

123. *ಅಕ್ಕನ ವಚನಗಳು,* ವಚನ 331, (ಸಂ) ಬಸವರಾಜು, ಎಲ್., ಪೂರ್ವೋಕ್ತ ಪು. 172.

124. *ಸಂಕೀರ್ಣ ವಚನ ಸಂಪುಟ 1,* ಅಂಬಿಗರ ಚೌಡಯ್ಯಗಳ ವಚನ, ವಚನ 90 ('...ಮಾಸಿ ಕಡಿಮೆಯಿಲ್ಲದೆ ತೂಗಿ ತೂಗಿ ಟೊಕಟೊಕನೆ ... '), ಪೂರ್ವೋಕ್ತ ಪು. 31.

125. *ಬಸವಣ್ಣನವರ ವಚನ ಸಂಪುಟ* , ವಚನ 441, (ಒಂದು ಜವೆ ಕೊರತೆಯಾದಡೆ ಎನ್ನನದ್ದಿ ನೀನೆದ್ದು ಹೋಗು), ಪೂರ್ವೋಕ್ತ ಪು. 107.

126. Verma Onkar Prasad, *The Yadavas and their Times*, Vidharbha Samshodhan Mandal, Nagpur, 1970, p. 284.

127. *ವ್ಯವಹಾರ ಗಣಿತ* (ಸಂ) ಎಂ. ಮರಿಯಪ್ಪ ಭಟ್ಟ. 1.26 (ನಾಲ್ಕುಂ ಸುವರ್ಣಂ ಕರ್ಷಂ ನಾಲ್ಕು ಕರ್ಷಂ ಫಲಮಾ ದಶದ್ವಯ ಪಲದಿಂದ ನಿಲ್ಕುಂ ಬೀಸಗೆ ಬೀಸಗೆ ಪಂಚಕದೊಳ್ ತೊಲೆಯಿಪ್ಪತ್ತು ತೊಲೆಗಳಕ್ಕುಂ ಭಾರಂ).

128. *ಸಂಕೀರ್ಣ ವಚನ ಸಂಪುಟ 1,* ಅಂಬಿಗರ ಚೌಡಯ್ಯಗಳ ವಚನ, ವಚನ 90 ('...ಅರ್ಧಮಣದ ಪಾದರಕ್ಷೆಯ ತೆಗೆದುಕೊಂಡು ... '), ಪೂರ್ವೋಕ್ತ ಪು. 31.

129. *ಶ್ರೀ ಸಿದ್ಧರಾಮೇಶ್ವರರ ವಚನಗಳು,* ವಚನ 572, (ಸಂ) ಹಿರೇಮಠ, ಆರ್.ಸಿ., (ಸೊಲ್ಲಗೆ ಒಂದು ಕಂಡುಗ ನವಣೆ ನುಂಗಿತ್ತಯ್ಯಾ), ಕರ್ನಾಟಕ ವಿ.ವಿ., ಧಾರವಾಡ, 1968, ಪು. 172.

130. *ಬಸವಣ್ಣನವರ ವಚನಗಳು,* ವಚನ 867, ಪೂರ್ವೋಕ್ತ ಪು. 356

*ಅಲ್ಲಮನ ವಚನ ಚಂದ್ರಿಕೆ,* ವಚನ 48, ಪೂರ್ವೋಕ್ತ ಪು. 12.

131. *ಚೆನ್ನಬಸವಣ್ಣನವರ ವಚನಗಳು,* ವಚನ 92, ವಚನ 88, ಪೂರ್ವೋಕ್ತ ಪು. 39.

132. *ಬಸವಣ್ಣನವರ ವಚನಗಳು,* ವಚನ 113, ಪೂರ್ವೋಕ್ತ ಪು. 53.

*ಅಲ್ಲಮನ ವಚನ ಚಂದ್ರಿಕೆ,* ವಚನ 1188, ಪೂರ್ವೋಕ್ತ ಪು. 268.

133. *ಬಸವಣ್ಣನವರ ವಚನಗಳು,* ವಚನ 1067, ಪೂರ್ವೋಕ್ತ ಪು. 443.

134. *ವ್ಯವಹಾರ ಗಣಿತ,* ಪೂರ್ವೋಕ್ತ 1. 26.

135. *ಬಸವಣ್ಣನವರ ವಚನಗಳು,* ವಚನ 1068, ಪೂರ್ವೋಕ್ತ ಪು. 443.

136. ನಯಸೇನ ವಿರಚಿತ *ಧರ್ಮಾಮೃತಂ.* ಗದ್ಯಾನುವಾದ : ವೆಂಕಟರಾಮಪ್ಪ, ಕೆ., ಪೂರ್ವೋಕ್ತ ಪು. 395.

137. ***ಸಂಕೀರ್ಣ ವಚನ ಸಂಪುಟ***, ಸಂಪುಟ 3, ಮೋಳಿಗೆ ಮಾರಯ್ಯನ ವಚನ 1818, ಪೂರ್ವೋಕ್ತ, ಪು. 593.

138. ಚಿದಾನಂದ ಮೂರ್ತಿ, ಎಂ., ***ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ***, ಪೂರ್ವೋಕ್ತ, ಪು. 393.

139. KI V, ನಂ. 32, ಧಾರವಾಡ, ಕ್ರಿ.ಶ. 1215, ಪು. 131.

140. EC X, ಅಕೆ 150, 12ನೇ ಶ., ಪು. 194.

141. EC VIII (Old), ಸೊ 325, ಕ್ರಿ.ಶ. 1178, ಪು. 150.

142. SII XX, ನಂ. 78, ಲಕ್ಷ್ಮೇಶ್ವರ, ಶಿರಹಟ್ಟಿ (ತಾ), ಕ್ರಿ.ಶ. 1118, ಪು. 97.

143. EC VIII (Old), ಸೊ 137, ಕ್ರಿ.ಶ. 1272, ಪು. 53.
EC VIII, ಹಾ. 14, ಕ್ರಿ.ಶ. 1147, ಪು. 250.

144. SII XV, ನಂ. 210, ಮೇವುಂಡಿ, ಮುಂಡರಗಿ (ತಾ), ಕ್ರಿ.ಶ. 1196, ಪು. 253.

145. SII XV, ನಂ. 169, ಕೊಲ್ಹಾರ, ಬಾಗೇವಾಡಿ (ತಾ), ಕ್ರಿ.ಶ. 1223, ಪು. 215.

146. EC VIII (Old), ಸೊ 249, ಕ್ರಿ.ಶ. 1065, ಪು. 103.

147. SII IX (i), ನಂ. 133, ಚಿನ್ನತುಂಬಲಂ, ಆಧೋನಿ (ತಾ), ಕ್ರಿ.ಶ. 1068, ಪು. 116.

148. SII XV, ನಂ. 195, ಇಂಗಳೇಶ್ವರ, ಬಾಗೇವಾಡಿ (ತಾ), ಕ್ರಿ.ಶ. 1265, ಪು. 244.

149. SII IX (i), ನಂ. 336, ಕುಡುತಿನಿ, ಬಳ್ಳಾರಿ (ತಾ), ಕ್ರಿ.ಶ. 1218, ಪು. 357.

150. SII XV, ನಂ. 233, ಮನಗುಂಡಿ, ಧಾರವಾಡ (ತಾ), ಕ್ರಿ.ಶ. 1203, ಪು. 288.

151. SII XX, ನಂ. 248, ಸೌದತ್ತಿ ಪರಸಗಡ (ತಾ), ಕ್ರಿ.ಶ. 1228, ಪು. 308.

152. ***ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ***, (ಸಂ) ರಿತ್ತಿ ಶ್ರೀನಿವಾಸ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, 2000, ಪು. 86-87.

153. ಅದೇ, ಪು. 87-88.

154. ***ಸಂಕೀರ್ಣ ವಚನ ಸಂಪುಟ***, ಸಂಪುಟ 4, ಸುಂಕದ ಬಂಕಣ್ಣನ ವಚನ 610, ಪೂರ್ವೋಕ್ತ, ಪು. 194.

155. ಅದೇ, ವಚನ 611, ಪು. 194.

156. SII XV, ನಂ. 159, ಗದಗ, ಗದಗ (ತಾ), ಕ್ರಿ.ಶ. 1213, ಪು. 205.

157. EC VI, ಕೃಪೇ 27, ಕ್ರಿ.ಶ. 1171, ಪು. 18.

158. EC II, ಶ್ರಬೆ 481, ಕ್ರಿ.ಶ. 1159, ಪು. 299.

159. EC VIII(Old), ಸೊ 515, ಕ್ರಿ.ಶ. 1197, ಪು. 229.

160. EC V, ಮೈ 216, ಕ್ರಿ.ಶ. 1195, ಪು. 318.

161. EC VIII, ಹಾ 113, ಕ್ರಿ.ಶ. 1156, ಪು. 325.

162. EC X, ಚಿಪ 29, ಕ್ರಿ.ಶ. 1399, ಪು. 441.

163. EC VIII, ಹಾ 148, ಕ್ರಿ.ಶ. 1176, ಪು. 380.

164. KI VI, ನಂ. 39, ಧಾರವಾಡ, ಕ್ರಿ.ಶ. 1181, ಪು. 118.

165. SII XV, ನಂ. 129, ಇಂಗಳೇಶ್ವರ, ಬಾಗೇವಾಡಿ (ತಾ), ಕ್ರಿ.ಶ. 1176, ಪು. 166.

166. EC X, ಅಕೆ 88, ಕ್ರಿ.ಶ. 1051, ಪು. 117.

167. EC VIII, ಹಾ 41, ಕ್ರಿ.ಶ. 1200, ಪು. 267.

168. EC X, ಅಕೆ 160, ಕ್ರಿ.ಶ. 1161, ಪು. 208.

169. EC IV, ಹುಸೂ 24, ಕ್ರಿ.ಶ. 1084, ಪು. 499.

170. EC XI, ಚಿಮ 21, ಕ್ರಿ.ಶ. 1077, ಪು. 140.

171. EC XII (Old), ಗುಬ್ಬಿ45, ಕ್ರಿ.ಶ. 1233, ಪು. 78.

172. EC XII, ಕ 126, ಕ್ರಿ.ಶ. 1291, ಪು. 135.

173. MAR, 1916, 1077 A.D., p. 51.

174. MAR, 1910, p. 35.

175. EC X (Old), ಕೋ 28, ಕ್ರಿ.ಶ. 1291, ಪು. 7.

176. EC VI (Old), ಕ 49, ಶಕ 1213, ಪು. 47 and MAR 1910, p. 35.

177. EC XII (Old), ಕುಗ 1, ಕ್ರಿ.ಶ. 1157, ಪು. 86.

178. SII XV, ನಂ. 67, ಲಕ್ಕುಂಡಿ, ಗದಗ (ತಾ), ಕ್ರಿ.ಶ. 1185, ಪು. 94.

179. EC XII, ತಕೆ 51, ಕ್ರಿ.ಶ. 1184, ಪು. 383.

180. EC VII, ನಾಮಂ 73, ಕ್ರಿ.ಶ. 1284, ಪು. 63.

181. SII XX, ನಂ. 178, ಹಿಪ್ಪರಗಿ, ಸಿಂದಗಿ (ತಾ), ಕ್ರಿ.ಶ. 1192, ಪು. 225.

182. ಹಿರೇಮಠ, ಬಿ.ಆರ್., ***ವ್ಯಾಸಂಗ ತರಂಗ***, ಕ. ಸಾ.ಪ. ಬೆಂಗಳೂರು, 2004, ಪು. 105-121.

183. SII XX, ನಂ. 112, ಸಂಸಿ, ಕುಂದಗೋಳ (ತಾ), ಕ್ರಿ.ಶ. 1144, ಪು. 146.

184. ಹಿರೇಮಠ, ಬಿ.ಆರ್., ***ಶಾಸನಗಳಲ್ಲಿ ಕರ್ನಾಟಕದ ವರ್ತಕರು***, ಪೂರ್ವೋಕ್ತ ಪು. 124.

185. ***ಪಂಪ ಭಾರತ ದೀಪಿಕೆ,*** (ಸಂ) ನರಸಿಂಹಚಾರ್, ಡಿ.ಎಲ್., ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., 1971, ಪು. 495.

186. ***ಸಮಯ ಪರೀಕ್ಷೆ,*** (ಸಂ) ಕುಲಕರ್ಣಿ, ಬಿ.ಎಸ್., ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ, 1958, ಪು. 95.

187. ಮಲ್ಲಾಪುರ ಬಿ.ವ್ಹಿ., ***ನಯಸೇನ ಮತ್ತು ಆತನ ಕೃತಿಗಳು***, ಪಠ್ಯಪುಸ್ತಕ ನಿರ್ದೇಶನಾಲಯ, ಕರ್ನಾಟಕ ವಿ.ವಿ., ಧಾರವಾಡ, 1978, ಪು. 285.

188. ***ಬಸವಣ್ಣನವರ ವಚನ ಸಂಪುಟ***, ವಚನ 294, ಪೂರ್ವೋಕ್ತ ಪು. 72.

189. (ಲೇ) ಗುರವ, ಆರ್.ಎಸ್., 'ಪಾರ್ಶ್ವಪಂಡಿತನ ಕಲ್ಹೊಳೆಯ ಶಾಸನ', ಕರ್ನಾಟಕ ಭಾರತಿ, ಸಂಪುಟ 6, ಸಂಚಿಕೆ 3, ಕರ್ನಾಟಕ ವಿ.ವಿ., ಧಾರವಾಡ, 1974, ಪು. 53.

190. ಕನ್ನಡ ವಿ.ವಿ., ಶಾಸನ ಸಂಪುಟ-6, ಮಹಾರಾಷ್ಟ್ರದ ಕನ್ನಡ ಶಾಸನಗಳು, ನಂ. 114, ಕೊಲ್ಲಾಪುರ, ಕ್ರಿ.ಶ. 1142, ಪು. 179.

191. ಅದೇ.

192. ಅದೇ.

193. ಅದೇ.

194. ಅದೇ.

195. SII XX, ನಂ. 299, ಕಡ್ಲೇವಾಡ, ಸಿಂದಗಿ (ತಾ), ಕ್ರಿ.ಶ. 12ನೇ ಶ., ಪು. 334.

196. SII XX, ನಂ. 78, ಲಕ್ಷ್ಮೇಶ್ವರ, ಶಿರಹಟ್ಟಿ (ತಾ), ಕ್ರಿ.ಶ. 118, ಪು. 97.

197. KI I, ನಂ. 17, ಶಿಗ್ಗಾನ್, ಧಾರವಾಡ (ತಾ), ಕ್ರಿ.ಶ. 1055, ಪು. 23.

198. ಹಿರೇಮಠ, ಬಿ.ಆರ್., ***ಶಾಸನಗಳಲ್ಲಿ ಕರ್ನಾಟಕದ ವರ್ತಕರು***, ಪೂರ್ವೋಕ್ತ ಪು. 113.

199. SII IX (i), ನಂ. 336, ಕುಡುತಿನಿ, ಬಳ್ಳಾರಿ (ತಾ), ಕ್ರಿ.ಶ. 1218, ಪು. 357.

200. KI V, ನಂ. 20, ಬಾಳೂರ್, ಹಾನಗಲ್ (ತಾ), ಕ್ರಿ.ಶ. 1125, ಪು. 74.

201. KI I, ನಂ. 33, ಬಾಡ್ಲಿ, ಸೌದತ್ತಿ (ತಾ), ಕ್ರಿ.ಶ. 1246, ಪು. 79.

202. MAR 1930, ನಂ. 67, ಬೈರಾಪುರ, ಶಿವಮೊಗ್ಗ (ಜಿ).

203. EC IX, ಬೇ 273, 13-14ನೇ ಶ., ಪು. 264.

204. SII XI (ii), ನಂ. 198, ಮುಳುಗುಂದ, ಗದಗ (ತಾ), ಕ್ರಿ.ಶ. 1124, ಪು. 254.

205. KI V, ನಂ. 32, ಧಾರವಾಡ, ಕ್ರಿ.ಶ. 1215, ಪು. 131.

206. SII XX, ನಂ. 248, ಸೌದತ್ತಿ, ಪರಸ್‌ಗಡ (ತಾ), ಕ್ರಿ.ಶ. 1228, ಪು. 308.

207. SII XV, ನಂ. 241, ನಿಡಗುಂದಿ, ರೋಣ (ತಾ), ಕ್ರಿ.ಶ. 1174, ಪು. 300.

208. EC IX, ಬೇ 261, ಕ್ರಿ.ಶ. 1120, ಪು. 248.

209. KI V, ನಂ. 21, ತೇರ್ದಾಳ್, ಜಮಖಂಡಿ (ತಾ), ಕ್ರಿ.ಶ. 1125, ಪು. 83.

210. SII XV, ನಂ. 233, ಮನಗುಂಡಿ, ಧಾರವಾಡ (ತಾ), ಕ್ರಿ.ಶ. 1203, ಪು. 288.

211. SII XV, ನಂ. 156, ಕಂದಗಲ್, ಹುನುಗುಂದ (ತಾ), ಕ್ರಿ.ಶ. 1207, ಪು. 201.

212. SII XV, ನಂ. 220, ಮುಳುಗುಂದ, ಗದಗ (ತಾ), ಕ್ರಿ.ಶ. 1207, ಪು. 269.

213. KI V, ನಂ. 70, ಧಾರವಾಡ, ಕ್ರಿ.ಶ. 1221, ಪು. 260.

214. KI V, ನಂ. 32, ಧಾರವಾಡ, ಕ್ರಿ.ಶ. 1215, ಪು. 131.

215. EC XII, ಕ 70, ಕ್ರಿ.ಶ. 1143, ಪು. 93.

216. ಹಿರೇಮಠ, ಬಿ.ಆರ್., ***ಶಾಸನಗಳಲ್ಲಿ ಕರ್ನಾಟಕದ ವರ್ತಕರು,*** ಪೂರ್ವೋಕ್ತ ಪು. 12.

217. ***ಸಂಕೀರ್ಣ ವಚನ ಸಂಪುಟ,*** ಸಂಪುಟ 4, ಸುಂಕದ ಬಂಕಣ್ಣನ ವಚನ 628, ಪೂರ್ವೋಕ್ತ ಪು. 197.

218. EC VII (Old), ಶಿಪು 118, ಕ್ರಿ.ಶ. 1054, ಪು. 220.

219. ಹಿರೇಮಠ, ಬಿ.ಆರ್., ***ಶಾಸನಗಳಲ್ಲಿ ಕರ್ನಾಟಕದ ವರ್ತಕರು,*** ಪೂರ್ವೋಕ್ತ

220. ಪಂಚಮುಖಿ, ಆರ್.ಎಸ್., ***ಕರ್ನಾಟಕದ ಶಾಸನಗಳು,*** ಕನ್ನಡ ಸಂಶೋಧನಾ ಸಂಸ್ಥೆ, ಕರ್ನಾಟಕ ವಿ.ವಿ., ಧಾರವಾಡ, 1981, ಪು. 4.

221. KI I, ನಂ. 25, ಸಿರಸಂಗಿ, ಸವದತ್ತಿ (ತಾ), ಪು. 38.

222. I.A. V, ನಂ. 11, ಬಳ್ಳಿಗಾವೆ, ಪು. 46.

223. EC II.

224. *ಶಾಸನ ಸಾಹಿತ್ಯ ಸಂಚಯ,* ನಂ. 97.

225. ಹಿರೇಮಠ, ಬಿ.ಆರ್., *ಶಾಸನಗಳಲ್ಲಿ ಕರ್ನಾಟಕದ ವರ್ತಕರು,* ಪೂರ್ವೋಕ್ತ, ಪು. 19-20.

226. SII XV, ನಂ. 24, ಮುತ್ತಗಿ, ಬಾಗೇವಾಡಿ (ತಾ), ಕ್ರಿ.ಶ. 1142, ಪು. 25.

227. EC V (Old), ಅಕೆ 22, ಕ್ರಿ.ಶ. 1188, ಪು. 371.

228. (ಲೇ) ಗುರುರಾಜಾಚಾರ್, ಎಸ್., 'ಕರ್ನಾಟಕದ ಕೆಲವು ಖ್ಯಾತ ವರ್ತಕರು', ಮಾನವಿಕ ಕರ್ನಾಟಕ, ಸಂಪುಟ-6, ಸಂಚಿಕೆ-1, 1975, ಪು. 71.

229. EC V (Old), ಅಕೆ 82, ಕ್ರಿ.ಶ. 1234, ಪು. 448.
EC XV (Old), ಅಕೆ 217, ಕ್ರಿ.ಶ. 1232, ಪು. 29.

230. (ಲೇ) ಗುರುರಾಜಾಚಾರ್, ಎಸ್., 'ಮಧ್ಯಕಾಲೀನ ಕರ್ನಾಟಕದ ವಿದೇಶೀ ವ್ಯಾಪಾರ', ಮಾನವಿಕ ಕರ್ನಾಟಕ, ಸಂಪುಟ-4, ಸಂಚಿಕೆ-1, 1973, ಪು. 103-104.

231. EC VII (Old), ಶಿಪು 118, ಕ್ರಿ.ಶ. 1054, ಪು. 220.

232. *ಸಂಕೀರ್ಣ ವಚನ ಸಂಪುಟ,* ಸಂಪುಟ 1, ಆದಯ್ಯನ ವಚನ 1072, ಪೂರ್ವೋಕ್ತ, ಪು. 331.

233. EI XIII, ಬೆಳಗಾವಿ, ಬೆಳಗಾವಿ (ತಾ), ಕ್ರಿ.ಶ. 1204, ಪು. 21.

234. *ಅಕ್ಕನ ವಚನಗಳು,* (ಸಂ) ಬಸವರಾಜು, ಎಲ್., ವಚನ 62, (ಅಪಾರ ಗಂಭೀರದ ಅಂಬುಧಿಯಲ್ಲಿ ತಾರಾ ಪಥವ ನೋಡಿ ನಡೆಯೆ, ಚೈತ್ರದಿಂದ ದ್ವೀಪಾಂತರಕ್ಕೆ ಸಕಲಪದಾರ್ಥವನೆಯ್ದುಸುವುದು) ಪೂರ್ವೋಕ್ತ, ಪು. 66.

235. SII XV, ನಂ. 73, ಹೊಂಬಳ್, ಗದಗ (ತಾ), ಕ್ರಿ.ಶ. 1189, ಪು. 104.

236. SII XI, ನಂ. 68, ತಮ್ಮದಡ್ಡಿ, ಮುದ್ದೇಬಿಹಾಳ್ (ತಾ), ಕ್ರಿ.ಶ. 1033, ಪು. 59.

237. EC VIII (Old), ಸಾಗರ 109, ಕ್ರಿ.ಶ. 1043, ಪು. 310.

238. (ಲೇ) ಗುರವ, ಆರ್.ಎನ್., 'ಎಂಟುಹಿಟ್ಟು, ಬಾರಾಬಲೂತೆ', *ಜಾನಪದ ಸಾಹಿತ್ಯ ದರ್ಶನ,* 7 (ಸಂ) ವೃಷಭೇಂದ್ರಸ್ವಾಮಿ, ಎಸ್.ಎಂ., ಕರ್ನಾಟಕ ವಿ.ವಿ., ಧಾರವಾಡ, 1982, ಪು. 73.

239. Kundangar,K.G., *Inscriptions in Northern Karnataka and Kolhapur State*, No. 37, pp. 116-17.

240. SII XV, ನಂ. 69, ಹೊಸೂರು, ಗದಗ (ತಾ), ಕ್ರಿ.ಶ. 1186, ಪು. 95.

241. SII XV, ನಂ. 67, ಲಕ್ಕುಂಡಿ, ಗದಗ (ತಾ), ಕ್ರಿ.ಶ. 1185, ಪು. 93.

242. Kittel, Rev. F., *Kannada English Dictionary*, Asian Educational Services, New Delhi, 2004, pp. 161.

243. ***ಸಂಕ್ಷಿಪ್ತ ಕನ್ನಡ ನಿಘಂಟು (ಕನ್ನಡ - ಕನ್ನಡ),*** ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, 1977, ಪು. 84.

244. SII IX(i), ನಂ. 89, ಬಾಗಳಿ, ಹರಪನಹಳ್ಳಿ (ತಾ), ಕ್ರಿ.ಶ. 1035, ಪು. 60.

245. SII XI, ನಂ. 145, ಸೊರಟೂರು, ಗದಗ (ತಾ), ಕ್ರಿ.ಶ. 1098-99, ಪು. 176.

246. ಚಿದಾನಂದ ಮೂರ್ತಿ, ಎಂ., ***ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,*** ಪೂರ್ವೋಕ್ತ, ಪು. 437.

247. EC V, ತಿನ 86, ಹೊಯ್ಸಳ ನರಸಿಂಹನ ಕಾಲ, ಪು. 496.

248. (ಲೇ) ನಾಗೇಶ್, ಎಚ್.ವ್ಹಿ., 'ಆಯ ಮತ್ತು ಆಯಗಾರರು', ಜಾನಪದ ಸಾಹಿತ್ಯ ದರ್ಶನ, 7, ಪೂರ್ವೋಕ್ತ ಪು. 46-47.

249. ಹೆಂಡಿ, ಬಿ.ಬಿ., ***ಅಧ್ಯಕ್ಷೀಯ ಭಾಷಣ,*** ಜಾನಪದ ಸಾಹಿತ್ಯ ದರ್ಶನ, 7, ಪೂರ್ವೋಕ್ತ ಪು. 146-47.

250. EC XII, ಕಡೂರು 226, ಕ್ರಿ.ಶ. 1221, ಪು. 253.

251. KI V, ನಂ. 21, ತೇರ್ದಾಳ್, ಜಮಖಂಡಿ (ತಾ), ಕ್ರಿ.ಶ. 1125, ಪು. 83.

252. EC IX, ಬೇ 273, 13-14ನೇ ಶ., ಪು. 264.

253. EC X, ಅಕೆ 149, ಕ್ರಿ.ಶ. 1142, ಪು. 193.

254. MAR 1929, ನಂ. 61, ಪು. 237.

255. SII XV, ನಂ. 73, ಹೊಂಬಲ್, ಗದಗ (ತಾ), ಕ್ರಿ.ಶ. 1189, ಪು. 104.

256. EC VI (Old), ತಕೆ 10, ಕ್ರಿ.ಶ. 1184, ಪು. 209.

257. ಕನ್ನಡ ವಿ.ವಿ. ಶಾಸನ ಸಂಪುಟ-1, ಬಳ್ಳಾರಿ (ಜಿಲ್ಲೆ), ನಂ. 9, ಕೋಗಳಿ, ಕ್ರಿ.ಶ. 1276, ಪು. 275.

258. EC X, ಅಕೆ 57, ಕ್ರಿ.ಶ. 1101, ಪು. 83.

259. SII XV, ನಂ. 241, ನಿಡಗುಂದಿ, ರೋಣ (ತಾ), ಕ್ರಿ.ಶ. 1174, ಪು. 300.

260. KI V, ನಂ. 21, ತೇರ್ದಾಳ್, ಜಮಖಂಡಿ (ತಾ), ಕ್ರಿ.ಶ. 1125, ಪು. 83.

261. SII XV, ನಂ. 156, ಕಂದಗಲ್, ಹುನುಗುಂದ (ತಾ), ಕ್ರಿ.ಶ. 1207, ಪು. 201.

262. SII XV, ನಂ. 129, ಇಂಗಳೇಶ್ವರ, ಬಾಗೇವಾಡಿ (ತಾ), ಕ್ರಿ.ಶ. 1176, ಪು. 166.

263. KI V, ನಂ. 66, ಧಾರವಾಡ, ಕ್ರಿ.ಶ. 1206, ಪು. 248.

264. SII XV, ನಂ. 67, ಲಕ್ಕುಂಡಿ, ಗದಗ (ತಾ), ಕ್ರಿ.ಶ. 1185, ಪು. 93.

265. (ಲೇ) ಗೋಪಾಲ್, ಆರ್., 'ಹೊಯ್ಸಳ ಕಾಲದ ಕೈಗಾರಿಕೆಗಳು', ಪೂರ್ವೋಕ್ತ ಪು. 121.

266. SII XI(i), ನಂ. 144, ಡಂಬಳ, ಗದಗ (ತಾ), ಕ್ರಿ.ಶ. 1098, ಪು. 175.

267. SII IX(i), ನಂ. 336, ಕುಡುತಿನಿ, ಬಳ್ಳಾರಿ (ತಾ), ಕ್ರಿ.ಶ. 1218, ಪು. 357.

268. EC XII, ಕಡೂರು 70, ಕ್ರಿ.ಶ. 1143, ಪು. 93.

269. EC IX, ಬೇ 317, ಕ್ರಿ.ಶ. 1173, ಪು. 294.

270. EC VI, ಕೃಪೇ 27, ಕ್ರಿ.ಶ. 1171, ಪು. 18.

271. SII XX, ನಂ. 199, ಕುಂದುಗೊಳ, ಕುಂದುಗೊಳ (ತಾ), ಕ್ರಿ.ಶ. 1240, ಪು. 248.

272. SII XX, ನಂ. 112, ಸಂಶಿ, ಕುಂದುಗೊಳ (ತಾ), ಕ್ರಿ.ಶ. 1144, ಪು. 145.

273. SII IX(i), ನಂ. 297, ಕುರುಗೋಡ, ಬಳ್ಳಾರಿ (ತಾ), ಕ್ರಿ.ಶ. 1177, ಪು. 326.

274. SII XX, ನಂ. 78, ಲಕ್ಷ್ಮೇಶ್ವರ, ಶಿರಹಟ್ಟಿ (ತಾ), ಕ್ರಿ.ಶ. 1118, ಪು. 97.

275. EC VII (Old), ಶಿಪು 118, ಕ್ರಿ.ಶ. 1054, ಪು. 217.

276. EI XIII, ಬೆಳಗಾವಿ, ಬೆಳಗಾವಿ (ತಾ), ಕ್ರಿ.ಶ. 1204, ಪು. 19-22.

277. SII XI, ನಂ. 97, ಮುಳುಗುಂದ, ಗದಗ (ತಾ), ಕ್ರಿ.ಶ. 1062, ಪು. 93.

278. ಪುಟ್ಟಪ್ಪ ಕೆ.ವಿ., ***ಯುಗಯಾತ್ರೀ ಭಾರತೀಯ ಸಂಸ್ಕೃತಿ***, ಸಂಪುಟ 2, ಪ್ರಸಾರಾಂಗ, ಮೈಸೂರು ವಿ.ವಿ., ಮೈಸೂರು, 1971, ಪು. 514.

279. ಕಲಬುರ್ಗಿ, ಎಂ.ಎಂ., ***ಶಾಸನ ಸೂಕ್ತಿ ಸುಧಾರ್ಣವ***, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1997, ಪು. 11.

280. SII XI(ii), ನಂ. 121, ಅಮ್ಮಿನಬಾವಿ, ಧಾರವಾಡ (ತಾ), ಕ್ರಿ.ಶ. 1071, ಪು. 139.

281. SII XX, ನಂ. 304, ಅಣ್ಣಿಗೆರೆ, ನವಲಗುಂದ (ತಾ), 12ನೇ ಶ., ಪು. 337.

282. SII XVIII, ನಂ. 68, ಯರಗುಪ್ಪಿ ಹುಬ್ಬಳ್ಳಿ (ತಾ), ಕ್ರಿ.ಶ. 1062, ಪು. 59.

283. EC X, ಅಕೆ 97, 12ನೇ ಶ., ಪು. 131

EC X, ಅಕೆ 72, ಕ್ರಿ.ಶ. 1208, ಪು. 78.

284. SII XX, ನಂ. 11, ಲಕ್ಷ್ಮೇಶ್ವರ, ಶಿರಹಟ್ಟಿ (ತಾ), ಕ್ರಿ.ಶ. 793, ಪು. 11.

285. SII XI, ನಂ. 97, ಮುಳುಗುಂದ, ಗದಗ (ತಾ), ಕ್ರಿ.ಶ. 1062, ಪು. 93.

286. SII XV, ನಂ. 46, ಸಾಲವಾಡಗಿ, ಬಾಗೇವಾಡಿ (ತಾ), ಜಗದೇಕಮಲ್ಲ II, ಪು. 62.

287. ಕನ್ನಡ ವಿ.ವಿ. ಶಾಸನ ಸಂಪುಟ-2, ಕೊಪ್ಪಳ (ಜಿಲ್ಲೆ), ನಂ. 27, ಕ್ರಿ.ಶ. 1082, ಪು. 307.

288. SII XV, ನಂ. 67, ಲಕ್ಕುಂಡಿ, ಗದಗ (ತಾ), ಕ್ರಿ.ಶ. 1185, ಪು. 93.

289. SII XV, ನಂ. 73, ಹೊಂಬಾಳ್, ಗದಗ (ತಾ), ಕ್ರಿ.ಶ. 1189, ಪು. 104.

290. EC VII (Old), ಶಿಪು 118, ಕ್ರಿ.ಶ. 1054, ಪು. 220.

291. EC VII (Old), ಶಿಪು 135, ಕ್ರಿ.ಶ. 1078, ಪು. 245.

292. EC IX, ಬೇ 373, ಹೊಯ್ಸಳ ಬಲ್ಲಾಳನ ಕಾಲ, ಪು. 336.

293. EC IX, ಬೇ 317, ಕ್ರಿ.ಶ. 1173, ಪು. 294.

294. ಆ್ಯರಿ.ಕ.ಎ. 1958, 59, ನಂ. 664, ಗೊಬ್ಬೂರ, ದೇವದುರ್ಗ (ತಾ), ಕ್ರಿ.ಶ. 1062.

295. SII XI, ನಂ. 97, ಮುಳುಗುಂದ, ಗದಗ (ತಾ), ಕ್ರಿ.ಶ. 1062, ಪು. 93.

296. *ಸುರಪುರ ತಾಲ್ಲೂಕಿನ ಶಾಸನಗಳು*, (ಸಂ) ಹನುಮಾಕ್ಷಿ ಗೋಗಿ, ಸಂ. 14, ಏವೂರು, ಕ್ರಿ.ಶ. 1110, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, 1995, ಪು. 38.

297. SII XV, ನಂ. 220, ಮುಳುಗುಂದ, ಗದಗ (ತಾ), ಕ್ರಿ.ಶ. 1207, ಪು. 267.

298. SII XV, ನಂ. 129, ಇಂಗಳೇಶ್ವರ, ಬಾಗೇವಾಡಿ (ತಾ), ಕ್ರಿ.ಶ. 1176, ಪು. 166.

299. EI XIII, ಲಕ್ಷ್ಮೇಶ್ವರ, ಶಿರಹಟ್ಟಿ (ತಾ), ಕ್ರಿ.ಶ. ಸು. 725, ಪು. 189-91.

300. SII XX, ನಂ. 248, ಸೌದತ್ತಿ, ಪರಸಗಡ (ತಾ), ಕ್ರಿ.ಶ. 1228, ಪು. 308.

301. SII XV, ನಂ. 139, ನರೇಗಲ್, ರೋಣ (ತಾ), ಕ್ರಿ.ಶ. 1183, ಪು. 180.

302. EC XII, ಕ 116, ನಿಡುಗಟ್ಟ, ಕ್ರಿ. ಶ. 1139, ಪು. 127.

303. EC IX, ಬೇ 389, ಕ್ರಿ. ಶ. 1133, ಪು. 356.

304. SII XI(ii), ನಂ. 198, ಮುಳುಗುಂದ, ಗದಗ (ತಾ.), ಕ್ರಿ. ಶ. 1124, ಪು. 253.

305. SII IX(i), ನಂ. 336, ಕುಡುತಿನಿ, ಬಳ್ಳಾರಿ (ತಾ.), ಕ್ರಿ. ಶ. 1218, ಪು. 357.

306. SII XI(i), ನಂ. 97, ಮುಳುಗುಂದ, ಗದಗ (ತಾ.), ಕ್ರಿ. ಶ. 1062, ಪು. 93.

307. EC IX, ಬೇ 317, ಕ್ರಿ. ಶ. 1173, ಪು. 294.

# ಅಧ್ಯಾಯ -5

# ಸಾಮಾಜಿಕ ಅಂಶಗಳು

## 5.1. ವರ್ಣ ಜಾತಿ

ಋಗ್ವೇದದಲ್ಲಿ ಜಾತಿಗಳ ಉಲ್ಲೇಖವಿಲ್ಲವಾದರೂ ಬಡಗಿ, ಕಮ್ಮಾರ, ನಾವಿದ, ವೈದ್ಯ, ಅಕ್ಕಸಾಲಿ, ವ್ಯಾಪಾರಿ, ರಥಕಾರ ಮುಂತಾದ ವೃತ್ತಿಕಾರರ ಹೆಸರಿವೆ. ಇವುಗಳಲ್ಲಿ ಯಾವು ಯಾವುದು ಯಾವ ವರ್ಣಕ್ಕೆ ಸೇರಿದ್ದುವೆಂಬುದನ್ನು ಹೇಳುವುದು ಅಸಾಧ್ಯ. ಋಗ್ವೇದದಲ್ಲಿ 'ಜಾತಿ' ಶಬ್ದವಿಲ್ಲದಿದ್ದರೂ ನಿರುಕ್ತದಲ್ಲಿದೆ, ಪಾಣಿನಿಯಲ್ಲಿದೆ. ಈಚಿನವಾದ ಸ್ಮೃತಿಗ್ರಂಥಗಳಲ್ಲಿ 'ಜಾತಿ' ಮತ್ತು 'ವರ್ಣ'ಗಳಿಗೆ ವ್ಯತ್ಯಾಸ ಮಾಡಿದ್ದರೂ ಬಹು ಹಿಂದಿನಿಂದಲೂ ಅವುಗಳ ಮಧ್ಯೆ ಗೊಂದಲಗಳಿದ್ದೇ ಇವೆ. ಮನುವೇನೋ 'ವರ್ಣ'ವನ್ನು ಮಿಶ್ರಜಾತಿಗಳೆಂಬ ಅರ್ಥದಲ್ಲೂ 'ಜಾತಿ'ಯನ್ನು ವರ್ಣ ಎಂಬರ್ಥದಲ್ಲಿಯೂ ಬಳಸುತ್ತಾನೆ.

ಆಗಲೇ ಹೇಳಿದಂತೆ ಋಗ್ವೇದದಲ್ಲಿ ಬಡಗಿ, ಕಮ್ಮಾರ, ರಥಕಾರ ಮುಂತಾದ ವೃತ್ತಿಕಾರ ಗುಂಪುಗಳ ಹೆಸರಿದ್ದರೂ ಅವು ಇಂದಿನ ಅರ್ಥದಲ್ಲಿ 'ಜಾತಿ' ಎಂದು ಕರೆಯಿಸಿಕೊಳ್ಳುತ್ತೇವೆಯೋ ಎಂಬುದಕ್ಕೆ ಆಧಾರಗಳಿಲ್ಲ.

ಗೌತಮ ಮತ್ತು ಮನುಗಳು ಹೇಳುವಂತೆ ವಿವಿಧ ವರ್ಣಗಳ ಮಧ್ಯೆ ನಡೆಯುವ ಮದುವೆಗಳಿಂದ ಮಿಶ್ರ ಜಾತಿಗಳೂ, ಈ ಮಿಶ್ರ ಜಾತಿಗಳ ಮಧ್ಯೆ ನಡೆಯುವ ಮದುವೆಗಳಿಂದ ಇನ್ನೂ ಹೆಚ್ಚಿನ ಜಾತಿ ಉಪಜಾತಿಗಳೂ ನಿರ್ಮಾಣಗೊಳ್ಳುತ್ತವೆ. ಅವರ ಪ್ರಕಾರ 'ವರ್ಣಸಂಕರ'ವೇ ಜಾತಿಗಳ ಉಗಮಕ್ಕೆ ಮೂಲ. ಪರಂಪರೆಯಿಂದ ಬಂದ ಬೇರೆ ಬೇರೆ ವೃತ್ತಿಗಳನ್ನು ಅನುಸರಿಸುತ್ತಿದ್ದ ಗುಂಪುಗಳು ತಮ್ಮ ವೃತ್ತಿ ರಹಸ್ಯಗಳನ್ನು ತಮ್ಮ ಗುಂಪಿನವರಲ್ಲದೆ ಬೇರೆಯವರಿಗೆ ಬಿಟ್ಟುಕೊಡದೆ, ತಮ್ಮ ತಮ್ಮಲ್ಲೇ ಮದುವೆಯಾಗುತ್ತ ಬಂದುದರ ಪರಿಣಾಮವೇ ಬೇರೆ ಬೇರೆ ಜಾತಿಗಳ ಹುಟ್ಟಿಗೆ ಕಾರಣವಾಗಿರಬೇಕು.[1]

ಕನ್ನಡದ ಮೊದಲ ಕೃತಿ ಕವಿರಾಜಮಾರ್ಗದಲ್ಲಿ ನಾಲ್ಕು ವರ್ಣಗಳನ್ನು ವೈಶ್ಯ, ಬ್ರಾಹ್ಮಣ, ಕ್ಷತ್ರಿಯ, ಶೂದ್ರ ಈ ಅನುಕ್ರಮದಲ್ಲಿ ಹೇಳಿ ಪಶುಪಾಲನೆ ('ಗೋಪ'), ಅಧ್ಯಯನ, ರಾಜ್ಯಭಾರ ('ಕ್ಷ್ಮಾಪರಿಪಾಲ್ಯ'), ವ್ಯವಸಾಯಗಳು ('ಕ್ಷೇತ್ರಕರ್ಷಣ') ಅವರ ವೃತ್ತಿಗಳು ಎಂದಿದೆ. ಒಂದು ಕಾಲಕ್ಕೆ, ಪಶುಪಾಲನೆ, ವ್ಯವಸಾಯ, ವ್ಯಾಪಾರಾದಿಗಳೆಲ್ಲ ವೈಶ್ಯರ

ವೃತ್ತಿಯಾಗಿದ್ದು, ಶೂದ್ರರದು ಮೇಲಿನವರ ಸೇವೆ ಮಾಡುವುದಷ್ಟೇ ಕೆಲಸವಾಗಿದ್ದು ಕ್ರಮೇಣ ವ್ಯಾಪಾರ ಮಾತ್ರ ವೈಶ್ಯರ ವೃತ್ತಿಯೆಂದೂ ಪಶುಪಾಲನೆ, ವ್ಯವಸಾಯಗಳು ಶೂದ್ರರ ಉದ್ಯೋಗಗಳೆಂದೂ ಪರಿಗಣಿತವಾದವು. ಈ ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣನೇ ಶ್ರೇಷ್ಠನೆಂದೂ ಉಳಿದ ವರ್ಣಗಳು ಅವನ ಸೇವೆಗಾಗಿ ಇರುವವೆಂದೂ ಸ್ಪಷ್ಟೋಕ್ತಿಗಳಿವೆ. ದುರ್ಗಸಿಂಹನ ಪಂಚತಂತ್ರದ ಪ್ರಕಾರ ಬ್ರಾಹ್ಮಣನಿಗೆ ಅಗ್ನಿಯೇ ಗುರು. ಪಂಪನು[2] ಕ್ಷತ್ರಿಯ, ವೈಶ್ಯ ಶೂದ್ರರಿಗೆ ಬ್ರಾಹ್ಮಣನೇ ಗುರು ಎನ್ನುತ್ತಾನೆ. ಕ್ರಿ.ಶ. 1142ರ ಕೆಲ್ಲಂಗೆರೆಯ ಶಾಸನದಲ್ಲಿ[3] 'ಕ್ಷತ್ರಿಯವೈಶ್ಯಶೂದ್ರತ್ರಯ ಲಲಾಟಪಾದಘಟ್ಟಿತರುಂ' ಎಂಬ ಮಾತೂ ಬರುತ್ತದೆ. ಸುಕುಮಾರ ಚರಿತೆಯಲ್ಲಿ ಬ್ರಾಹ್ಮಣ ನಾಗಶರ್ಮ ತನ್ನ ಮಗಳಿಗೆ ಹೀಗೆ ಹೇಳುತ್ತಾನೆ. 'ನಾಮಪ್ಪೊಡೆ ವರ್ಣೋತ್ತಮರ್ ನಮಗತ್ತಲಾರುಮಿಲ್ಲಾ'. ಕುಮಾರವ್ಯಾಸನೂ ದುರ್ಗಸಿಂಹನಂತೆಯೇ ಅಭಿಪ್ರಾಯಪಟ್ಟಿದ್ದಾನೆ.[4] ಇವರಿಬ್ಬರಿಗೂ ಮೂಲವಾದ ಸಂಸ್ಕೃತ ಪದ್ಯವೊಂದನ್ನು ದುರ್ಗಸಿಂಹನೇ ಕೊಟ್ಟಿದ್ದಾನೆ 'ಗುರುರಗ್ನಿರ್ದ್ವಿಜ ಜಾತೀನಾಂ ವರ್ಣಾನಾಂ ಬ್ರಾಹ್ಮಣೋ ಗುರುಃ । ಪತಿರೇವ ಗುರುಃ ಪತಿರೇವ ಗುರುಃ ಸ್ತ್ರೀಣಾಂ ಸರ್ವಸ್ಯಾ ಭ್ಯಾಗತೋ ಗುರು'. ಬ್ರಹ್ಮಶಿವನ ಪ್ರಕಾರ ವರ್ಣಗಳಲ್ಲಿ ಬ್ರಾಹ್ಮಣನಿಗಿಂತ ಕ್ಷತ್ರಿಯ ಮೇಲು, 'ನೃಪನಾದಿಯಾಗೆ ಕಡೆಯೊಳ್ ಶ್ವಪಚಂಬರಂ..... '[5]

> *ಕ್ಷತ್ರಿಯನೆ ಧಾತ್ರಿಗೊಡೆಯಂ । ಕ್ಷತ್ರಿಯನಾರ್ಗ್ಗನನಿತ್ತನದು ದೈವಕೃತಂ ॥*
> *ಕ್ಷತ್ರಿಯನೆ ತೀರ್ಥಕರನಾ । ಕ್ಷತ್ರಿಯನದಱಿಂದೆ ಪಿರಿಯನೆಲ್ಲಂದದೊಳಂ '*[6]

ಕ್ಷತ್ರಿಯನೇ ಭೂಮಿಗೆ ಒಡೆಯನೂ ತೀರ್ಥಂಕರನೂ ಆಗಿರುವುದರಿಂದ ಎಲ್ಲರಿಗಿಂತ ಅವನೇ ಶ್ರೇಷ್ಠ. ಮೂಲದಲ್ಲಿ ಜೈನ, ಬೌದ್ಧ ಧರ್ಮಗಳು ಬ್ರಾಹ್ಮಣ ಶ್ರೇಷ್ಠತ್ವವನ್ನು ಪ್ರಶ್ನಿಸಿದುವು ಎಂಬುದನ್ನು ನೆನಪಿನಲ್ಲಿಟ್ಟುಕೊಂಡರೆ, ಬ್ರಹ್ಮಶಿವನ ಮಾತುಗಳು ಆಶ್ಚರ್ಯವನ್ನು ಹುಟ್ಟಿಸಲಾರವು. ಹಿಂದಿನ ಪದ್ಧತಿಯನ್ನನುಸರಿಸಿ ದುರ್ಗಸಿಂಹನು ಶೂದ್ರ ಅಥವಾ ರೈತನನ್ನು 'ಪಾದಜ'ನೆಂದು ಕರೆದಿದ್ದಾನೆ.

ಈ ನಾಲ್ಕು ವರ್ಣಗಳೂ, ತಂತಮ್ಮ ವರ್ಣಧರ್ಮವನ್ನು ಅನುಸರಿಸಿಕೊಂಡು ಇರುವುದೇ 'ಧರ್ಮ' ಎಂಬಂತಹ ಮಾತುಗಳುಂಟು. ಜಗನ್ನಾಥ ವಿಜಯದ ಪ್ರಕಾರ, ಒಂದು ಉತ್ತಮ ದೇಶದ ಸಮಾಜದಲ್ಲಿ ವರ್ಣಸಂಕರವು, ವರ್ಣಗಳ ಮಿಶ್ರಣವು ಇರದು. ದುರ್ಗಸಿಂಹ ಹೇಳುವಂತೆ ಇದು ವರ್ಣಗಳಿಗೆ ಮಾತ್ರವಲ್ಲ, ಸಮಸ್ತ ಪ್ರಾಣಿಗಳಿಗೂ ಅನ್ವಯವಾಗತಕ್ಕದ್ದು 'ಸಮಸ್ತ ಪ್ರಾಣಿಗಳುಂ ತಂತಮ್ಮ ಜಾತಿಗೆ ತಕ್ಕಂದದೊಳ್ ಜೀವನೋಪಾಯಮಂ ಚಿಂತಿಸಿಕೊಂಡು ಬಾಳ್ವುದೆ ಧರ್ಮ'. ಇದು ಜಾತಿಪದ್ಧತಿಯ ಸ್ಪಷ್ಟವಾದ ಲಕ್ಷಣ ಹುಟ್ಟಿನಿಂದ ಒಬ್ಬ ವ್ಯಕ್ತಿ ಒಂದೊಂದು ಜಾತಿಗೆ

ಸೇರುತ್ತಾನೆ. ಮತ್ತು ಆಯಾ ಜಾತಿ ಅನುಸರಿಸಿಕೊಂಡು ಬಂದಿರುವ ವೃತ್ತಿಯನ್ನೇ ಅವನು ಅವಲಂಬಿಸಬೇಕು. ಉದಾ : ಕುಂಬಾರ ಮಡಕೆಯನ್ನು ಮಾಡುವುದು, ರೈತ ಹೊಲವನ್ನು ಉಳುವುದು, ನೇಕಾರ ಬಟ್ಟೆ ನೇಯುವುದು ಇತ್ಯಾದಿ. ಆಯಾ ಜಾತಿಯ ನಿಯಮಗಳನ್ನು ಆಯಾ ಜಾತಿಯವರು ಅನುಸರಿಸುವುದೇ 'ಧರ್ಮ'. ಇಲ್ಲಿ 'ಧರ್ಮ' ಎಂದರೆ ಮತ ಅಲ್ಲ, ಅನಾದಿ ಕಾಲದಿಂದ ನಡೆದು ಬಂದಿರುವ ಪರಂಪರೆ, ಪದ್ಧತಿ, ಸಹಜ ನಿಯಮ. ಈ ಪರಂಪರೆಗೆ ಕಾಪಾಡುವ, ಶಿಕ್ಷಿಸುವ ಶಕ್ತಿ ಇರುತ್ತದೆ. ಭಾರತದಲ್ಲಿ ಮತದ ನಿಯಮಗಳಿಗಿಂತ ಜಾತಿಯ ನಿಯಮಗಳು ಹೆಚ್ಚು ಕಠಿಣವೆಂಬ ಮಾತು ಒಂದರ್ಥದಲ್ಲಿ ನಿಜ.

### 5.1.1. ಜೈನ ಸಾಹಿತ್ಯದಲ್ಲಿದ್ದ ವರ್ಣ ಪದ್ಧತಿಯ ವಿವರಗಳು

ಬ್ರಹ್ಮಶಿವನ ಪ್ರಕಾರ ಕ್ಷತ್ರಿಯನೇ ವರ್ಣದಲ್ಲಿ ಮೇಲು, ಆ ನಂತರ ಪರದರು (ವೈಶ್ಯರು), ದ್ವಿಜ (ಬ್ರಾಹ್ಮಣರು) ರು ಹಾಗೂ ಶೂದ್ರರು ಎಂದು ತಿಳಿಸುತ್ತಾನೆ.

ಆದಿ ಪುರಾಣದಲ್ಲಿ ದ್ವಿಜ, ವಿಪ್ರ, ಬ್ರಾಹ್ಮಣ, ಕ್ಷತ್ರಿಯ, ವಣಿಕ, ವೈಶ್ಯ, ಶೂದ್ರ, ಸ್ಪೃಶ್ಯಾಸ್ಪೃಶ್ಯಕಾರು ಹೀಗೆ ಸಂಸ್ಕೃತ ಪದಗಳು ಉಲ್ಲೇಖಗೊಂಡಿವೆ. ಪಂಪನು ತನ್ನ ಗ್ರಂಥದಲ್ಲಿ ವರ್ಣ, ಜಾತಿ, ವಂಶ, ಸಂತತಿ ಎಂದು ಹೆಸರಿಸುತ್ತಾನೆ. ಸಮಯಪರೀಕ್ಷೆ ಹಾಗೂ ವಡ್ಡಾರಾಧನೆಯಲ್ಲಿ ಪಾರ್ವ (ಪಾರುವ), ಬೂಪ, ಪೊಲೆಯ, ಪರದ, ಒಕ್ಕಲಿಗ ಇತ್ಯಾದಿ ಪ್ರಾದೇಶಿಕ ಸಾಮಾಜಿಕ ವರ್ಗಗಳು ಉಲ್ಲೇಖಗೊಂಡಿವೆ.

**ವಡ್ಡಾರಾಧನೆಯಲ್ಲಿಯ ಸಾಮಾಜಿಕ ವರ್ಗಗಳು**

**ಪಾರ್ವ (Parva)**

ಈ ವರ್ಗದ ಕುರಿತು ವಡ್ಡಾರಾಧನೆ ಸ್ವಲ್ಪ ಮಟ್ಟಿಗೆ ಬೆಳಕು ಚೆಲ್ಲುತ್ತದೆ. 'ಪಾರ್ವ' ಪದವು ಸಾಮಾನ್ಯವಾಗಿ ಬ್ರಾಹ್ಮಣ ಎಂಬ ಅರ್ಥವನ್ನು ಕೊಡುತ್ತದೆ. ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಬ್ರಾಹ್ಮಣನನ್ನು 'ಪಾರ್ವ' ಅಥವಾ 'ಪಾರುವ' ಎಂದೇ ಕರೆಯಲಾಗಿದೆ. ಇದು ಒಂದೇ ವೃತ್ತಿಯ ವರ್ಗವಲ್ಲ. ಬ್ರಾಹ್ಮಣನು ಪುರೋಹಿತ, ಮಂತ್ರಿ, ಪ್ರಧಾನಿ, ಸಂಧಿವಿಗ್ರಹಿ, ಪೆರ್ಗಡೆ ಇತ್ಯಾದಿ ಕೆಲಸಗಳನ್ನು ನಿರ್ವಹಿಸುತ್ತಿದ್ದನು. ಈ ಬ್ರಾಹ್ಮಣನು ವೇದ, ಧರ್ಮಶಾಸ್ತ್ರ ವೇದಾಂಗ, ಮೀಮಾಂಸ, ನ್ಯಾಯ, ವ್ಯಾಕರಣ, ಪ್ರಮಾಣ, ಛಾಂದ, ಅಲಂಕಾರ, ನರವೈದ್ಯಶಾಸ್ತ್ರ ಮೊದಲಾದವುಗಳನ್ನು ಚೆನ್ನಾಗಿ

ತಿಳಿದುಕೊಂಡಿರಬೇಕಿತ್ತು. ಇಂಥಹ ಬ್ರಾಹ್ಮಣನನ್ನು ಪಂಡಿತ ಎಂದೂ ಕೂಡ ಕರೆಯಲಾಗುತ್ತಿತ್ತು. ಅನೇಕ ಕೌಶಲ್ಯವುಳ್ಳ ಇಂಥ ಬ್ರಾಹ್ಮಣನನ್ನು ರಾಜನು ತನ್ನ ದರ್ಬಾರಿನಲ್ಲಿ ವಿವಿಧ ಕೆಲಸಗಳಿಗೆ ಉಪಯೋಗಿಸಿಕೊಳ್ಳುತ್ತಿದ್ದ. ಬ್ರಾಹ್ಮಣನನ್ನು 'ಭಟ್ಟ' ಎಂದೂ ಕರೆಯಲಾಗುತ್ತಿತ್ತು. ಈತನು ರಾಜಕುಮಾರರಿಗೆ ವಿದ್ಯೆಯನ್ನು ಹೇಳಿಕೊಡುವ ಮೂಲಕ ಉಪಾಧ್ಯಾಯ ವೃತ್ತಿಯನ್ನು ಮಾಡುತ್ತಿದ್ದನು. ಅಲ್ಲದೆ ಈತನು ವೈದ್ಯ, ಜ್ಯೋತಿಷ್ಯ ಕೆಲಸವನ್ನು ನಿರ್ವಹಿಸುತ್ತಿದ್ದುದನ್ನು ಈ ಗ್ರಂಥಗಳು ಉಲ್ಲೇಖಿಸುತ್ತವೆ.

**ಪರದ (Parada)**

ವಡ್ಡಾರಾಧನೆಯು ಅನೇಕ ವಿಧದ ಪರದರನ್ನು (ವ್ಯಾಪಾರಿಗಳು) ಹೆಸರಿಸುತ್ತದೆ. ಪರದರು ಪಟ್ಟಣದ ಪ್ರಮುಖರು. ಅವರಲ್ಲಿನ ಮುಖ್ಯಸ್ಥನನ್ನು ರಾಜ ಶ್ರೇಷ್ಠಿ ಅಥವಾ ಪ್ರಧಾನ ಶ್ರೇಷ್ಠಿ ಎಂದೂ ಕರೆಯಲಾಗಿದೆ. ಸುಕುಮಾರ ಕಥೆಯಲ್ಲಿ ಬರುವ ಸುಕುಮಾರನು ಒಬ್ಬ ಪರದ ಕುಟುಂಬದಲ್ಲಿಯೇ ಜನಿಸಿದವನು. ಈ ಪರದರು ಕೆಲವೊಮ್ಮೆ ರಾಜನಿಗಿಂತ ಅತ್ಯಂತ ಶ್ರೀಮಂತರಾಗಿರುತ್ತಿದ್ದರು ಎಂಬುದನ್ನು ಕೂಡ ವಡ್ಡಾರಾಧನೆ ನಮಗೆ ತಿಳಿಸುತ್ತದೆ.

**ಒಕ್ಕಲಿಗ (Vokkaliga)**

ವಡ್ಡಾರಾಧನೆಯ ಲೇಖಕನ ಅಭಿಪ್ರಾಯದಂತೆ ಒಕ್ಕಲಿಗ ಪದವು ಸಾಮಾನ್ಯವಾಗಿ ಶೂದ್ರ ಎಂಬ ಅರ್ಥವನ್ನು ಒಳಗೊಂಡಿದೆ. ಒಕ್ಕಲಿಗ 'ನಾಡು'ನಲ್ಲಿ ವಾಸಿಸುತ್ತಿದ್ದು, ತಾನೇ ಸ್ವತಃ ವ್ಯವಸಾಯ ಅಥವಾ ಒಕ್ಕಲಿಗ ವೃತ್ತಿಯನ್ನು ಮಾಡುವವನು. ಈತನಿಗೆ 'ಒಕ್ಕಲ ಮಕ್ಕಳು' ಎಂಬ ಪದವೂ ಇದೆ. ಹಳ್ಳಿಯ ಹಾಗೂ ಸಮುದಾಯದ ಒಡೆಯನಾಗಿ 'ಗಾವುಂಡ' (Gavundas) ಇರುತ್ತಿದ್ದನು.

**ಸಾಮಂತ (Samanta)**

ಅರಸ, ಮಾಂಡಲಿಕ, ಸಾಮಂತ, ಮಹಾಸಾಮಂತ ಇತ್ಯಾದಿ ಪದಗಳು ಕೂಡ ವಡ್ಡಾರಾಧನೆಯಲ್ಲಿವೆ. ವಡ್ಡಾರಾಧನೆಯು ಸ್ಪಷ್ಟವಾಗಿ ಮಾಂಡಲಿಕನು ಸಾಮಂತನಂತೆ ಒಬ್ಬ ಸ್ವತಂತ್ರ ರಾಜನೆಂದೂ ಹಾಗೂ ಮಹಾಸಾಮಂತನು ಈತನು ಜಯಿಸಿಕೊಂಡ ರಾಜನೆಂದು ತಿಳಿಸುತ್ತದೆ. ಕೆಲವೊಮ್ಮೆ ಸಾಮಂತ ಹಾಗೂ ಮಹಾ ಸಾಮಂತರು ರಾಜನ ಮಹಾ ಪ್ರಧಾನನಂತೆ ಹಾಗೂ ಸೈನ್ಯದ ನಿರ್ವಹಣೆಯನ್ನು ನೋಡಿಕೊಳ್ಳುವ ರಾಜನಂತೆ ನಾಡಿನಲ್ಲಿ ಇರುತ್ತಿದ್ದರು.[7]

### 5.1.2. ಜಾತಿಗಳು

ಮಧ್ಯಯುಗದ ಕರ್ನಾಟಕದಲ್ಲಿ ಜಾತಿಯ ಕಟ್ಟುನಿಟ್ಟುಗಳು ಸ್ಮೃತಿಗಳು ಹೇಳುವಷ್ಟು ಬಿಗಿಯಾಗಿರಲಿಲ್ಲವೆಂದು ತೋರುತ್ತದೆ. ಕುಪಟೂರಿನ ಶಾಸನವೊಂದು[8] 'ಆಕೋಟೀಶ್ವರದೇವರಯಂಗಭೋಗರಂಗಭೋಗಕ್ಕೆನಡಬಿ ಪ್ರಥಮಸ್ತಳ। ಯಾಹಳ್ಳಿಗಣ ವ್ರಿತ್ತಿವಳಿತವರ್ತ್ತನೆಗೆಯು। ಧರ್ಮ್ಮಕ್ಕೆ। ಸಕಳಸಾಮ್ಯವೆಲ್ಲವಯಾಚಂದ್ರಾರ್ಕ್ಕತಾರಂಬರಂ ಧರ್ಮ್ಮ ಸ್ತಿರವಾಗಲಿ ಎಂದು। ಧಂರ್ಮ್ಮವ ಪ್ರತಿಷ್ಠಿಸಿದರುಯಾಸ್ತಳಕ್ಕೆಯುಂ। ಯಾಧರ್ಮ್ಮಕ್ಕೆಯುಂ। ಯಾಚಾರ್ಯ್ಯ ರುದ್ರಶಕ್ತಿ ದೇವರ್ಗ್ಗೆಯುಂ। ಯಾವನಾನೂವೊಬ್ಬನುರಾಜಗಾಮಿತ್ವವಮಾಡಿದಡೆ। ಚೋರಗಾಮಿತ್ವವಮಾಡಿದಡೆ। ದುಜ್ರನತ್ವವಂಮಾಡಿದಡೆ। ಪುರುಷದ್ವೇಷಮಾಡಿದಡೆ। ವಿಕರ್ಮ್ಮಯ- ಕರ್ತ್ತಬ್ಯಗತ್ಯಗಮನವಂ ಮಾಡಿದವನು ಬ್ರಾಹ್ಮಣ। ಕ್ಷತ್ರಿಯ । ವೈಸ್ಯ । ಶೂದ್ರ ಯಿೂ ನಾಲ್ಕು ಜಾತಿಯೊಳಗೆಯಾವವನ ಕೊಂದಡಂಜಾತಿವಿಜಾತಿಯಾತಿಯೆಂದು ಹಿಡೆಹಿಡಿದು ಎಳೆಯೆತಿನುಡಿವವನುಯಷ್ಟಾಂಗದ್ರೋಹನುಂಯ- ಯ್ಯೂರ್ವ್ವರಿಗೆಯೂ। ಏಳುವರೆ ಹಂನ್ನೊಂದು ವರೆಗೆಯೂ। ನಾಲ್ಕು ನಾಡಿಗೆಯೂ। ಹದಿನೆಂಟುಸಮೆಯಕೆಯೂ ಕೂಡೆದ್ರೋಹಿನಾಡಾಳ ಕೈಯ್ಯಸಾಯಸಾಲುವನು'।

ಎಂದರೆ ಯಾವುದೇ ಜಾತಿಯವನನ್ನು ಕೊಂದರೂ ಇಂಥ ಸಂದರ್ಭದಲ್ಲಿ ಜಾತಿಯನ್ನು ಎತ್ತಿ ನುಡಿದಿದ್ದರೆ ಅವನು ಅಷ್ಟಾಂಗದ್ರೋಹಿಯು, ಐನೂರ್ವರಿಗೆ, ಏಳುವರೆ ಹನ್ನೊಂದುವರೆಗೂ, ನಾಲ್ಕು ನಾಡಿಗೆಯು, ಹದಿನೆಂಟು ಸಮಯಕ್ಕೆಯೂ ದ್ರೋಹಿ, ಇಂಥವನು ಅತ್ಯಂತ ಹೀನಾಯವಾಗಿ ಸಾಯುವನು ಎಂದು ತಿಳಿಸುತ್ತದೆ. ಇದು ಪ್ರಾಚೀನ ಕರ್ನಾಟಕದಲ್ಲಿ ವ್ಯಾವಹಾರಿಕವಾಗಿ ರೂಢಿಯಲ್ಲಿದ್ದ ಜಾತಿ-ವರ್ಣಗಳ ಸಂಬಂಧಿಯಾದ ವಿಚಾರವನ್ನು ತಿಳಿಸುತ್ತದೆ.

### 5.1.3. ವಚನಕಾರರ ದೃಷ್ಟಿಯಲ್ಲಿ ವರ್ಣ-ಜಾತಿ

ವರ್ಣ-ಜಾತಿ ಪದಗಳು ವಚನಕಾರರಿಗೆ ತಿಳಿದಿದ್ದುದು ಮಾತ್ರವಲ್ಲದೆ ಅವುಗಳ ಬಗ್ಗೆ ಅವರಿಗೆ ಸ್ಪಷ್ಟ ಕಲ್ಪನೆಯೂ ಇದ್ದಿತು. 'ಚತುರ್ವರ್ಣ' ಎಂಬ ಮಾತು ಸಿದ್ಧರಾಮನಲ್ಲಿ ಬರುತ್ತದೆ. ವೀರಶೈವನು ಶೂದ್ರನಾದರೂ ('ಚತುರ್ವರ್ಣಿ') ಚತುರ್ವರ್ಣಗಳನ್ನು ಮೀರಿದವನು, ಚತುರ್ವರ್ಣಗಳ ಆಚೆ ಇರುವವನು ಅಥವಾ ಚತುರ್ವರ್ಣಗಳನ್ನು ಅಥವಾ ಚತುರ್ವರ್ಣಗಳು ಪ್ರತಿಪಾದಿಸುವ ಅನುಶ್ರೇಣಿಯನ್ನು ಮನ್ನಿಸಿದವನು ಎನ್ನುತ್ತಾನೆ.[9] ಎಂದರೆ ಚತುರ್ವರ್ಣಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಯಾರೇ ಆಗಲಿ ಯಾವನು ಅವುಗಳ ಮೇಲು ಕೀಳನ್ನು ಗುರುತಿಸುವುದಿಲ್ಲವೋ ಅವನೇ ವೀರಶೈವ. ಒಕ್ಕಲಿಗ ಮುದ್ದಣ್ಣನಿಗೆ ಬ್ರಾಹ್ಮಣ ವೇದವನ್ನೋದುವ, ಕ್ಷತ್ರಿಯ ಯುದ್ಧ ಮಾಡುವ, ವೈಶ್ಯ ವ್ಯಾಪಾರ

ಮಾಡುವ, ಶೂದ್ರ ಉಳುಮೆ ಮಾಡುವ ವೃತ್ತಿಯವರೆಂಬ ಸಾಂಪ್ರದಾಯಿಕ ಸಂಗತಿ ತಿಳಿದಿದೆ. ತಾನು ಶೂದ್ರನಾದರೂ ತನ್ನ ಮಿತಿಗಳನ್ನು ಲಕ್ಷ್ಯಕ್ಕೆ ತಾರದೆ ತನ್ನನ್ನು ಒಪ್ಪಿಕೊಳ್ಳಬೇಕೆಂದು ತನ್ನ ಆರಾಧ್ಯ ದೈವವನ್ನು ಬೇಡಿಕೊಂಡಿದ್ದಾನೆ.[10] ವರ್ಣ ವ್ಯವಸ್ಥೆಯ ಅರಿವು ಸಾಂಪ್ರದಾಯಿಕವಾಗಿ ಬಂದದ್ದು, ಅದನ್ನು ವಚನಕಾರರು ತಮ್ಮ ವಚನಗಳಲ್ಲಿ ಉಲ್ಲೇಖಿಸಿದರು.

ಕರ್ನಾಟಕದಲ್ಲಿ ಹಿಂದೆ 'ಅಷ್ಟಾದಶ ಜಾತಿ' ಅಥವಾ 'ಹದಿನೆಂಟು ಜಾತಿ' ಎಂಬುದು ಒಂದು ಅಂಗೀಕೃತವಾದ ಮಾತಾಗಿದ್ದಿತು. ಜಾತಿಗಳು ಹದಿನೆಂಟಕ್ಕಿಂತ ಎಷ್ಟೋ ಹೆಚ್ಚಾಗಿದ್ದರೂ ಆ ಮಾತು ಹಾಗೇ ಉಳಿದುಕೊಂಡು ಬಂದಿತು. ಲಕ್ಷ್ಮೇಶ್ವರದ ಸು. ಕ್ರಿ.ಶ. 725ರ ಶಾಸನವೇ ಆ ಬಗ್ಗೆ ಬಹುಶಃ ಮೊದಲ ಉಲ್ಲೇಖ.[11] ಇಲ್ಲಿಯ ಹದಿನೆಂಟು ಜಾತಿಗಳಲ್ಲಿ ಬ್ರಾಹ್ಮಣರು, ವರ್ತಕರು ಸೇರಿಲ್ಲ. ವರ್ತಕ ಸಮೂಹದ ಬೇರೆ ಬೇರೆ ಘಟಕಗಳನ್ನು (ಉದಾ : ಕಂಚಗಾರರು, ತೆಲ್ಲಿಗರು, ಇತ್ಯಾದಿ). 'ಉತ್ತಮ', 'ಮಧ್ಯಮ', 'ಕನಿಷ್ಟ', 'ಕನೀಯಸ'=(ಅಧಮ, ಹೀನ) ಎಂಬ ಬೇರೆ ಬೇರೆ ವರ್ಗಗಳಾಗಿ ವಿಂಗಡಿಸಿದೆ (ಅವು ಅವರ ಆರ್ಥಿಕ ಮಟ್ಟವನ್ನವಲಂಬಿಸಿವೆಯೆಂಬುದು ಸ್ಪಷ್ಟ). ನಮಗೆ ಈ ಶಾಸನದಲ್ಲಿ ಪ್ರಸ್ತುತವೆಂದರೆ 'ಪ್ರಕೃತಿ' ಎಂಬ ಶಬ್ದ 'ಪ್ರಜೆ' 'ಜಾತಿ' ಎಂಬರ್ಥದಲ್ಲಿ ಬಳಕೆಯಾಗಿರುವುದು. ಹದಿನೆಂಟು ಜಾತಿಗಳಲ್ಲಿ ಮೊದಲನೆಯದು ಬ್ರಾಹ್ಮಣ. ಕೊನೆಯದು 'ಅಂತ್ಯಜ' ಅಥವಾ ಹೊಲೆಯ. ಜಾತಿಗಳಲ್ಲೆಲ್ಲಾ ಬ್ರಾಹ್ಮಣ ಶ್ರೇಷ್ಠ. ಹೊಲೆಯ ಕನಿಷ್ಠ ಎಂಬುದು ಸಾರ್ವತ್ರಿಕವಾಗಿ ಒಪ್ಪಿತವಾಗಿದ್ದಿತು. 'ಜಾತಿಯೊಳೆಲ್ಲಮುತ್ತಮದ ಜಾತಿಯ ವಿಪ್ರಕುಲ' ಎಂಬ ಪಂಪನ ಮಾತಾಗಲಿ, 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ'[12] ಎಂಬ ಬಸವಣ್ಣನವರ ಮಾತಾಗಲಿ ಇದನ್ನೇ ತಿಳಿಸುತ್ತದೆ. 'ಬ್ರಾಹ್ಮಣ ಮೊದಲಾಗಿ ಶ್ವಪಚ ಕಡೆಯಾಗಿ' ಎಂಬ ಹಾವಿನಹಾಳ ಕಲ್ಲಯ್ಯನ ಮಾತೂ ಅದನ್ನೇ ಹೇಳುತ್ತದೆ'.[13] 'ಅಷ್ಟಾದಶಜಾತಿ' ಎಂಬ ಮಾತು ಬೇರೆ ಬೇರೆ ವಚನಕಾರರಲ್ಲಿ ಕಾಣಿಸಿಕೊಳ್ಳುತ್ತದೆ.[14] ಭೀಮಕವಿಯ ಬಸವ ಪುರಾಣದಲ್ಲಿ ಬಿಜ್ಜಳ 'ಹದಿನೆಂಟು ವರ್ಣ'ಗಳೂ ಆದಿ ಕಾಲದಲ್ಲಾದುವು ಎನ್ನುತ್ತಾನೆ. ದೇವರು ಮನುಷ್ಯನ ಜೊತೆಗೇ ಹದಿನೆಂಟು ಜಾತಿಗಳನ್ನೂ ಸೃಷ್ಟಿಸಿದನೆಂಬುದು ಅದರ ಸಾರಾಂಶ. 'ವರ್ಣ' ಎನ್ನುವ ಮಾತು 'ಜಾತಿ' ಎಂಬರ್ಥದಲ್ಲಿ ಬಳಕೆಯಾಗಿದೆ ಇಲ್ಲಿ.[15]

ಆ ಹದಿನೆಂಟು ಜಾತಿ ಜನರ ವೃತ್ತಿಗಳನ್ನು 'ಹದಿನೆಂಟು ಕಾಯಕ' ವೆಂದಿದ್ದಾನೆ ಕನ್ನಡಿ ಕಾಯಕದ ಅಮ್ಮಿದೇವ.[16] ಇಬ್ಬರು ವಚನಕಾರರು ಆ ಹದಿನೆಂಟು ಜಾತಿಗಳ ಪಟ್ಟಿಕೊಟ್ಟಿದ್ದಾರೆ. ಆ ಜಾತಿಗಳು ಸೊಡ್ಡಳ ಬಾಚರಸನ ಪ್ರಕಾರ ಪ್ರತಿ ವ್ಯಕ್ತಿಯಲ್ಲಿಯೂ ಇವೆ.

ಸೊಡ್ಡಳ ಬಾಚರಸ ನ ವಚನ ಹೀಗಿದೆ.

> *'ಶಿಖಿ ಬ್ರಾಹ್ಮಣ, ನಯನ ಕ್ಷತ್ರಿಯ, ನಾಶಿಕ ಬಣಜಿಗ, ಅಧರ ಒಕ್ಕಲಿಗ,*
> *ಕರ್ಣ ಗೊಲ್ಲ, ಕೊರಳು ಕುಂಬಾರ, ಬಾಹು ಪಂಚಾಳ, ಅಂಗೈ ಉಪ್ಪಾರ,*
> *ನಖ ನಾಯಿಂದ, ಒಡಲು ಡೊಂಬ, ಬೆನ್ನು ಆಸಗ, ಚರ್ಮ ಬೇಡ,*
> *ಪೃಷ್ಠಸ್ಥಾನ ಕಬ್ಬಲಿಗ, ಒಳದೊಡೆ ಹೊಲೆಯ,*
> *ಮೊಣಕಾಲು ಈಳಿಗ, ಕಣಕಾಲು ಸಮಗಾರ,*
> *ಮೇಗಾಲು ಮಚ್ಚಿಗ, ಚಲಪಾದವೆಂಬ ಅಂಗಾಲು ಶುದ್ಧಮಾದಿಗ ಕಾಣಿರೋ*
> *ಇಂತೀ ಹದಿನೆಂಟು ಜಾತಿ ತನ್ನಲಿ ಉಂಟು.*
> *ಇವು ಇಲ್ಲಾಯೆಂದು ಜಾತಿಗೆ ಹೋರುವ ಅಜ್ಞಾನಿಗಳ*
> *ನಮ್ಮ ಸೊಡ್ಡಳ ದೇವರು ಮೆಚ್ಚನಯ್ಯಾ'*

ಇಂತೀ ಹದಿನೆಂಟು ಜಾತಿ ತನ್ನಲ್ಲಿ ಉಂಟು ಎನ್ನುತ್ತಾನೆ. ಸೊಡ್ಡಳ ಬಾಚರಸ.[17] ಮನುಷ್ಯನ ದೇಹದ ಮೇಲ್ತುದಿಯಿಂದ ಕೆಳಗಿನ ಅಂಗಾಲುವರೆಗೆ ಇರುವ ಒಂದೊಂದು ಅಂಗಕ್ಕೂ ಒಂದೊಂದು ಜಾತಿಯನ್ನು ಸಮೀಕರಿಸಿ ಮನುಷ್ಯ ಸಮಾಜ ಒಬ್ಬ ವ್ಯಕ್ತಿಯಿದ್ದಂತೆ, ಅದು ಒಂದು ಅಖಂಡ ವಸ್ತು, ಅದರ ಭಿನ್ನ ಭಿನ್ನ ಭಾಗಗಳೇ ಜಾತಿಗಳು ಎಂಬ ಕಲ್ಪನೆ ವಿನೂತನವಾದುದು. ಅಂಬಿಗರ ಚೌಡಯ್ಯನು 'ಹದಿನೆಂಟು ಕುಲಜಾತಿ' ಉಲ್ಲೇಖ ಮಾಡಿ, ಹದಿನೇಳನ್ನು ಮಾತ್ರ ಕೊಡುತ್ತಾನೆ. ಅಲ್ಲಿ ಬಿಟ್ಟು ಹೋಗಿರುವ ಬ್ರಾಹ್ಮಣನನ್ನು ಸೇರಿಸಿದರೆ, ಸಂಖ್ಯೆ ಹದಿನೆಂಟಾಗುತ್ತದೆ. ಚೌಡಯ್ಯನ ಪಟ್ಟಿ ಹೀಗಿದೆ.[18]

> *'ಕಣ್ಣೇ ಕಂಚುಗಾರ, ಕರ್ಣವೇ ಬಣಜಿಗ, ಮೂಗೇ ಈಳಿಗ,*
> *ಕೊರಳೇ ಕುಂಬಾರ, ತುಟಿಯೇ ಹೆಂಡಗಾರ, ಹಲ್ಲೇ ಕಲ್ಲುಕುಟಿಗ,*
> *ತಲೆಯೇ ಮೋಪುಗಾರ, ಬೆನ್ನೆ ಬೇಡ, ಅಂಗೈಯೇ ಅಕ್ಕಸಾಲಿಗ,*
> *ಮುಂಗೈಯೇ ಬಡಿಗ, ಕರವೇ ಕೋಮಟಿಗ,*
> *ಕಣಕಾಲೇ ಕಾಳಿಂಗ, ಕುಂಡಿಯೇ ಕುಡುವೊಕ್ಕಲಿಗ,*
> *ಒಳದೊಡೆಯೇ ಸಮಗಾರ, ಹೊರದೊಡೆಯೇ ಮಚ್ಚಿಗ,*
> *ಮೇಗಾಡಿ ಹೊಲೆಯ, ಬುದ್ಧಿಯೇ ಬಯಲಗಂಬಾರ.*
> *- ಇಂತಪ್ಪ ಕುಲ ಹದಿನೆಂಟು ಜಾತಿ*
> *ಎಲು ಮಾಂಸವನು ತುಂಬಿಟ್ಟುಕೊಂಡು*
> *ನನ್ನ ಕುಲ ಹೆಚ್ಚು, ನಿನ್ನ ಕುಲ ಕಡಿಮೆ ಎಂದು*
> *ಹೊಡೆದಾಡುವಂತಹ ಅಣ್ಣಗಳನ್ನು ಹಿಡಿತಂದು*
> *ಮೂಗನೆ ಸವರಿ ಮೆಣಸಿನ ಹಿಟ್ಟು ತುಪ್ಪವ ತುಂಬಿ*
> *ನಮ್ಮ ಪಡಿಹಾರಿ ಉತ್ತಣ್ಣನ ವಾಮಪಾದುಕೆಯಿಂದ*
> *ಪಡಪಡನೆ ಹೊಡಿ ಎಂದಾತ,*
> *ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.'*

ಈ ಪಟ್ಟಿಯ ಕೊನೆಯಲ್ಲಿರುವ 'ಬಯಲಗಂಬಾರ' ಜಾತಿ ಶ್ರೇಣಿಯಲ್ಲಿ ಕೊನೆಯವನು. ಅವನು ಅಸ್ಪೃಶ್ಯನಲ್ಲದಿದ್ದರೂ ಪಟ್ಟಿಯಲ್ಲಿ ಹೊಲೆಯನಿಗಿಂತ ಕೆಳಗಿನವನೆಂದು ತೋರಿದರೂ ಅವನು ಊರಿಗೆ ಸೇರಿದವನಾದ್ದರಿಂದ ಹೊಲೆಯನಿಗಿಂತ ಮುಂದಿನ ಜಾಗದಲ್ಲಿಟ್ಟಿರುವಂತೆ ಊಹಿಸಬಹುದು. ಆದರೆ ಅವನನ್ನು ಮನುಷ್ಯನ ಉಳಿದ ಅಂಗಗಳಂತೆ ಒಂದು ಎಂದು ಭಾವಿಸದೆ, ಅವನನ್ನು ಅಂತರಂಗದ 'ಬುದ್ಧಿ' ಎಂದು ಭಾವಿಸಿದ್ದಾನೆ. ಕೆಳವರ್ಗದ ಬಗ್ಗೆ ಅಂಬಿಗರ ಚೌಡಯ್ಯ ತೋರಿರುವ ಈ ಪ್ರತಿಕ್ರಿಯೆ ಗಮನಾರ್ಹ. 'ಇಂತಪ್ಪ ಕುಲ ಹದಿನೆಂಟು ಜಾತಿ ಎಲು ಮಾಂಸವನ್ನು ತುಂಬಿಟ್ಟುಕೊಂಡು' ಎಂದು ಹೇಳುತ್ತ ಬಾಚರಸನಂತೆಯೇ ಚೌಡಯ್ಯನೂ ಎಲ್ಲ ಹದಿನೆಂಟು ಜಾತಿಗಳೂ ಪ್ರತಿವ್ಯಕ್ತಿಯಲ್ಲಿಯೂ ಇವೆ ಎನ್ನುತ್ತಾನೆ. ಹೀಗಿರುವಾಗ ಜಾತಿಯಲ್ಲಿ ಮೇಲು, ಕೀಳು ಎಂದು ಹೊಡೆದಾಡುವುದು ವ್ಯರ್ಥ ಎಂಬುದು ಅವರ ವಾದ.

ಇನ್ನು ನಮಗೆ ದೊರಕುವ ಬೇರೆ ಪಟ್ಟಿಗಳಲ್ಲಿಯೂ ಹೊಲೆಯ, ಮಾದಿಗರ ಹೆಸರುಗಳು ಕೊನೆಯಲ್ಲಿವೆ.[19]

ಅಂಬಿಗರ ಚೌಡಯ್ಯ ಮತ್ತು ಸೊಡ್ಡಳ ಬಾಚರಸರು ಹದಿನೆಂಟು ಜಾತಿಗಳ ಹೆಸರು ಹೇಳಿ, ಅವು ಪ್ರತಿಯೊಬ್ಬ ಮನುಷ್ಯನಲ್ಲೂ ಉಂಟು ಎಂದು ಹೇಳುವುದರ ಮೂಲಕ ಜಾತಿಗಳು ಸಮಾಜ ಪುರುಷನ ಬೇರೆ ಬೇರೆ ಅಂಗಗಳೆಂಬುದನ್ನು ತಿಳಿಸುತ್ತಾರೆ. ಜಾತಿಗಳ ಉತ್ಪತ್ತಿ ಅಥವಾ ವಿಭಜನೆ ಬೇರೆ ಬೇರೆ ಉದ್ಯೋಗಗಳಿಂದ ಎಂಬುದನ್ನು ಬಸವಣ್ಣ ಗುರುತಿಸಿದ್ದಾನೆ.[20] ಮೇಲೆ ಹೇಳಿದ ಹದಿನೆಂಟು ಜಾತಿಗಳಲ್ಲಿ ಒಂದೊಂದು ಜಾತಿಗೂ ಬೇರೆ ಬೇರೆ 'ಕಾಯಕ' (ಉದ್ಯೋಗ) ಇರುವುದನ್ನು ಕನ್ನಡಿ ಕಾಯಕದ ಅಮ್ಮಿದೇವ ಹೇಳಿದ್ದಾನೆ.[21] ಜಾತಿಯಲ್ಲಿ ಪ್ರಧಾನವಾದುದು ಹುಟ್ಟು ಎಂಬುದನ್ನು ಉರಿಲಿಂಗ ಪೆದ್ದಿ ಗುರುತಿಸಿದ್ದಾನೆ. ಬ್ರಾಹ್ಮಣನ ಮಗ ಬ್ರಾಹ್ಮಣ, ಕ್ಷತ್ರಿಯನ ಮಗ ಕ್ಷತ್ರಿಯ, ವೈಶ್ಯನ ಮಗ ವೈಶ್ಯ, ಶೂದ್ರನ ಮಗ ಶೂದ್ರ.[22] ಅದೇ ತರ್ಕವನ್ನು ಮುಂದುವರಿಸಿದರೆ, ಕಮ್ಮಾರನ ಮಗ ಕಮ್ಮಾರ, ಮಡಿವಾಳನ ಮಗ ಮಡಿವಾಳ ಇತ್ಯಾದಿ. ಜಾತಿ ವ್ಯವಸ್ಥೆಯ ಅಡಿಗಲ್ಲುಗಳಾದ ಉದ್ಯೋಗ ಮತ್ತು ಜನ್ಮಗಳೆರಡರ ವಿಷಯವು ವಚನಕಾರರಿಗೆ ತಿಳಿದಿತ್ತೆಂಬುದು ಸ್ಪಷ್ಟವಾಗುತ್ತದೆ.

### 5.1.4. ಬಲಗೈ – ಎಡಗೈ

ಹದಿನೆಂಟು ಜಾತಿಗಳನ್ನು 'ಎಡಗೈ' ಜಾತಿಗಳೆಂದೂ 'ಬಲಗೈ' ಜಾತಿಗಳೆಂದೂ ವಿಭಾಗ ಮಾಡಿದ್ದುದರ ಉಲ್ಲೇಖ ವಚನಗಳಲ್ಲಿ ದೊರೆಯದಿದ್ದರೂ ಇವುಗಳ ವಿಷಯ ಶಾಸನಗಳಲ್ಲಿ ಕ್ರಿ.ಶ. 459 ರಷ್ಟು ಹಿಂದೆಯೇ

ಉಕ್ತವಾಗಿರುವ ವಿಚಾರವನ್ನು ಪಿ.ವಿ. ನಾರಾಯಣ ಉಲ್ಲೇಖಿಸುತ್ತಾರೆ.[23] 'ಬಲಗೈ' ವರ್ಗವು ಬಣಜಿಗರಿಂದ ಮೊದಲಾಗಿ ಹೊಲೆಯರಿಂದ ಕೊನೆಯಾದರೆ, 'ಎಡಗೈ' ವರ್ಗವು ಪಾಂಚಾಲರಿಂದ ಮೊದಲುಗೊಂಡು ಮಾದಿಗರಿಂದ ಮುಗಿಯುತ್ತದೆ. ಮತ್ತೊಂದು ಶಾಸನವು ಈ ಜಾತಿಗಳನ್ನು ಏಳೂವರೆ ಮತ್ತು ಹನ್ನೊಂದುವರೆ ಜಾತಿಗಳೆಂದು ನಿರ್ದೇಶಿಸಲಾಗಿದೆ. ತಮಿಳು ಶಾಸನವೊಂದರಲ್ಲಿ 'ಇಡಂಗೈ' (ಎಡಗೈ)ನ ತೊಂಬತ್ತೆಂಟು ಉಪಜಾತಿಗಳ ಹೆಸರನ್ನು ಹೇಳಿ, ಇವರನ್ನು ವಣಿಯ ಬ್ರಾಹ್ಮಣ ಮತ್ತು ವೆಲ್ಲಾಲ ಕುಲದ ಭೂ ಮಾಲೀಕರು ಕ್ರೂರವಾಗಿ ನಡೆಸಿಕೊಳ್ಳುತ್ತಿದ್ದ ವಿಚಾರವು ಉಕ್ತವಾಗಿದೆ. ಅಲ್ಬೆರೂನಿ ಹದಿನಾರು ಜಾತಿಗಳನ್ನು ಹೆಸರಿಸುತ್ತಾನೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರರಾದ ಮೇಲೆ 'ಅಂತ್ಯಜ'ರೆಂಬ ವರ್ಗದಲ್ಲಿ ಎಂಟು ವೃತ್ತಿ ಸಂಘಗಳಿವೆ. ಅವೆಂದರೆ ಅಗಸ, ಚಮ್ಮಾರ, ಗಾರುಡಿಗ, ಬುಟ್ಟಿ ಹೆಣೆಯುವವನು, ನಾವಿಕ, ಬೆಸ್ತ, ಬೇಡ ಮತ್ತು ನೇಯ್ಗೆಯವನು; ಇವರಲ್ಲಿ ಅಗಸ, ಚಮ್ಮಾರ ಮತ್ತು ನೇಯ್ಗೆಯವರನ್ನುಳಿದು ಇತರರು ದೈಹಿಕ ಸಂಬಂಧವನ್ನು ಬೆಳೆಸುತ್ತಾರೆ ಎಂದವನ ಹೇಳಿಕೆ.[24] ಈ ವೃತ್ತಿ ಸಂಘಗಳವರು ಮೊದಲ ನಾಲ್ಕು ಜಾತಿಯವರು ವಾಸಿಸುವ ಊರಿನ ಹೊರಗೆ ವಾಸಿಸುತ್ತಿದ್ದರೆಂದೂ ಅವನು ಹೇಳುತ್ತಾನೆ.[25] ಮಿಕ್ಕ ನಾಲ್ಕು ಜಾತಿಗಳವರೆಂದರೆ ಹಡಿ, ಡೋಮ (ಡೊಂಬ), ಚಾಂಡಾಲ ಮತ್ತು ಬಧತವ್, ಇವರ ಕೆಲಸವೆಂದರೆ ಊರನ್ನು ಸ್ವಚ್ಛಮಾಡುವುದು ಮುಂತಾದವು.[26] ಕಡ್ಲೆವಾಡದ ಒಂದು ಶಾಸನ ಸ್ವಯಂಭು ಸೋಮನಾಥದೇವರ ಅಂಗಭೋಗಕ್ಕೆ ಮೂವತ್ತಾರು ಬೀಡ ಮುಮ್ಮುರಿದಂಡಗಳು ಮಹಾನಾಡಾಗಿ ಸೇರಿ ನಿರ್ಣಯಿಸಿದಂತೆ ವಿವಿಧ ವ್ಯಾಪಾರಿಗಳು ವಿವಿಧ ದಾನಗಳನ್ನು ಮಾಡಿದ್ದನ್ನು ಹೇಳಿದ ನಂತರ 'ಬಡಗಿ ಕಮ್ಮಾಱ ಅಕ್ಕಸಾಲೆ ಅಗಸ ಸಮ್ಮಗಾಱ ದೆಡೆ-ಹೊಲೆಯರ ಕೊಡೆವೊಳಗಾಗಿ ಪುರದ ಬೀರವಣಮಂ ಬಿಟ್ಟರು ... '[27] ಎಂದು ಬರುತ್ತದೆ. ವಿವಿಧ ವೃತ್ತಿಯವರೊಂದಿಗೆ ಸೇರಿ ಬೀರವಣವನ್ನು ಬಿಟ್ಟವರಲ್ಲಿ ಸಮ್ಮಗಾಱ (=ಚರ್ಮಕಾರ) ಮತ್ತು ಎಡಹೊಲೆಯ ಉಲ್ಲೇಖಗೊಂಡಿರುವುದು ಗಮನಾರ್ಹವಾಗಿದೆ.

ಬರ್ಟನ್ ಸ್ಟೈನ್‌ರವರು 'ಪೆಝುಂಟ್ ಸ್ಟೇಟ್ ಅಂಡ್ ಸೊಸೈಟಿ ಇನ್ ಮಿಡಿವಲ್ ಸೌಥ್ ಇಂಡಿಯಾ' ಗ್ರಂಥದಲ್ಲಿ[28] ತಮಿಳಿನ ವಳಂಗೈ ಮತ್ತು ಇಡಂಗೈಗಳ ಅಕ್ಷರಶಃ ಕನ್ನಡ ಅರ್ಥ ಬಲಗೈ ಮತ್ತು ಎಡಗೈಗಳೆಂದು ಹೇಳುತ್ತಾರೆ. ಈ ಎಡ ಮತ್ತು ಬಲಗೈಗಳು ವಿವಿಧೆಡೆ ವಿವಿಧ ಅರ್ಥ ವಿವರಣೆಗಳನ್ನು ಒಳಗೊಂಡಿವೆ. ಮೆಕ್ಲೀನ್ ಹೇಳುವಂತೆ 'ಕೈಗಳ' ಕಲ್ಪನೆ ಬಂದಿದ್ದು ಐದು ಮುಖ್ಯ ಕರಕುಶಲಕರ್ಮಿಗಳಿಂದ ಅವರನ್ನು ಪಾಂಚಾಳರು (Panchalar) ಅಥವಾ ಕಮ್ಮಾಳರ್ (Kammalar) ಎಂದು ಕರೆಯುತ್ತಾರೆ. ಇದಕ್ಕೆ ವಿರುದ್ಧವಾಗಿ ಕುಶಲಕರ್ಮಿಯೇತರರ ಐದು ಜಾತಿಗಳು

ಕೈಯೊಂದರ ಐದು ಬೆರಳುಗಳಿದ್ದಂತೆ ಇವೆ. ಇವನ್ನು ಹೀಗೆಯೇ ಎಂದು ಸ್ಪಷ್ಟವಾಗಿ ಹೇಳಲು ಬರುವುದಿಲ್ಲ. ಅನೇಕ ಆಕರಗಳಲ್ಲಿ 98 ಉಪಜಾತಿಗಳು ಎಂದು ಉಲ್ಲೇಖಗೊಂಡಿದೆ. ಅದರಲ್ಲಿ ಬಲ ಮತ್ತು ಎಡಗೈಗಳ ಉಲ್ಲೇಖಗಳಿವೆ.

ಚೋಳರ ಕಾಲದಲ್ಲಿ ಎಡಗೈಯಾದ ಇಡಂಗೈವು ಕೆಳ ಸಾಮಾಜಿಕ ಗುಂಪಾಗಿದ್ದಿತು (Lower Social Groups). ಇದು ವ್ಯಾಪಾರ ಹಾಗೂ ಕುಶಲ ವೃತ್ತಿಗಳ ಜೊತೆ ಸೇರಿಕೊಂಡಿದ್ದರೆ, ಬಲಗೈ ಗುಂಪು ಕೃಷಿ ಚಟುವಟಿಕೆಗಳ ಜೊತೆ ಸೇರಿಕೊಂಡಿದ್ದಿತು. ಇಡಂಗೈ ಗುಂಪಿನಲ್ಲಿ ಪಾಂಚಾಲರಾದ ಸುವರ್ಣಕಾರ, ಕಮ್ಮಾರ, ಬಡಗಿ ಹಾಗೂ ಕಲ್ಲುಕುಟಿಗ ಬರುತ್ತಾರೆ. 18ನೇ ಶತಮಾನದ ದಾಖಲೆಗಳ ಆಧಾರದಿಂದ ಎಡಗೈ ಗುಂಪಿಗೆ ಇನ್ನೂ ಸೇರ್ಪಟ್ಟಿದ್ದ ಜಾತಿಗಳೆಂದರೆ ಎಣ್ಣೆ ಉತ್ಪಾದಿಸುತ್ತಿದ್ದ ತೆಲ್ಲಿಗರು. ಆ ನಂತರ ದೊರಕುವ ಆಧಾರಗಳಲ್ಲಿ ನೇಕಾರರು ಬಲಗೈ ಗುಂಪಿನಲ್ಲಿ ಕಂಡು ಬಂದಿದ್ದಾರೆ. ನಿರ್ದಿಷ್ಟವಾಗಿ ಯಾವ ಕಾರಣಗಳಿಂದ ಇವರು ಬಲಗೈ ಗುಂಪಿನಲ್ಲಿದ್ದರೆಂಬುದು ತಿಳಿದುಬಂದಿಲ್ಲ.

ಪಲ್ಲವರ ಕಾಲದಲ್ಲಿ ವೈಷ್ಣವರು ಹಾಗೂ ಜೈನರಿಗೆ ದೊಡ್ಡ ವಿವಾದವೆ ನಡೆದು ಜೈನರು ತಮ್ಮ ಮತವನ್ನು ಬಲಗೈ ಗುಂಪಿಗೆ ಸೇರಿಸಬೇಕು ಹಾಗೂ ಶಾಸನ ಹೊರಡಿಸಬೇಕು ಎಂದು ವಾದ ನಡೆಸುತ್ತಾರೆ.

ಉರ್ರತ್ತೂರ್ ಶಾಸನ ಹಾಗೂ ಇತರೆ ಅನೇಕ ಶಾಸನಗಳಲ್ಲಿ ಸ್ಪಷ್ಟವಾಗಿ ಇಡಂಗೈ (Idangai) ಉಲ್ಲೇಖಗೊಂಡಿದೆ. ಪೂರ್ವಕಾಲದ ದಾಖಲೆಗಳಲ್ಲಿ ಆ ಪ್ರದೇಶದ ಜನರಲ್ಲಿ ಇಡಂಗೈ ಎಂಬುದು ಕನಿಷ್ಟ ಹಾಗೂ ತುಚ್ಛ ಸ್ಥಾನವನ್ನು ಹೊಂದಿತ್ತು. ನಂತರ 12ನೇ ಶತಮಾನ ಹಾಗೂ ಅನಂತರ ಇಡಂಗೈ ಎಂಬುದು ತನ್ನ ಸ್ಥಾನವನ್ನು ಬದಲಾಯಿಸಿ ಪ್ರಬಲವಾದ ಕೃಷಿಕ ಜನರ ಜೊತೆ ಸೇರಿಕೊಂಡಿತು. ಆದರೂ ಇಡಂಗೈ ಎಂಬ ಪದವೆ ಮುಂದುವರಿದಿದ್ದು ಇದು 19 ನೇ ಶತಮಾನದವರೆಗೂ ಅನೇಕ ಸ್ಥಳಗಳಲ್ಲಿ ಹೆಚ್ಚು ಬಳಸಲ್ಪಟ್ಟಿದೆ.

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಅಂದಿನ ಸಮಾಜದಲ್ಲಿ ಮೇಲು ಹಾಗೂ ಕೆಳವರ್ಗವೆಂಬ ಭಾವನೆ ಇತ್ತೆಂಬುದು ಸ್ಪಷ್ಟವಾಗುತ್ತದೆ.

ನಮಗೆ ಕರ್ನಾಟಕದ ಯಾವ ಶಾಸನದಲ್ಲೂ ಕೂಡ ಇಲ್ಲಿರುವಂಥಹ ವೃತ್ತಿಪರ ಜಾತಿಗಳು ಎಂಬಂಥಹ ಉಲ್ಲೇಖ ಬರುವುದಿಲ್ಲ. ಹಾಗಾದರೆ ಆಗಿನ ಕಾಲದಲ್ಲಿ ಜಾತಿಗಳು ಇದ್ದವೇ ಎಂಬ ಪ್ರಶ್ನೆ ಉದ್ಭವಿಸುವುದು ಸಹಜ. ಆಗ ನಮಗೆ ವಚನಗಳು ಸಹಾಯ ಮಾಡುತ್ತವೆ. ಈ ವೃತ್ತಿಪರರನ್ನು ವಚನಗಳು ಜಾತಿ, ಹದಿನೆಂಟು ಜಾತಿ ಎಂದು ಗುರುತಿಸುತ್ತಿದ್ದರು ಎಂಬುದು ಗೊತ್ತಾಗುತ್ತದೆ.

### 5.1.5. ಹದಿನೆಂಟು ಜಾತಿಗಳಲ್ಲಿ ಬರುವ ಕುಶಲ ವೃತ್ತಿಗಳು

ಸೊಡ್ಡಳ ಬಾಚರಸನ ವಚನದಲ್ಲಿ ಕುಂಬಾರ, ಪಂಚಾಳ (ಬಡಗಿ, ಕಂಚುಗಾರ, ಕಮ್ಮಾರ, ಅಕ್ಕಸಾಲಿಗ ಹಾಗೂ ಕಲ್ಲುಕುಟಿಗರೆಂಬ ಐದು ಕುಶಲಕರ್ಮಿಗಳನ್ನೊಳಗೊಂಡಿದೆ). ನಾಯಿಂದ (ಕ್ಷೌರಿಕ), ಸಮಗಾರ (ಚರ್ಮಕಾರ) ಹಾಗೂ ಮಚ್ಚಿಗ ವೃತ್ತಿಗಳು ಉಲ್ಲೇಖಗೊಂಡರೆ, ಅಂಬಿಗರ ಚೌಡಯ್ಯನ ವಚನದಲ್ಲಿ ಕಂಚುಗಾರ, ಕುಂಬಾರ, ಕಲ್ಲುಕುಟಿಗ, ಮೋಪುಗಾರ, ಅಕ್ಕಸಾಲಿಗ, ಬಡಿಗ, ಸಮಗಾರ, ಮಚ್ಚಿಗ, ಕಮ್ಮಾರ ವೃತ್ತಿಗಳು ಉಲ್ಲೇಖಗೊಂಡಿವೆ.

ಈ ವಚನಗಳ ಉಲ್ಲೇಖಗಳಿಂದ ಆಗ ವೃತ್ತಿಗಳು ಜಾತಿಗಳೂ ಆಗಿದ್ದವೆಂಬುದು ಗೊತ್ತಾಗುತ್ತದೆ. ಆಶ್ಚರ್ಯದ ವಿಷಯವೆಂದರೆ ಶಾಸನಗಳಲ್ಲೆಲ್ಲೂ ಕೂಡ ಅವರನ್ನು ಜಾತಿ ಎಂದು ಉಲ್ಲೇಖಿಸಿಲ್ಲ. ಆದರೆ ವಚನಕಾರರು ಜಾತಿ ಎಂದು ಉಲ್ಲೇಖಿಸುತ್ತಾರೆ. ಹಾಗಾಗಿ ಈ ವೃತ್ತಿಪರರನ್ನು ಜಾತಿಗಳು, ಇಂಥಹ ಸಮುದಾಯಗಳು ಎಂದು ಗುರುತಿಸುತ್ತಿದ್ದದ್ದು ಗೊತ್ತಾಗುತ್ತದೆ. ಶಾಸನಗಳಲ್ಲಿ ಕಂಡುಬರುವ ಸಮಾಜಗಳನ್ನು ವಚನಗಳು ಜಾತಿಗಳು ಎಂದು ಕರೆದು ಹದಿನೆಂಟು ಜಾತಿಯ ಪಟ್ಟಿ ಮಾಡಿದ್ದು ಕಂಡುಬರುತ್ತದೆ.

### 5.1.6. ವಡ್ಡಾರಾಧನೆಯಲ್ಲಿಯ ವೃತ್ತಿವರ್ಗಗಳು

ವಡ್ಡಾರಾಧನೆಯು ಸಾಮಾಜಿಕ ಗುಂಪುಗಳನ್ನು ಕೂಡ ಉಲ್ಲೇಖಿಸುತ್ತದೆ. ಅವುಗಳೆಂದರೆ, 1) ಮಾದಿಗ (ಹೊಲೆಯ), 2) ತಳಾರ (ತಳವಾರ), 3) ವೈಣಯಿಕ (ಕೊಳಲನ್ನು ಊದುವವನು) 4) ಕಳ್ಳ, 5) ಮಂತ್ರವಾದಿ 6) ಭಂಟರು, 7) ಇಂದ್ರಜಾಳಿಗರು (ಯಕ್ಷಿಣಿ ವಿದ್ಯೆ ಬಲ್ಲವ), 8) ಮಾಲೆಗಾರ, 9) ತೊಳ್ತು ಅಥವಾ ತೊತ್ತು (ಸೇವಕ), 10) ದಾಡಿ, 11) ಸುವರ್ಣಕಾರ, 12) ಗಾವುಂಡ, 13) ಪಗರಣಿಗ (ಅಭಿನಯಿಸುವವನು, ನಟ), 14) ಮಿಂಗುಲಿಗ (ಮೀನುಗಾರ), 15) ದೂಸಿಗ (ನೇಕಾರ), 16) ಓಜ, ಉಪಾಧ್ಯಾಯ, 17) ಪಡಿಯಾರ (ಬಾಗಿಲು ಕಾಯುವವನು, ದ್ವಾರಪಾಲಕ), 18) ಬಡಗಿ, 19) ಪುಲುಂಗಾರ (ಬೇಟೆಗಾರ), 20) ಪೊಡುಂಗಾರ (ಕುಮ್ರಿ ಬೇಸಾಯಗಾರ), 21) ಬೇಡರು, 22) ಬಾಣಸಿಗ (ಅಡುಗೆ ಮಾಡುವವ), 23) ಲಂಗಿಗ (ಡೊಂಬ).[29]

## 5.2. ಸಾಮಾಜಿಕ ಚಲನೆ

ಪ್ರಾಚೀನ ಕಾಲದಲ್ಲಿ ವರ್ಣಗಳ ಮಿಶ್ರಣವು ವರ್ಣ ಸಂಕರವೆನ್ನಿಸಿಕೊಂಡಂತೆ, ಮಧ್ಯಯುಗದಲ್ಲಿದ್ದ ಜಾತಿಗಳ ಮಿಶ್ರಣವು 'ಜಾತಿ ಸಂಕರ' ವೆನ್ನಿಸಿಕೊಳ್ಳಬೇಕು. ಬಸವಣ್ಣನಲ್ಲಿ 'ಜಾತಿಸಂಕರ'ವೆಂಬ ಮಾತು ವಾಸ್ತವವಾಗಿ ಬಂದಿದೆ.[30] ಜಾತಿಗಳಲ್ಲಿ ವಿಪ್ರ ಮೇಲಿನವನು, ಶ್ವಪಚ ಅಥವಾ ಅಂತ್ಯಜ ಕಡೆಯವನು ಎಂಬುದನ್ನು ವಚನಕಾರರು ಹೇಳುವಾಗ [31] ತಮ್ಮ ಕಾಲದ ಒಟ್ಟು ಜನಾಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದಾರೆಂದು ಅರ್ಥ ಮಾಡಿಕೊಳ್ಳಬೇಕು ಮತ್ತು ಅದು ವಾಸ್ತವವೂ ಆಗಿತ್ತು. ಹಾವಿನಹಾಳ ಕಲ್ಲಯ್ಯ[32]

> *'ಜಾತಿಯಲ್ಲಿ ಅಧಿಕವೆಂದು ನುಡಿವರು ವಿಪ್ರಜನರು*
> *ಶ್ವಪಚ ಮಚ್ಚಿಗ ಬೋಯ ಕುಲಜರೆ ದ್ವಿಜರು ?*
> *ಅಗಸ ಕಮ್ಮಾರ ನಾವಿದ ಕುಲಜರೆ ದ್ವಿಜರು?'*

ಎಂದು ವಚನವೊಂದರಲ್ಲಿ ಹೇಳುತ್ತಾನೆ. ಅಂದರೆ ಇಲ್ಲಿ ದ್ವಿಜ ಎಂದರೆ ಎರಡು ಹುಟ್ಟಿನವರು ಅನ್ನುವ ಕಲ್ಪನೆಯಿದೆ. ಜಾತಿಯಲ್ಲಿ ಬ್ರಾಹ್ಮಣ ಶ್ರೇಷ್ಠನಾದಂತೆ ಶ್ವಪಚ ಮಚ್ಚಿಗ ಬೋಯ, ಅಗಸ, ಕಮ್ಮಾರ ನಾವಿದ ಕುಲದವರೂ ದ್ವಿಜರೇ ಎಂಬುದು ಈತನ ಅಭಿಪ್ರಾಯ. ಉರಿಲಿಂಗಪೆದ್ದಿಯ[33] ವಚನವೊಂದರಲ್ಲಿ '..... ರೇಣುಕಾದೇವಿಯ ಮಗನೇ ಬ್ರಾಹ್ಮಣನು, ಮಾತಂಗಿಯ ಮಗನೇ ಹೊಲೆಯನು, ಇವರಿಬ್ಬರೂ ಜಮದಗ್ನಿಗೆ ಹುಟ್ಟಿದವರಾಗಿ, ಇದಕ್ಕೆ ಸಾಕ್ಷಿ ಭಾರದ್ವಾಜ ವಿಶ್ವಾಮಿತ್ರ ಅಗಸ್ತ್ಯ ನಾರದ ಕೌಂಡಿಲ್ಯ ಈಯೈವರು ಸಾಕ್ಷಿಯಲ್ಲಿ, ನಿಮ್ಮ ನಿಮ್ಮೊಳಗೆ ಸಂವಾದವು ಬೇಡೆಂದು ವಿಭಾಗವಂ ಮಾಡಿಕೊಟ್ಟ ವಿವರಮಂ ಕೇಳಿರಣ್ಣಾ ಸತ್ತ ಹಸುವನೆಳೆದುಕೊಂಡು ಹೋಹವರನೇ ಹೊಲೆಯರ ಮಾಡಿದರು. ಜೀವದ ಹಸುವ ಹದಿನೆಂಟು ಜಾತಿಯ ಮಂಚದಡಿಯಲ್ಲಿ ನುಸಿದು ಗೋದಾನ ಮುಖದಲ್ಲಿ ಕೊಂಡು ಹೋಹರನೇ ಬ್ರಾಹ್ಮಣರ ಮಾಡಿದರು. ಇನ್ನು ನಿಮಗೂ ತಮಗೂ ಸೊಮ್ಮು ಸಂಬಂಧವಿಲ್ಲವೆಂದು ಕಂಡಾಗ ತೊಲಗುವಂತೆ ಸಂಬೋಳಿಯೆಂಬ ನಾಮಾಂಕಿತವಂ ಕೊಟ್ಟು ತೊರೆ ಪತ್ರಮಂ ಬರೆದರಾಗಿ, ಇದನರಿಯದಿದ್ದಡೆ ಇನ್ನೂ ಕೇಳಿರಣ್ಣ, ನಳಚಕ್ರವರ್ತಿರಾಯನು ಪಿಂಡ ಪಿತೃಕಾರ್ಯವ ಮಾಡುವಲ್ಲಿ, ಹೊನ್ನ ಗೋವಂ ತಂದು ಬಿನ್ನಾಣದಲ್ಲಿ ದಾನವ ಕೊಟ್ಟಲ್ಲಿ, ಹೊಲೆಯರು ನಾಡಕೂಟವ ಕೂಡಿ ಆ ಸ್ಥಲ ತಾರ್ಕಣೆಯಲ್ಲಿ ಪೂರ್ವಸಾಧನ ಸಂಬಂಧದಿಂದ ನ್ಯಾಯವಮಾಡಿ ಇತ್ತಂಡವ ಹಂಚಿಕೊಂಡ ವಿವರವ ಕೇಳಿರಣ್ಣಾ : ಕೊಂಬುಕೊಳಗನೇ ತೆಗೆದು ಏಳುನೂರೆಪ್ಪತ್ತು ತೂಕ ಚಿನ್ನವ ಹಂಚಿಕೊಂಡು ಉಳಿದ ಕೊಂಬು ಕೊಳಗವ ವಿಪ್ರರು ಎತ್ತಿಕೊಂಡರಾಗಿ, ಈ ಹೊನ್ನಗೋವನಳಿದು ತಿಂಬ ಕುನ್ನಿಗಳ

ಕಂಡು ಕೇಳಿಯೂ ಅರಿದು ಮರೆದೂ ಉತ್ತಮ ಕುಲದ್ವಿಜರೆಂದು ಅಲ್ಲಿ ಉಪದೇಶವಂ ಕೊಂಡು ನಮಸ್ಕರಿಸುವ ಅಜ್ಞಾನಿ ಹೊಲೆಯರ ನಾನೇನೆಂಬೆನಯ್ಯಾ, ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರ', ಉರಿಲಿಂಗಪೆದ್ದಿಯ ಪ್ರಕಾರ ಬ್ರಾಹ್ಮಣರೂ ಹೊಲೆಯರೂ ಮಲಸೋದರರು, ಜಮದಗ್ನಿ ಋಷಿಗೆ ರೇಣುಕೆ ಮತ್ತು ಮಾತಂಗಿಯಲ್ಲಿ ಹುಟ್ಟಿದವರು ಎಂಬ ವಿಷಯವನ್ನು ಈ ವಚನವು ತಿಳಿಸುತ್ತದೆ.

ಬ್ರಾಹ್ಮಣರು ವಿದ್ಯೆಯನ್ನು ಕಲಿತು ಎರಡನೇ ಹುಟ್ಟು ಪಡೆದು ದ್ವಿಜರಾಗುವಂತೆ ಇವರು ಕೂಡ ಕುಲವಿದ್ಯೆಯನ್ನು ಕಲಿಯುವುದರಿಂದ ಎರಡನೇ ಹುಟ್ಟು ಪಡೆದು ದ್ವಿಜರಾಗುತ್ತಾರೆ ಎಂಬುದು ಹಾವಿನಹಾಳ ಕಲ್ಲಯ್ಯನ ವಾದವಿರಬೇಕು. 'ಅನಾಮಿಕ 'ನಿಗೆ ರಾಜನ ಹೆಸರನ್ನು ಒಂದು ವೇಳೆ ಇಟ್ಟರೂ ಅವನು ಹೆಸರನ್ನು ಹೊತ್ತಿರಬಹುದೇ ಹೊರತು 'ಪಟ್ಟ'ಕ್ಕೆ ಅರ್ಹವಾಗುವುದಿಲ್ಲ ಎನ್ನುತ್ತಾನೆ ಚೆನ್ನಬಸವಣ್ಣ.[34] ಚಾಂಡಾಲನು ಜ್ಞಾನಿಯಾದರೂ ಅವನ ಜ್ಞಾನಕ್ಕೆ ಗೌರವವೇ ಹೊರತು, ಅವನ ದೇಹ ಗೌರವಾರ್ಹವಾಗಲಾರದು, ಎಂದರೆ ಬಹಿರಂಗವಾಗಿ ಅವನಿಗೆ ಬಾಗಿ ಗೌರವಿಸಲು ಸಾಧ್ಯವಿಲ್ಲವೆನ್ನುತ್ತಾನೆ ಅದೇ ವಚನಕಾರ. ಒಂದು ಜಾತಿಗೆ ಅದರ ವೃತ್ತಿ ಅನಿವಾರ್ಯ, ಅದರಿಂದ ಅದು ಬೇರೆಯಾಗಲು ಸಾಧ್ಯವಿಲ್ಲವೆಂದು ಚೆನ್ನಬಸವಣ್ಣನ ಅಭಿಪ್ರಾಯವಿರುವಂತಿದೆ.

'ಜಾತಿ ಸಂಕರ' ಎಂಬ ಮಾತನ್ನು ಬಸವಣ್ಣ ಬಳಸಿದ್ದಾನೆ. ಆಯಾ ಜಾತಿಯವರು ಆಯಾ ಜಾತಿಯಲ್ಲೇ ಮದುವೆಯಾಗಿ ಮಕ್ಕಳನ್ನು ಪಡೆಯುವುದು ಜಾತಿಗಳಿಗೆ ಮಾನ್ಯವಾದುದು. ಬೇರೆ ಬೇರೆ ಜಾತಿಗಳವರ ವಿವಾಹ ಜಾತಿಸಂಕರವೆನ್ನಿಸಿಕೊಳ್ಳುತ್ತದೆ. ಈ ಜಾತಿಸಂಕರವು ಬಸವಣ್ಣನವರ ಸಮಕಾಲೀನದಲ್ಲಿ ನಡೆಯಿತು.

ಜಾತಿಗಳಲ್ಲೆಲ್ಲ ಮೊದಲಿನಿಂದ ತನ್ನ ಶುದ್ಧಿಯನ್ನು ಉಳಿಸಿಕೊಂಡಿರುವುದು ಬ್ರಾಹ್ಮಣ ಜಾತಿ ಮಾತ್ರ. ಇದಕ್ಕೆ ಕಾರಣ, ಬ್ರಾಹ್ಮಣದಿಂದ ಹೊರಬರಬಹುದೇ ಹೊರತು ಬ್ರಾಹ್ಮಣ್ಯಕ್ಕೆ ಅನ್ಯರಿಗೆ ಪ್ರವೇಶವಿಲ್ಲ. ಇದು ಅಂದಿಗೂ ನಿಜವೆಂಬುದಕ್ಕೆ ಸಾನಂದ ಚರಿತೆಯಲ್ಲಿ ಸೂಚನೆಯಿದೆಯೆಂಬುದಾಗಿ ಎಂ. ಚಿದಾನಂದಮೂರ್ತಿಯವರು ಅಭಿಪ್ರಾಯಿಸುತ್ತಾರೆ.[35] ಅವನನ್ನು ಏನು ಮಾಡಿದರೂ ಮೇಲು ಜಾತಿಯವನನ್ನಾಗಿ ಮಾಡಲು ಸಾಧ್ಯವೇ ಇರಲಿಲ್ಲ ಎಂದು ಆಧುನಿಕ ಸಂಶೋಧಕರು ಅಭಿಪ್ರಾಯವನ್ನು ಹೊಂದಿದ್ದರೂ ಕೂಡ ಬಡಗಿ ಮಾಚಲದೇವಿಯನ್ನು ಕುಲಜೆಯನ್ನಾಗಿ ಪರಿವರ್ತಿಸಲು ಬ್ರಾಹ್ಮಣರು ಯತ್ನಿಸಿದುದನ್ನು ಆ ಸಂದರ್ಭದಲ್ಲಿ ಅವರು ಬಲಿಯಾಗಿ ಕೊಟ್ಟ ಪಶುವನ್ನು ಹಂಚಿಕೊಂಡು ತಿಂದುದನ್ನು ವಚನಕಾರರು ಉಲ್ಲೇಖಿಸಿದ್ದಾರೆ.[36] ಮಾಚಲದೇವಿಯ ಕತೆಯ ಮೂಲವೇನೋ

ತಿಳಿಯದು. ಬ್ರಾಹ್ಮಣರು ಶೂದ್ರನನ್ನು ಬ್ರಾಹ್ಮಣನನ್ನಾಗಿ ಮಾಡಲು ಶೂದ್ರನನ್ನು ಚಿನ್ನದ ಎತ್ತಿನಲ್ಲಿ ಹೊಗಿಸಿ ಹೊರಬರುವಂತೆ ಮಾಡುತ್ತಿದ್ದುದನ್ನು ಬಸವಣ್ಣ ಉಲ್ಲೇಖಿಸಿದ್ದಾನೆ.[37] (ಮಾಚಲದೇವಿಯನ್ನು ಕುಲಜೆಯನ್ನಾಗಿ ಮಾಡುವಾಗಲೂ 'ಹೊನ್ನಕಪಿಲೆಯ ರವಣ ಶಾಖದ ಉಚ್ಛಿಷ್ಟದ ಹಾಲಿನಿಂದ ಕೂಳ'ನ್ನು ಮಾಡಿ ಬ್ರಾಹ್ಮಣರು ಉಂಡುದನ್ನು ಬಸವಣ್ಣ ಉಲ್ಲೇಖಿಸಿದ್ದಾನೆ). ಈ ಸಾಮಾಜಿಕ ಮೇಲ್ಚಲನೆ (Social Mobility) ಅಂದಿನ ದಿನಗಳಲ್ಲಿದ್ದುದೋ ಪೌರಾಣಿಕ ಕತೆಗಳಲ್ಲಿದ್ದುದೋ ಹೇಳುವುದು ಕಷ್ಟ.

ಆ ಕಾಲದಲ್ಲೂ ಕೂಡ ಈ ರೀತಿಯಲ್ಲಿ ಸಾಮಾಜಿಕ ಚಲನೆಗೆ ಶಾಸ್ತ್ರೋಕ್ತವಾದ ವಿಧಿವಿಧಾನಗಳನ್ನು ಬೆಳೆಸಿಕೊಂಡಿರುವುದನ್ನು ಇದು ಸೂಚಿಸುತ್ತದೆ. ಹಾಗಾಗಿ ಕೆಳಜಾತಿಯವರು ಮೇಲುಜಾತಿಗೆ ಬರುವುದಕ್ಕೆ ಅಥವಾ ಸಾಮಾಜಿಕವಾದ ಸ್ಥಾನಮಾನದ ಬದಲಾವಣೆ ನಡೆಯುತ್ತಲೇ ಇರಲಿಲ್ಲ ಎನ್ನುವಂತಹ ಹೇಳಿಕೆಗಳಿಗೆ ವಿರುದ್ಧವಾಗಿದ್ದಾರೆ.

### 5.2.1. ಕರ್ಮ್ಮಾರದ್ವಿಜರು

ಕ್ರಿ.ಶ. 967ರ ಬಳ್ಳಾರಿ ಜಿಲ್ಲೆಯ ಕೊಳಗಲ್ಲು ಶಾಸನವು[38] ಕೊಳಗಲ್ಲಿನಲ್ಲಿ ಬ್ರಹ್ಮಚಾರಿ ಗಧಾದರನು ಕಾರ್ತಿಕೇಯನನ್ನು ಹಾಗೂ ಇತರ ದೇವತೆಗಳನ್ನು ಪ್ರತಿಷ್ಠಾಪಿಸಿದ್ದನ್ನು ತಿಳಿಸುತ್ತದೆ. ಇವನು ಕಾರ್ತಿಕೇಯ ವಿಗ್ರಹ ಮತ್ತು ಅದರ ಪೀಠವನ್ನು ಚಿನ್ನದಲ್ಲಿ ಮಾಡಿಸಿದ್ದ. ಗಧಾದರನು ಕರ್ಮ್ಮಾರ ಕುಲದವನಾಗಿದ್ದು ಶಾಂಡಿಲ್ಯ ಗೋತ್ರದವನು, ಗೌಡ ದೇಶದ ಮಣಿಯಂತಿದ್ದ, ವರೇಂದ್ರಿ ಪ್ರದೇಶವನ್ನು ಬೆಳಗಿದವನು. ಇವನು ಸೂರ್ಯ, ಬ್ರಹ್ಮ, ವಿಷ್ಣು, ಶಿವ, ಪಾರ್ವತಿ, ವಿನಾಯಕ ದೇವರನ್ನು ಪ್ರತಿಷ್ಠಾಪಿಸಿ, ಕೆರೆಯನ್ನು, ಬಾವಿಗಳನ್ನು, ಸತ್ರಗಳನ್ನು ಕಟ್ಟಿಸಿದನು ಎಂದು ವಿವರಿಸುತ್ತ 'ಶ್ರೀಕರ್ಮಾರ ಕುಳಾಹ್ವಯದ್ವಿಜವರ ಗ್ರಾಮಸ್ಯ ತತ್ಕಾರಿತೋ ನಿಷ್ಕ್ರಮ್ಯ ಕ್ರಮನಿರ್ಮಲಸ್ಸಮಭವತ್ತಸ್ಮಿ ನೃಷಿ (ಷ್ಟಂ) ಡಿತಸ್ತತ್ಪುತ್ರೋಪ್ರಥಿತಃ ಕ್ಷಿತಾವತಿಬಳ ।' ಎಂದು ಉಲ್ಲೇಖಿಸುತ್ತದೆ. ಕ್ರಿ.ಶ. 971ರ ಕುಡುತಿನಿ ಶಾಸನವು[39] ಶ್ರೀ ಕರ್ಮ್ಮಾರಕುಳಾಹ್ವಯದ್ವಿಜವರ ಗ್ರಾಮಸ್ಯ ತತ್ಕಾರಿತೋ ನಿಷ್ಕ್ರಮ್ಯ ಕ್ರಮನಿರ್ಮಳ ಎಂದೂ ಉಲ್ಲೇಖಿಸುವುದು.

ಕರ್ಮ್ಮಾರರು ತಮ್ಮನ್ನು 'ದ್ವಿಜ' ಎಂದು ಕರೆದುಕೊಂಡಿದ್ದು ಮೇಲಿನೆರಡು ಶಾಸನದಿಂದ ಗೊತ್ತಾಗುತ್ತದೆ. ಉಪನಯನದಂಥಹ ಸಂಸ್ಕಾರಗಳಾದಾಗ ಮಾತ್ರ ದ್ವಿಜರು ಎಂದು ಕರೆಯುವುದರಿಂದ ಇವರೂ ಕೂಡ ಉಪನಯನ ಮೊದಲಾದ ಸಂಸ್ಕಾರಗಳನ್ನು ಆಗಿನ ಕಾಲದಲ್ಲಿ ರೂಢಿಸಿಕೊಂಡಿದ್ದು ಗೊತ್ತಾಗುತ್ತದೆ. ಹಾಗೂ ಸಾಧಾರಣವಾಗಿ ವಿಶ್ವಕರ್ಮರಲ್ಲಿ ಈಗಲೂ ಕೂಡ ಈ ಪದ್ಧತಿ ಇದೆ. ಇದು ಈ ಶಾಸನಗಳೆರಡರ ವಿಶೇಷ.

## 5.3. ಕುಶಲವೃತ್ತಿಪರ ವಚನಕಾರರು

ನಮಗೆ 12ನೇ ಶತಮಾನದಲ್ಲಿ ಅನೇಕ ವೃತ್ತಿಪರ ವಚನಕಾರರು ಕಂಡುಬರುತ್ತಾರೆ. ಅವರುಗಳಲ್ಲಿ

1. ಕದಿರ ಕಾಯಕದ ಕಾಳವ್ವೆ : ಹತ್ತಿಯಿಂದ ನೂಲು ತೆಗೆಯುವ ವೃತ್ತಿ
2. ಕದಿರ ರೆಮ್ಮವ್ವೆ : ಹತ್ತಿಯಿಂದ ನೂಲು ತೆಗೆಯುವ ವೃತ್ತಿ
3. ಕನ್ನಡಿ ಕಾಯಕದ ಅಮ್ಮಿದೇವಯ್ಯ : ಕ್ಷೌರಿಕ ವೃತ್ತಿ
4. ಕನ್ನಡಿ ಕಾಯಕದ ರೇವಮ್ಮ : ಕ್ಷೌರಿಕ ವೃತ್ತಿ
5. ಗುಂಡಯ್ಯಗಳ ಪುಣ್ಯಸ್ತ್ರೀ ಕೇತಲದೇವಿ : ಕುಂಬಾರ ವೃತ್ತಿ
6. ಜೇಡರ ದಾಸಿಮಯ್ಯ : ನೇಕಾರ ವೃತ್ತಿ
7. ನುಲಿಯ ಚಂದಯ್ಯ : ಹಗ್ಗ ಹೊಸೆಯುವ ವೃತ್ತಿ
8. ಬಾಚಿ ಕಾಯಕದ ಬಸವಣ್ಣ : ಬಡಗಿ ವೃತ್ತಿ
9. ಬಾಚಿ ಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆ : ಬಡಗಿ ವೃತ್ತಿ
10. ಮಾದಾರ ಚೆನ್ನಯ್ಯ : ಪಾದರಕ್ಷೆ ಹೊಲಿಯುವ ವೃತ್ತಿ
11. ಮಾದಾರ ಧೂಳಯ್ಯ : ಪಾದರಕ್ಷೆ ಹೊಲಿಯುವ ವೃತ್ತಿ
12. ಮೇದರ ಕೇತಯ್ಯ : ಬಿದಿರಿನಿಂದ ಬುಟ್ಟಿ, ಮೊರ ತಯಾರಿಸುವ ವೃತ್ತಿ
13. ಹಡಪದ ಅಪ್ಪಣ್ಣ : ಕ್ಷೌರಿಕ ವೃತ್ತಿ
14. ಹಾವಿನಹಾಳ ಕಲ್ಲಯ್ಯ : ಅಕ್ಕಸಾಲಿಗ ವೃತ್ತಿ

ಹೀಗೆ ನೇಕಾರರು, ಬಡಗಿಗಳು, ಅಕ್ಕಸಾಲಿಗರು, ಚಮ್ಮಾರರು, ಮೇದರು, ಕ್ಷೌರಿಕರು, ಕುಂಬಾರರು ಮೊದಲಾದ ಕುಶಲ ವೃತ್ತಿಪರ ವಚನಕಾರರು ನಮಗೆ 12ನೇ ಶತಮಾನದಲ್ಲಿ ಕಂಡುಬರುತ್ತಾರೆ.

### 5.3.1. ಜಾತಿ ಹಾಗೂ ವೃತ್ತಿಗಳ ಕುರಿತು ಕುಶಲವೃತ್ತಿಪರ ವಚನಕಾರರ ಅಭಿಪ್ರಾಯಗಳು

'ಕದಿರು ಮುರಿಯೆ ಏನೂ ಇಲ್ಲ, ವ್ರತಹೀನನ ನೆರೆಯಲಿಲ್ಲ ಗುಮ್ಮೇಶ್ವರಾ' ಕೇವಲ ಎರಡು ಸಾಲಿನ ವಚನದಲ್ಲಿ ಕಾಳವ್ವೆ[40] ತನ್ನ ಕಾಯಕದ ಪರಿಭಾಷೆ ಬಳಸಿ ವ್ರತಹೀನರನ್ನು ಕೂಡದಿರಲು ತಿಳಿಸುತ್ತಾಳೆ. ಕದಿರು

ಮುರಿಯಲು ಹೇಗೆ ಕಾರ್ಯ ನಿಲ್ಲುವುದೋ ಹಾಗೆ ವ್ರತಹೀನನನ್ನು ಕೂಡಿದರೆ ಜೀವನ ವ್ಯರ್ಥ ಎಂಬ ಆಶಯ ಈಕೆಯ ವಚನದಲ್ಲಿ ವ್ಯಕ್ತವಾಗಿದೆ.

ರೆಮ್ಮವ್ವೆ ಕೂಡ ಕದಿರ ಕಾಯಕದವಳು - ರಾಟೆಯಿಂದ ನೂಲು ತೆಗೆಯುವುದು. ಆದರಿಂದ ಬಂದ ಆದಾಯದಿಂದ ಗುರುಲಿಂಗ ಜಂಗಮ ಸೇವೆ ಮಾಡುವುದು, ಜೊತೆಗೆ ಶರಣರ ಅನುಭಾವಗೋಷ್ಠಿಯಲ್ಲಿ ಭಾಗವಹಿಸುವುದು ಅವಳ ನಿತ್ಯನೇಮವಾಗಿತ್ತು.

'ನಾ ತಿರುಹುವ ರಾಟೆಯ ಕುಲಜಾತಿಯ ಕೇಳಿರಣ್ಣಾ'[41] ಎಂಬ ವಚನದಲ್ಲಿ ತನ್ನ ಲೌಕಿಕ ಕ್ರಿಯೆಗಳನ್ನೆಲ್ಲ ಪಾರಲೌಕಿಕ ಪರಮಾತ್ಮನ ಸಂಬಂಧವಾದ ಆಧ್ಯಾತ್ಮಿಕ ಅನುಭವಕ್ಕೆ ಹೊಂದಿಸಿ ಹೇಳಿದ್ದಾಳೆ.

ಕನ್ನಡಿ ಕಾಯಕದ ಅಮ್ಮಿದೇವಯ್ಯನ ವಚನಗಳಲ್ಲಿ[42] ಬರುವ ಹಡಪ, ಕನ್ನಡಿ, ಕತ್ತಿ ಕತ್ತರಿ, ಚಿಮ್ಮುಟ, ಹಣಿಗೆ, ಕಡಿಚಣ (=ಉಗುರು ತೆಗೆಯುವ ಸಾಧನ), ಅಂಗುಲ ಸಂಗಿ (= ಮೂಗಿನ ಕೂದಲು ತೆಗೆಯುವ ಸಾಧನ) ಮೊದಲಾದ ಕ್ಷೌರಿಕನ ಪರಿಕರಗಳ ಉಲ್ಲೇಖವನ್ನು ಗಮನಿಸಿದಾಗ ಇವನು ವೃತ್ತಿಯಲ್ಲಿ ಕ್ಷೌರಿಕನೆಂದು ಹೇಳಬಹುದು.

ಈತ ಹದಿನೆಂಟು ಕಾಯಕಗಳ ಉಲ್ಲೇಖ ಮಾಡುವನಾದರೂ ಅವುಗಳ ವಿವರ ನೀಡುವುದಿಲ್ಲ. 'ಆವಾವ ಜಾತಿ ಗೋತ್ರದಲ್ಲಿ ಬಂದಡೂ ತಮ್ಮ ತಮ್ಮ ಕಾಯಕಕ್ಕೆ, ಭಕ್ತಿ ಸೂತಕವಿಲ್ಲದಿರಬೇಕು' ಎಂಬ ಇವನ ಮಾತು ಗಮನಾರ್ಹವಾಗಿದೆ.

ಗುಂಡಯ್ಯಗಳ ಪುಣ್ಯಸ್ತ್ರೀ ಕೇತಲದೇವಿಯು ಕುಂಬಾರ ವೃತ್ತಿಯವಳು. ಈಕೆಯು ತನ್ನೊಂದು ವಚನದಲ್ಲಿ[43] 'ಹದ ಮಣ್ಣಿನಿಂದ ಮಾತ್ರ ಮಡಕೆ ತಯಾರಿಸಲು ಸಾಧ್ಯ. ಮಣ್ಣು ಹದವಿಲ್ಲದಿದ್ದರೆ ಮಡಕೆ ತಯಾರಿಸಲು ಹೇಗೆ ಸಾಧ್ಯವಿಲ್ಲವೋ ಹಾಗೇ ವ್ರತಭ್ರಷ್ಟರ ಜೊತೆ ಬೆರೆಯಬಾರದೆಂದು ಹೇಳುತ್ತಾಳೆ.

ಬಾಚಿಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆ ಬಡಗಿ ವೃತ್ತಿಯವಳು. ಕಾಳವ್ವೆಯು ವಚನವೊಂದರಲ್ಲಿ[44] 'ಕೈ ತಪ್ಪಿ ಕೆತ್ತಲು ಕಾಲಿಗೆ ಮೂಲ, ಮಾತು ತಪ್ಪಿ ನುಡಿಯಲು ಬಾಯಿಗೆ ಮೂಲ, ವ್ರತಹೀನನ ನೆರೆಯಲು ನರಕಕ್ಕೆ ಮೂಲ' ಎನ್ನುವಲ್ಲಿ ಕಾಯಕ-ನುಡಿ-ವ್ರತ ಇವುಗಳನ್ನು ಎಚ್ಚರಿಕೆಯಿಂದ ಪಾಲಿಸಬೇಕು. ಸ್ವಲ್ಪ ವ್ಯತ್ಯಾಸವಾದರೂ ತೊಂದರೆಗೆ ಗುರಿಯಾಗಬೇಕಾಗುತ್ತದೆ ಎಂದು ಹೇಳುವುದರ ಜೊತೆಗೆ ಒಂದೊಂದು ತಪ್ಪಿನಿಂದ ದೊರಕುವ ಫಲಗಳನ್ನೂ ಸೂಚಿಸುತ್ತಾಳೆ.

ಜೇಡರ ದಾಸಿಮಯ್ಯನು ನೇಕಾರವೃತ್ತಿಯವನು. ಈತನ 'ಉಂಕೆಯ ನಿಗುಚಿ ಸರಿಗೆಯ ಸಮಗೊಳಿಸಿ ...... ' ವಚನವು[45] ನಮಗೆ ಬಟ್ಟೆ ನೇಯುವ ವಿಧಾನವನ್ನು ತಿಳಿಸುತ್ತದೆ. ದಾಸಿಮಯ್ಯ ಮತ್ತೊಂದು ವಚನದಲ್ಲಿ[46] 'ಕೀಳು ಡೋಹರ ಕಕ್ಕ ; ಕೀಳು ಮಾದರ ಚೆನ್ನ, ಕೀಳು ಓಹಿಲದೇವ : ಕೀಳು ಉದ್ಭಟಯ್ಯ. ಕೀಳಿಂಗಲ್ಲದೆ ಹಯನು ಕರೆಯದು ಕಾಣಾ' ಎಂದು ಹೇಳುವುದರ ಮೂಲಕ ಸಮಾಜಬಾಹಿರರಾದವರನ್ನು ಮೇಲಾಗಿ ಗೌರವಿಸಿದನು.

ಮಾದಾರ ಚೆನ್ನಯ್ಯನೆಂಬ ವಚನಕಾರನು ಚಮ್ಮಾರ ವೃತ್ತಿಯವನು. ಯಾವನ ನಡೆನುಡಿಗಳು ಸಮಂಜಸವಾಗಿವೆಯೋ ಅವನಿಗೆ 'ಕುಲ,ಹೊಲೆ, ಸೂತಕ' ಗಳಿಲ್ಲವೆಂದು ಹೇಳಿ 'ಆಚಾರವೇ ಕುಲ, ಅನಾಚಾರವೇ ಹೊಲೆ'[47] ಈತನ ಪ್ರಕಾರ ಸಪ್ತರ್ಷಿಗಳೆಲ್ಲರೂ ಕೀಳು ಕುಲದವರು. ಅವರು ಸತ್ಯಮಾರ್ಗದಲ್ಲಿ ನಡೆದು ಮುಕ್ತರಾದರೇ ಹೊರತು, ತಮ್ಮ ಜಾತಿ ಅವರಿಗೆ ಅಡ್ಡಿ ಬರಲಿಲ್ಲ[48] (ಸಪ್ತರ್ಷಿಗಳು ಕೀಳು ಕುಲದವರೆನ್ನುವ ಮಾತು ವಚನಗಳಲ್ಲಿ ಉದ್ದಕ್ಕೂ ಬರುತ್ತದೆ. ಮಾದಾರ ಚೆನ್ನಯ್ಯ ವಿಶೇಷವಾಗಿ ಜಾತಿ ಸಮಸ್ಯೆ ಕುರಿತು ಪ್ರಸ್ತಾಪಿಸಿರುವುದು ಸಹಜವಾಗಿದೆ. ಮತ್ತೊಂದು ವಚನದಲ್ಲಿ[49] ಮನುಷ್ಯರನ್ನು ನಾಲ್ಕು ವರ್ಣಗಳಾಗಿ ವಿಂಗಡಿಸುವುದು ತಪ್ಪೆಂದೂ, ನೀಚ ಶ್ರೇಷ್ಠವೆಂಬ ಎರಡು ಕುಲಗಳೇ ಹೊರತು ಹದಿನೆಂಟು ಜಾತಿಗಳಲ್ಲವೆಂದೂ ಹೇಳುತ್ತಾನೆ. ಬ್ರಹ್ಮವನ್ನು ಅರಿತರೆ ಬ್ರಾಹ್ಮಣ, ಜೀವಿಗಳನ್ನು ಕೊಲ್ಲುವವನು ಸಮಗಾರ ಎಂದು ತಿಳಿಸುತ್ತಾನೆ. ಈತ ತನ್ನ ವೃತ್ತಿಗೆ ಸಂಬಂಧಿಸಿದಂತೆ ತನ್ನೊಂದು ವಚನದಲ್ಲಿ[50] ಸತ್ತ ಎಮ್ಮೆಯನ್ನು ಮೂರು ಕಂಬಗಳಿಗೆ ಕಟ್ಟಿ ದಡಿಗೋಲಿನಿಂದ ಅದರ ಚರ್ಮವನ್ನು ತೆಗೆದು, ಲವಣದ ನೀರಿನಲ್ಲಿ ನೆನೆಸಿ ಹದ ಮಾಡುತ್ತಿದ್ದ ರೀತಿಯನ್ನು ಸ್ಥೂಲವಾಗಿ ತಿಳಿಸುತ್ತಾನೆ. ಇದು ಈಗಲೂ ಹಳ್ಳಿಗಳಲ್ಲಿ ಚರ್ಮಹದ ಮಾಡುವಾಗ ಸಮಗಾರರು ಅನುಸರಿಸುವ ವಿಧಾನವನ್ನೇ ಹೋಲುತ್ತದೆ.

ಮಾದಾರ ಧೂಳಯ್ಯನೆಂಬ ಮತ್ತೊಬ್ಬ ವಚನಕಾರನು ಕೂಡ ಚಮ್ಮಾರ ವೃತ್ತಿಯವನು. ಧೂಳಯ್ಯ ಅಟ್ಟೆಯನ್ನು ಚುಚ್ಚುವ ತನ್ನ ಕಾಯಕದಲ್ಲಿ ನಿರತನಾಗಿದ್ದಾಗ ಪರಶಿವನೇ ಪ್ರತ್ಯಕ್ಷನಾಗಿ ಬಂದರೂ ಲಕ್ಷಿಸದಷ್ಟು ಕಾಯಕನಿಷ್ಠೆ ಮೆರೆದವನು. ಶಿವನಿಗೆ 'ನಿನ್ನ ಭಕ್ತರ ಠಾವಿನಲ್ಲಿಗೆ ಹೋಗಿ ಮುಕ್ತಿಯ ಮಾಡು'[51] ಎಂದು ಹೇಳುವನು. ಈತನು ತನ್ನ ಕಾಯಕಕ್ಕೆ ಸಂಬಂಧಿಸಿದಂತೆ ಅಟ್ಟೆಯನ್ನು ಹೊಲಿದು ಹೆಬ್ಬೆರಳು ಹಿಡಿಸುವಂತೆ ಒಂದು ಉಂಗುರವನ್ನು ಹೊಲಿದು ಮೆಟ್ಟಿದಾಗ ಕಾಲಿನಿಂದ ಪಾದರಕ್ಷೆಯು ಜಾರಿ ಹೋಗದಂತೆ ಮಾಡಲಾಗುತ್ತಿತ್ತು ಎಂಬುದನ್ನು ಈತನ ವಚನವೊಂದು ತಿಳಿಸುತ್ತದೆ.[52]

ಮೇದರ ಕೇತಯ್ಯನೆಂಬ ವಚನಕಾರನು ಬಿದಿರಿನಿಂದ ಮೊರ, ಬುಟ್ಟಿ, ಮೊದಲಾದವುಗಳನ್ನು ತಯಾರಿಸುತ್ತಿದ್ದವನು. ಈತ 'ಮೊರನ ಹೆಣೆವ ಗೌರ'[53] ಎಂದುಕೊಳ್ಳುತ್ತಾನೆ. ಹಾಗೂ ವಚನವೊಂದರಲ್ಲಿ ಬಿದಿರಿನಿಂದ ತೊಟ್ಟಿಲು ತಯಾರಿಸುತ್ತಿದ್ದುದನ್ನು ತಿಳಿಸುತ್ತಾನೆ.[54]

ಹಾವಿನಹಾಳ ಕಲ್ಲಯ್ಯನೆಂಬ ವಚನಕಾರನು ಅಕ್ಕಸಾಲಿಗ ಮನೆತನದವ. ಈತನ ಪ್ರಕಾರ, ಗೋಮಾಂಸ ತಿನ್ನುವುದನ್ನು ಕಲಿತ ಬ್ರಾಹ್ಮಣನಿಂದ ಉಪದೇಶ ಹೊಂದಿ ಉಳಿದ ಹದಿನೇಳು ಜಾತಿಗಳು ಮಾಂಸ ತಿನ್ನುವುದನ್ನು ಕಲಿತವು[55] ('ಮಿಕ್ಕ ಹದಿನೇಳು ಜಾತಿ ವಿಪ್ರರ ಕೈಯಲುನುಗ್ರಹವ ಪಡೆದು ತಿನ ಕಲಿತರಯ್ಯಾ') ಎನ್ನುತ್ತಾನೆ. ಮತ್ತೊಂದು ವಚನದಲ್ಲಿ 'ಜಾತಿಗಳಲ್ಲಿ ವಿಪ್ರ ಮೇಲಿನವನು, ಶ್ವಪಚ ಅಥವಾ ಅಂತ್ಯಜ ಕಡೆಯವನು'[56] ಎಂದೂ ತಿಳಿಸುತ್ತಾನೆ. ಅಲ್ಲದೆ ಶ್ವಪಚ, ಮಚ್ಚಿಗ, ಬೋಯ, ಅಗಸ, ಕಮ್ಮಾರ ನಾವಿದರೂ ಲಿಂಗಭಕ್ತರಾದ ಕಾರಣ ಅವರು 'ದ್ವಿಜರು' ಮತ್ತು 'ಕುಲಜರು' ಎಂದು ಮತ್ತೊಂದು ವಚನದಲ್ಲಿ ಹೇಳುತ್ತಾನೆ.[57]

## 5.4. ವೃತ್ತಿಗಳ ಸ್ಥಾನಮಾನದ ಕುರಿತು ವಚನಕಾರರ ಅಭಿಪ್ರಾಯಗಳು

ವೃತ್ತಿಗಳ ಸ್ಥಾನಮಾನದ ಕುರಿತು ವಚನಕಾರರ ಅಭಿಪ್ರಾಯಗಳನ್ನು ನಾವು ಎರಡು ರೀತಿಯಲ್ಲಿ ಕಾಣಬಹುದು.

1. ಎಲ್ಲ ವೃತ್ತಿಗಳ ಸ್ಥಾನಮಾನವು ಒಂದೇ ಎಂದು ಹೇಳುವ ವಚನಕಾರರು.
2. ನಿರ್ದಿಷ್ಟವಾಗಿ ವೃತ್ತಿಯನ್ನು ಹೆಸರಿಸಿ ಇಂಥಹ ವೃತ್ತಿಯು ಕೀಳಲ್ಲ ಎಂದು ಹೇಳುವ ವಚನಕಾರರು.

### 5.4.1. ಎಲ್ಲ ವೃತ್ತಿಗಳ ಸ್ಥಾನಮಾನವು ಒಂದೇ ಎಂದು ಹೇಳುವ ವಚನಕಾರರು

ವಚನಕಾರರು ತಮ್ಮ ವಚನಗಳ ಮೂಲಕ ವೃತ್ತಿಯು ಜೀವನೋಪಾಯ ಹಾಗೂ ಆಧ್ಯಾತ್ಮಿಕ ಸಿದ್ಧಿಗಳಿಗೆ ಒಂದು ಸಾಧನ. ಆದ್ದರಿಂದ ಅದರಲ್ಲಿ ಮೇಲು-ಕೀಳುಗಳಿಲ್ಲ ಎಂದು ಹೇಳುತ್ತಾರೆ. 'ಆವ ಕಾಯಕವ ಮಾಡಿದಡೂ ಒಂದೇ ಕಾಯಕವಯ್ಯಾ'[58] ಎಂಬ ವಚನವು ಎಲ್ಲ ಕಾಯಕಗಳು ಒಂದೇ ಎಂದು ತಿಳಿಸುತ್ತದೆ. ನಾನಾ ವೃತ್ತಿಗಳನ್ನು ಕೈಗೊಂಡವರಲ್ಲಿ ಅವರ ವೃತ್ತಿಯ ಕಾರಣದಿಂದಲೇ ಯಾವ ಬಗೆಯ ತಾರತಮ್ಯವನ್ನು ಮಾಡಬಾರದು. ಏಕೆಂದರೆ ವಿವಿಧ ಮನೋಭಾವ, ಕೆಲಸ ನಿರ್ವಹಿಸುವ ಕೌಶಲ ಇವುಗಳಿಗನುಗುಣವಾಗಿ ವೃತ್ತಿ ವೈವಿಧ್ಯವುಂಟಾಗುತ್ತದೆಯೇ ಹೊರತು ಮೌಲ್ಯದ ಪ್ರಶ್ನೆ ಬಂದಾಗ ಅವೆಲ್ಲವೂ ಸಮಾನ. ಬಸವಣ್ಣ ತನ್ನೊಂದು ವಚನದಲ್ಲಿ 'ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ'[59] ಎಂದು ಹೇಳುತ್ತಾನೆ. ಇಲ್ಲಿ ಕಬ್ಬಿಣವನ್ನು

ಕಾಸಿ ಬಡಿದವನು ಕಮ್ಮಾರ, ಬೀಸಿ ಬಟ್ಟೆ ತೊಳೆದವನು ಮಡಿವಾಳ (ಅಗಸ), ಮಗ್ಗವನ್ನು ಇಟ್ಟು ನೂಲುವವ ನೇಕಾರ, ಅದರಂತೆ ವೇದಗಳನ್ನು ಓದುವವ ಬ್ರಾಹ್ಮಣ. ಇದರಲ್ಲಿ ವ್ಯತ್ಯಾಸವೇನಿದೆ, ಕಾಯಕದಲ್ಲಿ ವ್ಯತ್ಯಾಸವಿರಬಹುದು. ಆದರೆ ಅವುಗಳ ಅಂತಿಮ ಗುರಿ ಒಂದೇ. ಹಾಗಾಗಿ ಯಾವ ವೃತ್ತಿಯು ಮೇಲಲ್ಲ, ಕೀಳಲ್ಲ, ಎಲ್ಲವೂ ಸಮಾನ ಎಂದು ಬಸವಣ್ಣನವರು ಸೂಚ್ಯವಾಗಿ ಹೇಳುತ್ತಾರೆ.

ದೈಹಿಕ ಶ್ರಮಕ್ಕಿಂತ ಮಾನಸಿಕ ಶ್ರಮ ಶ್ರೇಷ್ಠವೆಂದಾಗಲೀ, ದೈಹಿಕ ಶ್ರಮದಲ್ಲಿಯೇ ಒಂದಕ್ಕಿಂತ ಮತ್ತೊಂದು ಹೀನವೆಂದಾಗಲಿ ಭಾವಿಸಬಾರದು. ವ್ಯಕ್ತಿಯು ಅನುಸರಿಸುವ ಕಾಯಕ ಸ್ವರೂಪವನ್ನವಲಂಬಿಸಿ ಅವನಿಗೆ ತೋರಬೇಕಾದ ಗೌರವದ ರೀತಿಯು ನಿರ್ಧಾರವಾಗಬಾರದು. ಶರಣರ ದೃಷ್ಟಿಯಲ್ಲಿ ಈ ಬಗೆಯ ತಾರತಮ್ಯ ಅತ್ಯಂತ ಹೇಯವಾದುದು.

ಜೀವನದಲ್ಲಿ ವೃತ್ತಿಯ ಸ್ಥಾನವು ತುಂಬಾ ಮಹತ್ವಪೂರ್ಣವಾದುದರಿಂದ ವಚನಕಾರರೆಲ್ಲ ತಮ್ಮ ವೃತ್ತಿಯನ್ನೇ ಕಾಯಕದ ಮಟ್ಟಕ್ಕೇರಿಸಲು ಪ್ರಯತ್ನಿಸಿದರು. ಬಸವಣ್ಣನ ಒಂದು ವಚನವು 'ಭಕ್ತಿ ವಿಶೇಷವ ಮಾಡುವಡೆ ಹತ್ತು ಬೆರಳುಂಟು, ಹಾಸಿ ದುಡಿವಡೆ ತನಗುಂಟು, ತನ್ನ ಪ್ರಮಥರಿಗುಂಟು'.[60] ಈ ಕಾಯಕ ಯಾವುದೇ ಆಗಿರಬಹುದು. ಅದರಲ್ಲಿ ಮೇಲು ಕೀಳುಗಳಿಲ್ಲ. ಅಕ್ಕಮ್ಮನ ಒಂದು ವಚನವು ಕಾಯಕವೈವಿಧ್ಯವನ್ನು ಹೀಗೆ ವಿವರಿಸುತ್ತದೆ. [61]

*'ಅಸಿಮಸಿ ಕೃಷಿ ವಾಣಿಜ್ಯ ಮುಂತಾದ ಕಾಯಕವ ಮಾಡಿ,*
*ಭಕ್ತರ ಪಡುಗ ಪಾದತ್ರಾಣ ಪಹರಿ ಬಾಗಿಲು*
*ಬೊಕ್ಕಸ ಬಿಯಗ ಮುಂತಾದ ಕಾಯಕವಂ ಮಾಡಿಕೊಂಡು,*
*ವ್ರತಕ್ಕೆ ಊಣೆಯವಿಲ್ಲದೆ, ಮಾಡುವ ಕೃತ್ಯಕ್ಕೆ ಕಡೆಯಾಗದೆ*
*ಈ ಭಕ್ತನ ಅಂಗಳ ಅವಿಮುಕ್ತಕ್ಷೇತ್ರ*
*ಆತನ ಮನೆಯೆ ಆಚಾರವೆ ಪ್ರಾಣವಾದ ರಾಮೇಶ್ವರ ಲಿಂಗಾಶ್ರಯ'*

ಸೈನಿಕ ವೃತ್ತಿಯಾಗಬಹುದು, ಬೌದ್ಧಿಕ ವೃತ್ತಿಯಾಗಬಹುದು, ವಾಣಿಜ್ಯವಾಗಬಹುದು ಅಥವಾ ಬಾಗಿಲು ಕಾಯುವಂತಹ ಕೆಲಸವಾಗಬಹುದು. ತನ್ನ ಕಾಯಕವನ್ನು ವ್ರತವೆಂಬಂತೆ ಮಾಡಬಲ್ಲವನ ಮನೆಯ ಅಂಗಳ ಅವಿಮುಕ್ತ ಕ್ಷೇತ್ರದಷ್ಟು ಪವಿತ್ರವೆಂದು ಈ ವಚನಕಾರ್ತಿ ಹೇಳುತ್ತಿದ್ದಾಳೆ.

'ಅಸಿಯಾಗಲಿ ಕೃಷಿಯಾಗಲಿ, ವಾಚಕ ವಾಣಿಜ್ಯ ಮಸಿಯಾಗಲಿ, ಮಾಡುವಲ್ಲಿ ಹುಸಿಯಿಲ್ಲದಿರಬೇಕು. ಅದು ಅಸಮಾಕ್ಷನ ಬರವು. ಪಶುಪತಿಯ ಇರವು' ಎಂದು ಮೆರೆಮಿಂಡಯ್ಯನೆಂಬ[62] ವಚನಕಾರ ಹೇಳುವನು. ಕಾಯಕದಲ್ಲಿ

ಮೇಲು-ಕೀಳೆಂಬುದಿಲ್ಲ. ಕಾಯಕ ಸೂತ್ರದಲ್ಲಿ ಎಲ್ಲವೂ ಎಲ್ಲರೂ ಸಮಾನ, ಮಾಡುವ ಕಾಯಕ ಶಿವನಿಂದ ವರವಾಗಿ ಬಂದುದು, ಮಾಡುವ ಕಾಯಕದಲ್ಲೇ ಶಿವನಿರುವನು ಇವಿಷ್ಟು ಮೆರೆಮಿಂಡಯ್ಯನ ವಚನದಲ್ಲಿ ಧ್ವನಿಸುವ ಅರ್ಥ.

ಒಟ್ಟನಲ್ಲಿ ವಚನಕಾರರು ಕಾಯಕತತ್ವವನ್ನು ಪರಿಚಯಿಸುವ ಮೂಲಕ ವೃತ್ತಿ ತಾರತಮ್ಯವನ್ನು ಮಾಡದಂತೆಯು ಹಾಗೂ ಎಲ್ಲ ವೃತ್ತಿಗಳು ಸಾಮಾಜಿಕವಾಗಿ ಸಮಾನ ಸ್ಥಾನಮಾನ ಹೊಂದಿವೆ. ಯಾವುದೂ ಮೇಲಲ್ಲ, ಕೀಳಲ್ಲ ಎಂದು ತಮ್ಮ ವಚನಗಳ ಮೂಲಕ ವ್ಯಕ್ತಪಡಿಸಿದ್ದಾರೆ.

### 5.4.2. ನಿರ್ದಿಷ್ಟವಾಗಿ ವೃತ್ತಿಯನ್ನು ಹೆಸರಿಸಿ ಇಂಥಹ ವೃತ್ತಿಯು ಕೀಳಲ್ಲ ಎಂದು ಹೇಳುವ ವಚನಕಾರರು

ಜೇಡರ ದಾಸಿಮಯ್ಯ 'ಕೀಳು ಡೋಹರ ಕಕ್ಕ, ಕೀಳು ಮಾದಾರ ಚನ್ನ, ಕೀಳು ಓಹಿಲದೇವ, ಕೀಳು ಉದ್ಭಟಯ್ಯ ಕೀಳಿಂಗಲ್ಲದೆ ಹಯನು ಕರೆಯದು ಕಾಣ'[63] ಎಂದು ಹೇಳುತ್ತಾನೆ. ಇದನ್ನು ಗಮನಿಸಿದಾಗ ಸಮಾಜದಲ್ಲಿ ಮೇಲು-ಕೀಳು ಇತ್ತೆಂಬುದು ಸ್ಪಷ್ಟವಾಗುತ್ತದೆ. ಹಾಗೂ ಜನ ಡೋಹರ ಕಕ್ಕ, ಮಾದಾರ ಚನ್ನ, ಓಹಿಲದೇವ, ಉದ್ಭಟಯ್ಯರನ್ನು ಕೀಳು ಎಂದು ಭಾವಿಸಿದ್ದು ಕಂಡುಬರುತ್ತದೆ. ಬಹುತೇಕ ಇವರು ಮಾಡುತ್ತಿದ್ದ ವೃತ್ತಿಯಿಂದ ಹೀಗೆ ಪರಿಗಣಿಸಿರಬೇಕು.

ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆಯು ತಮ್ಮನ್ನು ಅಂದರೆ ಅಸ್ಪೃಶ್ಯರನ್ನು ಸಮಾಜದಲ್ಲಿ ಕೀಳಾಗಿ ಕಾಣಲಾಗುತ್ತಿತ್ತು. ಆದಕ್ಕಾಗಿಯೇ ಆಕೆ ಶಿವಗೆ ಹಾಲು ಕರೆವ ಪಶುವ ತಿಂಬ ಮಾದಿಗ ಹೇಗೆ ಕೀಳುಜಾತಿಯವನಾಗುತ್ತಾನೆ ಎಂದು ಕೇಳುತ್ತಾಳೆ.[64] ಅಂಬಿಗರ ಚೌಡಯ್ಯ ಕೂಡ ತನ್ನ ವಚನದಲ್ಲಿ[65] ಇದೆ ರೀತಿ ಪ್ರತಿಕ್ರಿಯಿಸುತ್ತಾನೆ.

ಒಟ್ಟನಲ್ಲಿ ವಚನಗಳು ತೋರಿಸುವ ಪ್ರಕಾರ ಕೆಲವೊಂದು ವೃತ್ತಿಗಳನ್ನು ಕೀಳು ಎಂದು, ಕೆಲವೊಂದು ವೃತ್ತಿಗಳನ್ನು ಮೇಲು ಎಂದು ಪರಿಗಣಿಸುತ್ತಿದ್ದರೆಂಬುದು ಗೊತ್ತಾಗುತ್ತದೆ.

## 5.5. ಎಡಪಂಥೀಯ ವಿದ್ವಾಂಸರ ವಾದಗಳು

ಮಧ್ಯಕಾಲೀನ ವೃತ್ತಿಪರರ ಸ್ಥಾನಮಾನದ ಕುರಿತು ಭಾರತದ ಎಡಪಂಥದ ಇತಿಹಾಸಕಾರರು ಫ್ಯೂಡಲಿಸಂ ಚೌಕಟ್ಟನಲ್ಲಿ ಕೆಲ ತೀರ್ಮಾನಗಳನ್ನು ಮಾಡಿದ್ದಾರೆ. ಅದೆಂದರೆ ದೇವಾಲಯ ಮತ್ತು ಬ್ರಾಹ್ಮಣ ವಿಧಿಗಳ ಬೆಳವಣಿಗೆ ಫ್ಯೂಡಲಿಸಂನ ಒಂದು ಲಕ್ಷಣವಾಗಿದ್ದು, ಈ ಕಾಲದ ವೃತ್ತಿಪರರನ್ನು ಪರಾಧೀನರನ್ನಾಗಿ ಮಾಡುವ ಪ್ರಕ್ರಿಯೆ ಎಂಬಂತೆ

ನೋಡಲಾಗಿದೆ. ಆರ್.ಎನ್. ನಂದಿಯವರು[66] 'ವೀರಶೈವ ಚಳುವಳಿಯ ಹುಟ್ಟು' ಲೇಖನದಲ್ಲಿ ವೃತ್ತಿಪರರು ದೇವಾಲಯ ಸಂಸ್ಕೃತಿಯಲ್ಲಿ ಶೋಷಣೆಗೆ ಒಳಗಾದರು ಎಂದು ತೀರ್ಮಾನಿಸುತ್ತಾರೆ ಹಾಗೂ ವೀರಶೈವವು ಅನೇಕ ಉತ್ಪಾದನ ಹಾಗೂ ಹಂಚಿಕೆಯ ಪ್ರಕ್ರಿಯೆಗಳನ್ನೊಳಗೊಂಡ ವಿವಿಧ ಸಾಮಾಜಿಕ ವಿಭಾಗಗಳ ಒಗ್ಗೂಡಿಕೆಯಿಂದ ಹುಟ್ಟಿದ ಮತ ಚಳುವಳಿ. ಈ ಒಕ್ಕೂಟವು ಊಳಿಗಮಾನ್ಯ ಮಧ್ಯವರ್ತಿಗಳ ಶೋಷಣೆಗಳಿಂದ ತಮ್ಮ ತಮ್ಮ ಆಸಕ್ತಿಗಳನ್ನು ರಕ್ಷಿಸಿಕೊಳ್ಳುವುದಕ್ಕಾಗಿ ವರ್ತಕ ಹಾಗೂ ಇತರೆ ಉತ್ಪಾದಕ ವರ್ಗಗಳನ್ನು ಒಟ್ಟಾಗಿಸಿದಂತೆ ಕಾಣುತ್ತದೆ. ಚರಿತ್ರೆಯಲ್ಲಿ ಕಾಣಿಸುವಂತೆ ಈ ಊಳಿಗಮಾನ್ಯ ಮಧ್ಯವರ್ತಿಗಳು ಪ್ರಾಥಮಿಕ ಉತ್ಪಾದಕರನ್ನು ಯಾವುದೇ ಉದ್ಯಮ ಅಥವಾ ವ್ಯಾಪಾರದಲ್ಲಿ ತೊಡಗಿಕೊಳ್ಳದಂತೆ ಶೋಷಣೆಗೊಳಪಡಿಸಿದ್ದರು. ಯಾವ ವ್ಯವಸಾಯ ಹಾಗೂ ಕೈಗಾರಿಕಾ ಕಾರ್ಮಿಕರನ್ನು ಹಳೆಯ ಬ್ರಾಹ್ಮಣ ವ್ಯವಸ್ಥೆಯು ತುಚ್ಛ ಶೂದ್ರರನ್ನಾಗಿ ಕಂಡಿತ್ತೋ, ಅಂತಹವರಿಗೆ ವೀರಶೈವ ಚಳುವಳಿಯ ಉಗಮವು ತಮ್ಮ ಕೆಳ ಮಟ್ಟದ ಸ್ಥಾನಮಾನದ ಬಿಡುಗಡೆಯ, ಉದ್ಧಾರದ ದಾರಿಯಾಗಿ ಕಂಡಿತು ಎಂಬುದು ಇವರ ಚರ್ಚೆ.

ಆದರೆ ನಮಗೆ ಸಿಗುವ ಶಾಸನಾಧಾರಗಳ ಮೂಲಕ ಈ ತೀರ್ಮಾನಗಳನ್ನು ತಲುಪುವುದು ಅಷ್ಟು ಸಮಂಜಸವೆನಿಸಲಾರದು. ಅರಸೀಕೆರೆ ಶಾಸನವೊಂದರಲ್ಲಿ ತೆಲ್ಲಿಗ ಸಮುದಾಯದ ಸ್ತ್ರೀಯೊಬ್ಬಳು (ಜಕ್ಕವೆ) ಗ್ರಾಮೇಶ್ವರ ದೇವಾಲಯವನ್ನು ಕಟ್ಟಿಸಿದ ವಿಷಯವಿದೆ[67]. ನಿಡಗುಂದಿಯ ಶಾಸನದಲ್ಲಿ[68] ಆಚಾರ್ಯ ಯೀಶಾನ್ಯಸಕ್ತಿದೇವರು ಗಾಣವನ್ನು ತೆಲ್ಲಿಗನೊಬ್ಬನಿಗೆ ಕೊಟ್ಟ ಸಂಗತಿಯಿದೆ. ಈ ಶಾಸನವು ಸೂಚಿಸುವಂತೆ ಆ ಎಣ್ಣೆಗಾಣವು ಮೂಲತಃ ದೇವಾಲಯದ ಆಸ್ತಿಯಾಗಿತ್ತು, ಬಹುಶಃ ದಾನಿಗಳು ದಾನವನ್ನು ನೀಡಿದ್ದಿರಬಹುದು. ಈ ಗಾಣವನ್ನು ಕಾಳಿಸೆಟ್ಟಿಗೆ ದೇವಾಲಯದ ಆಚಾರ್ಯರು ನೀಡುತ್ತಾರೆ. ಕೊಟ್ಟ ವಿಧಾನವೆಂದರೆ 'ತೆಲ್ಲಿಗ ಸಾಮ್ಯ'. ಹಾಗೂ ಆ ಸಾಮ್ಯವನ್ನು ವಂಶಪಾರಂಪರ್ಯವಾಗಿ ನಡೆಸಬೇಕೆಂದು ಹೇಳಲಾಗಿದೆ. 'ತೆಲ್ಲಿಗ ಸಾಮ್ಯ' ಎಂಬ ಪದ ಇವರ ಕುರಿತಾದ ಕೆಲ ಶಾಸನೋಲ್ಲೇಖಗಳಲ್ಲೂ ಬರುತ್ತದೆ. '***ಬಳದ ಸಾಮ್ಯದ ಐವತ್ತೊಕ್ಕಲ ಮನೆಯಲು***' ಎಂಬ ಸಾಲೂ ಕೂಡ ಇದನ್ನು ಸೂಚಿಸುತ್ತದೆ. ಈ ಸಾಮ್ಯ ಎನ್ನುವುದು ನಿರ್ದಿಷ್ಟವಾಗಿ ಏನು ಎಂಬುದು ಸ್ಪಷ್ಟವಾಗದಿದ್ದರೂ ಅದು ತೆಲ್ಲಿಗರ ಸಾಮ್ಯಕ್ಕೆ ಸಂಬಂಧಿಸಿದ ಒಪ್ಪಂದವಾಗಿರಬಹುದಾದ ಸಾಧ್ಯತೆಯೇ ಹೆಚ್ಚು. ಬಹುಶಃ ದೇವಾಲಯಕ್ಕೆ ನಿರ್ದಿಷ್ಟ ಪ್ರಮಾಣದ ಎಣ್ಣೆಯನ್ನು ಬಿಟ್ಟು ಉಳಿದುದನ್ನು ಜೀವನೋಪಾಯಕ್ಕಾಗಿ ಬಳಸಿಕೊಳ್ಳುವ ಹಕ್ಕನ್ನು ಹಾಗೂ ಗಾಣದ ಒಡೆತನವನ್ನು

ಈ ಸಾಮ್ಯವು ಸೂಚಿಸಬಹುದು. ಗಾಣದ ದಾನಗಳನ್ನು ಉಲ್ಲೇಖಿಸುವ ಅನೇಕ ಶಾಸನಗಳಿದ್ದರೂ ಯಾವುದರಲ್ಲೂ ಆ ದಾನಗಳ ಮೂಲಕ ತೈಲಿಗರು ದೇವಾಲಯದ ಒಡೆತನಕ್ಕೆ ಅಧೀನರಾಗಿ ತಮ್ಮ ಸ್ವಾಯತ್ತತೆಯನ್ನು ಕಳೆದುಕೊಂಡ ಬಗೆಗೆ ಸುಲಭ ತೀರ್ಮಾನ ಸಾಧ್ಯವಿಲ್ಲ. ಇಂಥ ದಾನಗಳು ತೈಲಿಗರಿಗೆ ಜೀವನೋಪಾಯಗಳಾಗಿ ಹೇಗೆ ಒದಗುತ್ತಿದ್ದವು ಮತ್ತು ಗಾಣಕ್ಕಾಗಿ ಹಣ ತೊಡಗಿಸುವ ಸಾಮರ್ಥ್ಯ ಇಲ್ಲದ ತೈಲಿಗರಿಗೆ ಇಂಥ ದಾನ, ಜೀವನ ನಡೆಸಲು ಹೇಗೆ ಸಹಕರಿಸಿರಬಹುದು ಎಂಬುದನ್ನು ನಿಡಗುಂದಿಯ ಶಾಸನವು ಸೂಚಿಸುತ್ತದೆ. ಹೀಗಿರುವಾಗ ಗಾಣದ ದಾನ ಶಾಸನಗಳ ಆರ್ಥಿಕ-ಸಾಮಾಜಿಕ ಆಯಾಮಗಳ ಕುರಿತು ತೀರ್ಮಾನ ತೆಗೆದುಕೊಳ್ಳುವುದರಲ್ಲಿ ಸಮಸ್ಯೆಯ ಜಟಿಲತೆ ಅರಿವಿಗೆ ಬರುತ್ತದೆ. ಇದರಿಂದ ಎಣ್ಣೆ ಉದ್ಯಮವು ಬೇಕಾಬಿಟ್ಟಿಯಾಗಿ ಧಾರ್ಮಿಕ ಸಂಸ್ಥೆಗಳಿಗೆ ವರ್ಗವಾಗಿದ್ದು, ಜಮೀನಿನ ಹಾಗೂ ಮುಖ್ಯ ವಸ್ತುಗಳ ಮೇಲೆ ಮಧ್ಯವರ್ತಿಗಳು ಹಿಡಿತ ಸಾಧಿಸಿದ್ದು ಈ ಉದ್ದಿಮೆಯು ಕುಂಠಿತಗೊಳ್ಳಲು ಕಾರಣವಾಯಿತು ಎಂಬ ಮಾತು ಸಮಂಜಸವೆನಿಸಲಾರದು. ದೇವಾಲಯಗಳ ಬೆಳವಣಿಗೆ ತೆಲ್ಲಿಗ ಕುಲದ ಉಚ್ಛ್ರಾಯಕ್ಕೆ ಒಂದು ಕಾರಣವಾಗಿರಬಹುದೇ ಹೊರತು ಅವರ ಅಸ್ತಿತ್ವಕ್ಕೆ ಮಾರಕವಾದ ಸಂಗತಿ ಶಾಸನಗಳಲ್ಲಿ ವ್ಯಕ್ತವಾಗುವುದಿಲ್ಲ. ಅನೇಕ ಶಾಸನಗಳಲ್ಲಿ ತೆಲ್ಲಿಗರು ತಾವೇ ಸ್ವಯಂಸ್ಫೂರ್ತಿಯಿಂದ ದಾನಕ್ಕೆ ವ್ಯವಸ್ಥೆ ಮಾಡಿದ ವಿಷಯವಿದೆ. ಈ ದಾನ ನೀಡುವಾಗ ಅವರು ತಮ್ಮ ಸಮಾಜದ ನಡಾವಳಿಗಳನ್ನು ತಾವೇ ರೂಪಿಸಿಕೊಳ್ಳುತ್ತಿದ್ದುದು ಹಾಗೂ ತಮ್ಮ ಉತ್ಪಾದನೆಯ ಒಂದಂಶವನ್ನೇ ಬಿಡುತ್ತಿದ್ದುದು ಮುಂತಾದ ದೃಷ್ಟಾಂತಗಳು ಸೂಚಿಸುವಂತೆ ಈ ಸಮಾಜವು ತಮ್ಮ ವ್ಯವಹಾರಗಳನ್ನು ಸ್ವಯಂ ಇಚ್ಛೆಯಿಂದ ರೂಪಿಸಿಕೊಳ್ಳುತ್ತಿದ್ದುದು ಕಂಡುಬರುತ್ತದೆ ಹಾಗೂ ಇವರಲ್ಲಿ ದಾನಧರ್ಮಾದಿಗಳಿಗೆ ಅನುವು ಮಾಡಿಕೊಡುವಷ್ಟು ಉತ್ಪಾದನೆ ಕೂಡ ನಡೆಯುತ್ತಿತ್ತು. ಅಷ್ಟೇ ಅಲ್ಲ ತಾವು ಅಂಥದ್ದೊಂದು ದೇವಾಲಯ ಕಟ್ಟಿಸಿ ಸ್ಥಾನಾಚಾರ್ಯರನ್ನು ನೇಮಿಸಿಕೊಂಡ ಉಲ್ಲೇಖಗಳಿವೆ. ದೇವಾಲಯಗಳ ಮೂಲಕ ತಮ್ಮ ಸ್ಥಾನಮಾನವನ್ನು ಅರಸಿಕೊಂಡು ಉಳಿದ ಆ ಕಾಲದ ಸಮುದಾಯಗಳಂತೆ ಅವರು ಶಿಷ್ಟ ಸಂಸ್ಕೃತಿಯ ಮೌಲ್ಯಗಳನ್ನು ರೂಢಿಸಿಕೊಳ್ಳುವುದರತ್ತ ಆಸಕ್ತಿ ತೋರಿಸಿದ್ದು ವಿದಿತವಾಗುತ್ತದೆ. ಇವರು ತಾವು ಧರಿಸಿಕೊಳ್ಳುತ್ತಿದ್ದ ಬಿರುದು ಬಾವಲಿಗಳು ಸಮಕಾಲೀನ ಸಮಾಜದಲ್ಲಿ ಇವರು ಇತರ ವೃತ್ತಿಪರರಂತೆ ಸಾಮಾಜಿಕ ಸ್ಥಾನಮಾನಗಳನ್ನು ದೃಢೀಕರಿಸಿಕೊಳ್ಳಲು ಕೂಡ ಉದ್ಯುಕ್ತರಾಗಿದ್ದರು ಎಂಬುದನ್ನು ವಿಶದಪಡಿಸುತ್ತವೆ. ಸಾಮಾಜಿಕ, ಆರ್ಥಿಕ ಶೋಷಣೆಗೊಳಪಟ್ಟು ನಶಿಸುತ್ತಿರುವ ಪರಾಧೀನ ಸಮುದಾಯದಂತೆ ಅವರು ಖಂಡಿತವಾಗಿಯೂ ಶಾಸನಗಳಲ್ಲಿ ಕಾಣಿಸಿಕೊಳ್ಳುವುದಿಲ್ಲ.

## 5.6. ಶಾಸನಗಳಲ್ಲಿ ಬಿಂಬಿತವಾದಂತೆ ಕುಶಲಕರ್ಮಿಗಳ ಸಾಮಾಜಿಕ ಸ್ಥಾನಮಾನ

**ಬೆಳವಣಿಗೆ**

ನಮ್ಮ ಅಧ್ಯಯನಕ್ಕೆ ತೆಗೆದುಕೊಂಡ ಎಲ್ಲಾ ಕುಶಲಕರ್ಮಿಗಳನ್ನು ಕುರಿತು ಶಾಸನಗಳ ಹಿನ್ನೆಲೆಯಿಂದ ನೋಡಿದಾಗ ಉತ್ತಮವಾದ ಸಾಮಾಜಿಕ ಸ್ಥಾನಮಾನ ದೊರಕಿದುದು ಗೊತ್ತಾಗುತ್ತದೆ. ಈ ಅವಧಿಯಲ್ಲಿ ಬೃಹತ್ ಕೈಗಾರಿಕೆಗಳಿಗಿಂತ ಗೃಹಕೈಗಾರಿಕೆಗಳೇ ಪ್ರಮುಖವಾಗಿದ್ದು ಉತ್ಪನ್ನಗಳು ಹೆಚ್ಚು ಕೌಶಲ್ಯಪೂರ್ಣವಾಗಿದ್ದವು.

ನೇಕಾರರ ಕುರಿತು ಅಣ್ಣೀಗೆರೆ ಶಾಸನವು[69] 'ನುಡಿದಂತೆ ಗಂಡರುಂ ದಾನವಿನೋದರುಂ ಶರಣಾಗತ ವಜ್ರಪಂಜರರುಂ ಸತ್ಯರಾಧೇಯರುಂ ಶೌಚ ಗಾಂಗೇಯರುಂ ಭಗವತೀಲಬ್ಧವರ ಪ್ರಸಾದರುಂ' ಎಂದು ನೇಕಾರರ ವೀರ, ದಾನ, ಸತ್ಯ, ಶೌಚಗುಣಗಳನ್ನು ತಿಳಿಸುತ್ತದೆ. ಹೀಗೆ ಅನೇಕ ಶಾಸನಗಳು ಇವರ ಮತ, ದಾನಗುಣ, ರೂಪ ಮೊದಲಾದವುಗಳನ್ನು ಬಣ್ಣಿಸಿ ಹೇಳುತ್ತವೆ. ಅಲ್ಲದೆ ಕೆಲವು ಶಾಸನಗಳು ನೇಕಾರಸೆಟ್ಟಿಗಳಿದ್ದ ವಿಚಾರಗಳನ್ನು ತಿಳಿಸುತ್ತವೆ. ಈ ಕುರಿತು ವಿವರವಾಗಿ ಹಿಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಈ ಹಿನ್ನೆಲೆಯನ್ನು ನೋಡಿದಾಗ ವ್ಯಾಪಾರ ವಾಣಿಜ್ಯದ ಚಟುವಟಿಕೆಗಳಲ್ಲೂ ಇವರು ಸಕ್ರಿಯವಾಗಿ ಪಾಲ್ಗೊಂಡಿದ್ದು ಗೊತ್ತಾಗುತ್ತದೆ. ಇದರ ಕುರಿತು ಸಾಹಿತ್ಯವು ಕೂಡ ಸ್ವಲ್ಪಮಟ್ಟಿಗೆ ಬೆಳಕು ಚೆಲ್ಲಿದೆ. ಒಟ್ಟಿನಲ್ಲಿ ನೇಕಾರರು ಮಧ್ಯಕಾಲೀನ ಕರ್ನಾಟಕದಲ್ಲಿ ಉತ್ತಮವಾದ ಸ್ಥಾನಮಾನವನ್ನೇ ಹೊಂದಿದ್ದಿದ್ದು ಗೊತ್ತಾಗುತ್ತದೆ.

ಬಡಗಿಗಳಿಗೆ ಸಂಬಂಧಿಸಿದಂತೆ ನಮಗೆ ಸಿಗುವ ಶಾಸನಗಳ ಸಂಖ್ಯೆ ತುಂಬಾ ಕಡಿಮೆಯಿವೆಯಾದರೂ ಆ ಶಾಸನಗಳು ಕೂಡ ಇವರ ಸಾಮಾಜಿಕ ಸ್ಥಾನಮಾನದ ಕುರಿತು ಹೆಚ್ಚು ಮಾಹಿತಿ ನೀಡುವುದಿಲ್ಲ. ಸಾಹಿತ್ಯದ ಸಹಾಯವನ್ನು ತೆಗೆದುಕೊಂಡು ಹೇಳುವುದಾದರೆ ಇವರು ಕೃಷಿ ಸಂಬಂಧಿ ವಸ್ತುಗಳು ಹಾಗೂ ಮನೆ ಬಳಕೆ ಸಂಬಂಧಿ ವಸ್ತುಗಳನ್ನು ತಯಾರಿಸುತ್ತಿದ್ದದ್ದು ತಿಳಿಯುತ್ತದೆ. ಇವರು ಕೂಡ ತೆರಿಗೆ ಕೊಡುತ್ತಿದ್ದ, ಭೂಮಿದಾನ ಮಾಡಿದ ಶಿಲ್ಪಿಯಾಗಿಯೂ ಕಾರ್ಯ ನಿರ್ವಹಿಸಿದ ಹೀಗೆ ಕೆಲವೇ ವಿಷಯಗಳು ಇವರ ಕುರಿತು ಶಾಸನಗಳಿಂದ ಗೊತ್ತಾಗುವುದು. ಇದರಿಂದ ಇವರ ಸಾಮಾಜಿಕ ಸ್ಥಾನಮಾನ ಕುರಿತು ಸ್ಪಷ್ಟವಾಗಿ ನಿರ್ಣಯಿಸಲು ಸಾಧ್ಯವಾಗಿಲ್ಲ.

ಕಮ್ಮಾರರು ಅತ್ಯಂತ ಪ್ರಾಚೀನ ಕಾಲದಿಂದಲೂ ಕಂಡುಬಂದಿದ್ದು ಮಧ್ಯಕಾಲೀನ ಶಾಸನಗಳಿಂದ ಇವರು ಬೇಟೆ, ಹೋರಾಟ, ಕಾಳಗ, ಶಿಲ್ಪಿ ಕೆಲಸ, ಕಮ್ಮಾರಿಕೆ ಮೊದಲಾದ ಕೆಲಸ ನಿರ್ವಹಿಸಿದ ಕುರಿತು ಗೊತ್ತಾಗುತ್ತವೆ. ಮೂಡಗೆರೆಯ

ಶಾಸನ [70] ಕಮ್ಮಾರಗೋಡನೆಂಬವನು ಅಮೃತೇಶ್ವರ ದೇವಾಲಯವನ್ನು ಕಟ್ಟಿಸಿ ಕೆಲವು ಭೂಮಿಗಳನ್ನು ದತ್ತಿಬಿಟ್ಟುದಾಗಿ ಹೇಳುತ್ತದೆ. ಕ್ರಿ.ಶ. 967ರ ಬಳ್ಳಾರಿ ಜಿಲ್ಲೆಯ ಕೊಳಗಲ್ಲು ಶಾಸನವು[71] ಕೊಳಗಲ್ಲಿನಲ್ಲಿ ಬ್ರಹ್ಮಚಾರಿ ಗಧಾದರನು ಕಾರ್ತಿಕೇಯನನ್ನು ಹಾಗು ಇತರೆ ದೇವತೆಗಳನ್ನು ಪ್ರತಿಷ್ಠಾಪಿಸಿದ್ದನ್ನು ತಿಳಿಸುತ್ತದೆ.

ಇವನು ಕಾರ್ತಿಕೇಯ ವಿಗ್ರಹ ಮತ್ತು ಅದರ ಪೀಠವನ್ನು ಚಿನ್ನದಲ್ಲಿ ಮಾಡಿಸಿದ್ದ. ಗಧಾದರನು ಕಮ್ಮಾರ ಕುಲದವನಾಗಿದ್ದು ಶಾಂಡಿಲ್ಯ ಗೋತ್ರದವನು. ಗೌಡದೇಶದ ಮಣಿಯಂತಿದ್ದ ವರೇಂದ್ರಿ ಪ್ರದೇಶವನ್ನು ಬೆಳಗಿದವನು. ಇವನು ಸೂರ್ಯ, ಬ್ರಹ್ಮ, ವಿಷ್ಣು, ಶಿವ, ಪಾರ್ವತಿ, ವಿನಾಯಕ ದೇವರನ್ನು ಪ್ರತಿಷ್ಠಾಪಿಸಿ, ಕೆರೆಯನ್ನು, ಬಾವಿಗಳನ್ನು ಸತ್ರಗಳನ್ನು ಕಟ್ಟಿಸಿದನು ಎಂದು ವಿವರಿಸುತ್ತ 'ಶ್ರೀ ಕರ್ಮಾರ ಕುಲಾಹ್ವಯ ದ್ವಿಜ ವರ ಗ್ರಾಮಸ್ತು' ಎಂದು ಉಲ್ಲೇಖಿಸುತ್ತದೆ. ಕ್ರಿ.ಶ. 971ರ ಕುಡುತಿನಿ ಶಾಸನವು[72] 'ಶ್ರೀ ಕರ್ಮ್ಮಾರಕುಳಾಹ್ವಯದ್ವಿಜವರ ಗ್ರಾಮಸ್ಯ ತತ್ಕಾರಿತೋ ನಿಷ್ಪ್ರಮ್ಯ ಕ್ರಮನಿರ್ಮ್ಮಳ' ಎಂದೂ ಉಲ್ಲೇಖಿಸುವುದು ಕರ್ಮ್ಮಾರರು ತಮ್ಮನ್ನು 'ದ್ವಿಜ' ಎಂದು ಕರೆದುಕೊಂಡಿದ್ದು ಮೇಲಿನೆರಡು ಶಾಸನದಿಂದ ಗೊತ್ತಾಗುತ್ತದೆ. ಉಪನಯನದಂಥಹ ಸಂಸ್ಕಾರಗಳಾದಾಗ ಮಾತ್ರ ದ್ವಿಜ ಎಂದು ಕರೆಯುವುದರಿಂದ ಇವರೂ ಕೂಡ ಉಪನಯನ ಮೊದಲಾದ ಸಂಸ್ಕಾರಗಳನ್ನು ಆಗಿನ ಕಾಲದಲ್ಲಿ ರೂಢಿಸಿಕೊಂಡಿದ್ದು ಗೊತ್ತಾಗುತ್ತದೆ.

ಹೀಗೆ ಕಮ್ಮಾರರು ಧರ್ಮಪರರು, ಧೈರ್ಯಶಾಲಿಗಳು, ಶೂರರು, ಸಾಹಸಿಗಳು, ಸತ್ಯಜೆಗಳು ಎಂಬುದು ಗೊತ್ತಾಗುತ್ತದೆ.

ಕುಂಬಾರ ವೃತ್ತಿಯ ಉಗಮದ ಬಗೆಗೆ ಪೌರಾಣಿಕವಾಗಿ ನಮಗೆ ಆನೆಗೊಂದಿ ಹಾಗೂ ಸೊಲ್ಲಾಪುರ ಶಾಸನಗಳಿಂದ ತಿಳಿದುಬರುತ್ತದೆ. ಈ ಎರಡೂ ಶಾಸನಗಳಿಂದ ಕುಂಬಾರ ಕುಲ, ವೃತ್ತಿಯ ಉತ್ಪತ್ತಿಯನ್ನು ಶಿವನ ಮಾವ, ಪಾರ್ವತಿಯ ತಂದೆ ಪರ್ವತರಾಜನವರೆಗೆ ಹಿಂದೆ ಕೊಂಡೊಯ್ಯುವ, ಅದಕ್ಕೆ ಪೌರಾಣಿಕ ಹಿನ್ನೆಲೆ, ದೈವಿಕ ಅನುಮೋದನೆ, ಪ್ರಾಮಾಣ್ಯಗಳನ್ನು ನೀಡುವ ಉದ್ದೇಶ ಈ ಶಾಸನಗಳಲ್ಲಿದೆ. ಕುಂಬಾರರು ತಮ್ಮ ಜಾತಿ ಶ್ರೇಷ್ಠತೆಯನ್ನು ಹೀಗೆ ಹೇಳಿಕೊಳ್ಳುತ್ತಾರೆ.

ಅಕ್ಕಸಾಲಿಗಳು, ಕಂಚುಗಾರರು ಕುರಿತು ಅತ್ಯಲ್ಪ ಶಾಸನಗಳಿಂದ ಅವರ ಸಾಮಾಜಿಕ ಸ್ಥಾನಮಾನ ತಿಳಿಯಲಾಗಿಲ್ಲ.

ತೆಲ್ಲಿಗರು ಮಧ್ಯಕಾಲದ ವಸತಿಗಳಲ್ಲಿ ಉತ್ಕರ್ಷವನ್ನು ಹೊಂದಿದ ಒಂದು ವೃತ್ತಿಪರರು ಆಗಿದ್ದರು. ಬಹುಶಃ ಈ ಉತ್ಕರ್ಷಕ್ಕೆ ಊರೂರುಗಳಲ್ಲಿ ನಿರ್ಮಾಣವಾದ ದೇವಾಲಯಗಳದ್ದು ಒಂದು ಕಾರಣವಿರಬಹುದು. ಇವರು ತಾವು ಐವತ್ತೊಕ್ಕಲು, ಸಾಯಿರೊಕ್ಕಲು ಎಂದೆಲ್ಲಾ ಸಂಘಟನೆ ಮಾಡಿಕೊಂಡು ಅಂದಿನ ಕಾಲದ ಧನಿಕ ವರ್ಗದ ನಡಾವಳಿಗಳನ್ನು ರೂಢಿಸಿಕೊಂಡಿದ್ದರು. ಇದು ನಮಗೆ ಅನೇಕ ಶಾಸನಗಳಿಂದ ತಿಳಿದುಬರುತ್ತದೆ. ಡಂಬಳದ ಶಾಸನವೊಂದು[73] ತೆಲ್ಲಿಗ ಐವತ್ತೊಕ್ಕಲನ್ನು ಅಲಂಕಾರಿಕವಾಗಿ ಸ್ತುತಿಸುತ್ತದೆ. ಈ ತೆಲ್ಲಿಗರು ಡಂಬಳದ ಬೌದ್ಧ ವಿಹಾರಕ್ಕೆ ಎಣ್ಣೆಯನ್ನು ದಾನ ಮಾಡುತ್ತಾರೆ. ಇದರಲ್ಲಿ ಅವರನ್ನು ಬುಧ ಬಾಂಧವರು, ಗುಣಾಢ್ಯರು, ಸಜ್ಜನ ನುತರು, ಸಾಕ್ಷರಿಕರು, ದಯಾಪರರು, ಭಾರತೀಸ್ತನ ಮಣಿಹಾರರು, ಸುಜನಾಶ್ರಯರು ಎಂದು ವರ್ಣಿಸಲಾಗಿದೆ. ಇನ್ನೂ ದೀರ್ಘವಾಗಿ ಅವರ ಪ್ರಶಸ್ತಿ ಇದೆ. ಇದರಲ್ಲಿ ತೆಲ್ಲಿಗರು ತಮ್ಮನ್ನು ಸಜ್ಜನರು, ಅಕ್ಷರಸ್ಥರು, ದಯಾಪರರು, ಒಳ್ಳೆಯ ಜನರಿಗೆ ಆಶ್ರಯ ಕೊಡುವವರು, ಬೇಡಿದವರಿಗೆ ದಾನ ನೀಡುವವರು, ಒಳ್ಳೆಯ ಚಾರಿತ್ರ್ಯದವರು ಹಾಗೂ ಶರಣಾಗತರನ್ನು ಕಾಯುವವರು ಮುಂತಾದ ಮೌಲ್ಯಗಳನ್ನು ಹೊಂದಿದವರೆಂದು ಕರೆದುಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ತೆಲ್ಲಿಗರು ನಿರ್ಮಿಸಿದ ಅನೇಕ ದೇವಾಲಯಗಳನ್ನು ನಾವು ಪರಿಶೀಲಿಸಬಹುದಾಗಿದೆ. ಇವರು ತಮ್ಮ ದೇವರಿಗೆ ಕಲ್ಲಿನ ದೇವಾಲಯಗಳನ್ನು ಕಟ್ಟಿಸಿ, ರಾಜ್ಯದ ಅಧಿಕಾರಿಗಳು, ಪ್ರತಿಷ್ಠಿತರು ಹಾಗೂ ತಪೋಧನರನ್ನು ಸೇರಿಸಿ ದಾನ ನೀಡಿ ಅದನ್ನು ಶಿಲಾಶಾಸನದಲ್ಲಿ ದಾಖಲಿಸಿಕೊಳ್ಳುತ್ತಿದ್ದುದು ಅನೇಕ ಶಾಸನಗಳಲ್ಲಿ[74] ದೃಷ್ಟಾಂತವಾಗಿದೆ. ಇವರ ದೇವರು ಇವರ ಕುಲನಾಮವನ್ನೇ ಸಾಧಾರಣವಾಗಿ ಹೊತ್ತಿರುತ್ತಿತ್ತು. ತೆಲ್ಲಿಗೇಶ್ವರ ಎಂಬ ಹೆಸರು ಸಾಮಾನ್ಯವಾಗಿ ಕಂಡುಬರುತ್ತದೆ. ಇದಲ್ಲದೆ ಇವರಲ್ಲಿ ನಖರಶ್ರೇಣಿಯ ಸೆಟ್ಟಿಗಳು ನಖರೇಶ್ವರ ದೇವಾಲಯ[75]ವನ್ನು ಕಟ್ಟಿಸಿದ್ದು ಇದೆ. ಕೆಲವು ಉದಾಹರಣೆಗಳಲ್ಲಿ ಗಳಗೇಶ್ವರ ದೇವರು[76], ವೀರಭದ್ರ ದೇವರು[77], ದುರ್ಗಾದೇವತೆ[78] ಮುಂತಾದ ದೇವರಿಗೆ ದತ್ತಿ ಬಿಟ್ಟದ್ದು ಕಂಡುಬರುತ್ತದೆ. ಒಂದು ಶಾಸನದಲ್ಲಿ ಜಕ್ಕವೆ ಎನ್ನುವ ತೆಲ್ಲಿಗ ಸ್ತ್ರೀ ಶಿವಾಲಯವನ್ನೆತ್ತಿಸಿದ[79] ಉಲ್ಲೇಖ ಬರುತ್ತದೆ ಹಾಗೂ ಅಪರೂಪಕ್ಕೆ ಇವರು ಜಿನಾಲಯ[80], ಬೌದ್ಧ ವಿಹಾರಗಳನ್ನು[81] ಪೋಷಿಸಿದ ವಿಷಯವು ತಿಳಿದುಬರುತ್ತದೆ. ಹಾಗಾಗಿ ತೆಲ್ಲಿಗ ಕುಲದವರು ಶೈವ, ಬೌದ್ಧ, ಜೈನ ಮುಂತಾಗಿ ನಾನಾ ಮತಾವಲಂಬಿಗಳಾಗಿದ್ದರೆಂದು ಹೇಳಬಹುದು. ಆದರೆ ಬಹುತೇಕವಾಗಿ 12-13ನೇ ಶತಮಾನದಲ್ಲಿ ತೆಲ್ಲಿಗರೆಲ್ಲರೂ ಶೈವ ಮತದ ತೆಕ್ಕೆಯೊಳಗೆ ಬರುತ್ತಿದ್ದ ಪ್ರಕ್ರಿಯೆ ಶಾಸನಗಳಲ್ಲಿ ವ್ಯಕ್ತವಾಗುತ್ತದೆ. ಇವರು ಕಟ್ಟಿಸಿದ ಈಶ್ವರ ದೇವಾಲಯಕ್ಕೆ ಒಂದಿಲ್ಲೊಂದು ಶೈವ ಕಾಳಾಮುಖ ಮಠದ ಉಸ್ತುವಾರಿಯ ವ್ಯವಸ್ಥೆ ಮಾಡುತ್ತಿದ್ದರು. ಈ ರೀತಿ ತೆಲ್ಲಿಗರ ದೇವರಿಗೆ ಆಗಮೋಕ್ತ ಪೂಜಾಕ್ರಮಗಳನ್ನು ನಡೆಸುವ

ನಿಮಿತ್ತವಾಗಿ ತೆಲ್ಲಿಗ ಸಮುದಾಯಗಳು ಈ ಮಠಗಳ ಅನುಯಾಯಿಗಳಾಗಿ ಬದಲಾವಣೆ ಹೊಂದಿದ ಸಾಧ್ಯತೆ ಇದೆ. ತೆಲ್ಲಿಗ ಸ್ಥಾನಾಚಾರ್ಯ[82] ಎಂಬಂಥ ಪ್ರಯೋಗಗಳು ತೆಲ್ಲಿಗರು ಆಗಮೋಕ್ತ ಪೂಜೆಯ ಮೂಲಕ ತಮ್ಮ ಧಾರ್ಮಿಕ ಸ್ಥಾನಮಾನವನ್ನು ಸ್ಥಾಪಿಸಿಕೊಂಡು ಸಮಕಾಲೀನ ಶೈವ ಸಂಪ್ರದಾಯದಲ್ಲಿ ಸ್ಥಾನ ಪಡೆದುಕೊಂಡ ವಿಷಯವನ್ನು ಸೂಚಿಸುತ್ತದೆ.

ಶಿಲ್ಪಿಗಳ ಕುರಿತು ಶಾಸನಗಳಿಂದ ಅವರು ಅಕ್ಕಸಾಲಿಗಳು, ಕಮ್ಮಾರರು, ಬಡಗಿಗಳು, ಶಿಲಾಶಾಸನಗಳನ್ನು ಕೊರೆಯುವ ಕೆಲಸ ನಿರ್ವಹಿಸಿದ್ದು ಕಂಡುಬರುತ್ತದೆ. ಅಂದರೆ ಜೀವನ ನಿರ್ವಹಣೆಗಾಗಿ ಚಿನ್ನ ಬೆಳ್ಳಿಯ ಕೆಲಸ, ಕಬ್ಬಿಣದ ಕೆಲಸ, ಮರಗೆಲಸಗಳನ್ನು ಮಾಡುತ್ತಿದ್ದ ಅಕ್ಕಸಾಲಿಗಳು, ಕಮ್ಮಾರರು ಮತ್ತು ಬಡಗಿಗಳು ಶಿಲಾಕಾರ್ಯವನ್ನು ಬಲ್ಲವರಾಗಿರುತ್ತಿದ್ದರು. ಬಹುಶಃ ಅಕ್ಕಸಾಲಿ, ಬಡಗಿ, ಕಮ್ಮಾರ, ಕಂಚುಗಾರ ಮತ್ತು ಶಿಲ್ಪಿ ಎಂಬ ಪಂಚಾಳರು ಐದು ವೃತ್ತಿಗಳನ್ನು ಐದೂ ಜನರು ತಿಳಿದುಕೊಂಡಿದ್ದರು. ಶಾಸನಗಳಿಂದ ಈ ಶಿಲ್ಪಿಗಳ ಪರಿಶ್ರಮ, ಕಲಾಭಿಜ್ಞತೆ, ಕಲಾವೈವಿಧ್ಯ ಮತ್ತು ಸೂಕ್ಷ್ಮತೆಗಳು ತುಂಬಿ ತೋರುತ್ತವೆ. ಇಲ್ಲಿ ಒಬ್ಬ ಪದಕ ಮಕುಟ ಕೇಯೂರ ರಚನೆಯಲ್ಲಿ ಪ್ರವೀಣ, ಇನ್ನೊಬ್ಬ ಪುಟದೊಳು ಇಡೀ ಗೋಗ್ರಹಣ ಕಥೆಯನ್ನು ಬಿಡಿಸುವ ಸೂಕ್ಷ್ಮಜ್ಞ, ಮತ್ತೊಬ್ಬ ಸರಸ್ವತಿಯ ಕೊರಳ ಮುತ್ತಿನಂತೆ ಕಲ್ಲಿನಲ್ಲಿ ಮುದ್ದಾದ ಅಕ್ಷರ ಬಿಡಿಸುವವನು. ಪುಲಿಗೆರೆಯ ಅಯ್ಯಣನಂತೂ ಕಟ್ಟಿಗೆ, ದಂತಚಿತ್ರ, ಇತ್ಯಾದಿ ಶಾಸ್ತ್ರಕೋವಿದ.

ಹೀಗೆ ವೈವಿಧ್ಯಪೂರ್ಣ ಕಲಾರಚನೆಯಲ್ಲಿ ತೊಡಗಿದ್ದ ಶಿಲ್ಪಿಗಳ ಸಾಮಾಜಿಕ ಸ್ಥಾನಮಾನ ಉತ್ತಮವಾಗಿತ್ತು ಎಂದೇ ಹೇಳಬಹುದು.

ಮಾಲೆಗಾರರು ತಮ್ಮ ನಿಸ್ವಾರ್ಥ ಮನಿಸ್ಸಿನಿಂದ ದೇವರಿಗೆ ದಾನಧರ್ಮಗಳು ಮಾಡಿರುವ ವಿಷಯಗಳು ಶಾಸನಗಳಿಂದ ತಿಳಿದುಬರುತ್ತವೆ. ಮೇದರು ಹಾಗೂ ಚಮ್ಮಾರರ ಕುರಿತು ಶಾಸನಗಳಿಂದ ಈ ರೀತಿಯ ವಿಷಯಗಳು ಗೊತ್ತಾಗುವುದಿಲ್ಲ.

ಒಟ್ಟಿನಲ್ಲಿ ಶಾಸನಗಳ ಹಿನ್ನೆಲೆಯಿಂದ ಕುಶಲಕರ್ಮಿಗಳ ಸ್ಥಾನಮಾನದ ಕುರಿತು ವಿಶ್ಲೇಷಿಸಿದಾಗ ನೇಕಾರರು, ಕಮ್ಮಾರರು ಹಾಗೂ ತೆಲ್ಲಿಗರ ಕುರಿತು ಹೆಚ್ಚಿನ ಶಾಸನಗಳಿವೆ. ಈ ಶಾಸನಗಳಿಂದ ಇವರು ಉತ್ತಮವಾದ ಸಾಮಾಜಿಕ ಸ್ಥಾನಮಾನ ಹೊಂದಿದ್ದು, ಆರ್ಥಿಕವಾಗಿ ಏಳಿಗೆ ಹೊಂದಿದ ವಿಷಯಗಳು, ಜೊತೆಗೆ ಉಪನಯನ ಮೊದಲಾದ ಸಂಸ್ಕಾರಗಳನ್ನು ರೂಢಿಸಿಕೊಂಡಿದ್ದು, ದೇವಾಲಯವನ್ನು ತಾವೇ ಸ್ವತಃ ಕಟ್ಟಿಸಿದ್ದು, ಅಲ್ಲಿ ಆಚಾರ್ಯರುಗಳನ್ನು ನೇಮಿಸಿ,

ಅಲ್ಲದೆ ಬೇರೆ ಬೇರೆ ರೀತಿಯ ದಾನ ನೀಡಿದ ವಿವರಗಳು ಇತ್ಯಾದಿ ಅಂಶಗಳಿಂದ ಇವರು ಸಾಮಾಜಿಕವಾಗಿ ಬೆಳವಣಿಗೆ ಹೊಂದಿದ್ದು ಕಂಡುಬರುತ್ತದೆ. ಮಧ್ಯಕಾಲದ ವಸತಿಗಳಲ್ಲಿ ಉತ್ಕರ್ಷ ಹೊಂದಿದ ವೃತ್ತಿಪರರುಗಳಾಗಿದ್ದರು. ಉಳಿದ ಕುಶಲ ಕರ್ಮಿಗಳು ಬಹುಶಃ ಮಧ್ಯಮ ಹಂತದಲ್ಲಿ ಇದ್ದರು.

## 5.8. ಮತಧರ್ಮ

ಮಧ್ಯಕಾಲದಲ್ಲಿ ಭಕ್ತಿ ಮತ್ತು ಪೂಜಾಪಂಥಗಳು ತೀರಾ ಚಲನಶೀಲವಾಗಿ ತಮ್ಮ ಪ್ರಭುತ್ವದ ಮಾದರಿಗಳನ್ನು ನಿರ್ಮಿಸುತ್ತಿದ್ದಾಗ ಒಂದು ಹಂತದಲ್ಲಿ ದೇವಾಲಯ ಸಂಸ್ಕೃತಿ ರೂಪು ತಳೆಯಿತು.

ಈ ವೃತ್ತಿಪರ ಕುಶಲಕರ್ಮಿಗಳಲ್ಲಿ ಶಿವೋಪಾಸಕರು, ವಿಷ್ಣುವಿನ ಉಪಾಸಕರು, ಬ್ರಹ್ಮನ ಉಪಾಸಕರು, ಜಿನೋಪಾಸಕರು, ಕಾಳಿಯ ಆರಾಧಕರೂ ಇದ್ದರು. ಇದರಿಂದ ಜೈನ ಮತೀಯರು, ಕೆಲವರು ವೈಷ್ಣವರು, ಕೆಲವರು ವೀರಶೈವರೂ ಆಗಿದ್ದು ಬಹುಮಂದಿ ಕಾಳಾಮುಖ ಶೈವಪಂಥಿಯರೂ ಆಗಿದ್ದಿರಬಹುದು.

12ನೇ ಶತಮಾನದ ಬಾಚಿ ಕಾಯಕದ ಬಸವಣ್ಣನೆಂಬ ವಚನಕಾರನು ತನ್ನ ಅಂಕಿತವನ್ನು 'ಬಸವಪ್ರಿಯ ವಿಶ್ವಕರ್ಮಟಕ್ಕೆ ಕಾಳಿಕಾ ವಿಮಲ ರಾಜೇಶ್ವರ ಲಿಂಗ'[83] ಎಂದು, ಈತನ ಪತ್ನಿ ಕಾಳವ್ವೆಯು 'ಕರ್ಮಹರ ಕಾಳೇಶ್ವರಾ'[84] ಎಂದೂ ಉಕ್ತಿಸುವುದರಿಂದ ವಿಶ್ವಕರ್ಮ ಬಡಗಿಗಳು ಕಾಳಿಕಾದೇವಿಯನ್ನು ಪೂಜಿಸುತ್ತಿದ್ದರು ಎಂದು ತಿಳಿಯಬಹುದಾಗಿದೆ. ಬಡಗಿಗಳಲ್ಲದೆ ಕಂಚುಗಾರರೂ ಕೂಡ ಕಾಳಿಕಾದೇವಿಯ ಆರಾಧಕರಾಗಿದ್ದನ್ನು ಬಸವಣ್ಣ ತನ್ನೊಂದು ವಚನದಲ್ಲಿ ಉಲ್ಲೇಖಿಸುತ್ತಾನೆ.[85] ಇದೇ ವಚನವು ಮಾಲೆಗಾರರು ಬ್ರಹ್ಮನ ಉಪಾಸಕರಾಗಿದ್ದನ್ನು ತಿಳಿಸುತ್ತದೆ.

ಡಾ. ಕೆಲ್ಲೆಸನ್ ಕೋಲಿಯರ್[86] ಅವರು ಹೊಯ್ಸಳ ಕಾಲದ ಶಿಲ್ಪಿಗಳು ಭರಮಯ್ಯ, ಹರಿಯೋಜ, ಸೂರಿಯಾಚಾರಿ ಎಂಬುದಾಗಿ ವೈಷ್ಣವ ಮತೀಯ ಹೆಸರುಗಳನ್ನು ಇಟ್ಟುಕೊಂಡಿರುವುದನ್ನು ನೋಡಿ ಅವರಲ್ಲಿ ಕೆಲವರು ವೈಷ್ಣವ ಮತೀಯರಾಗಿದ್ದರು ಎಂದು ಹೇಳುತ್ತಾರೆ. ಆದರೆ ಇಂಥ ಹೆಸರುಗಳು ಎರಡು ಮೂರು ಮಾತ್ರ ಇರುವುದರಿಂದ ವೈಷ್ಣವ ಮತೀಯ ಶಿಲ್ಪಿಗಳ ಸಂಖ್ಯೆ ತುಂಬ ಕಡಿಮೆ ಇತ್ತು ಎಂದು ಹೇಳಬಹುದು.

ಕ್ರಿ.ಶ. 1207ರ ಕಂದಗಲ್ ಶಾಸನವು[87] ತೆಲ್ಲಿಗರು ತೆಲ್ಲಿಗೇಶ್ವರ ದೇವಾಲಯವನ್ನು ಕಟ್ಟಿ ಆ ದೇವರಂಗಭೋಗರಂಗಭೋಗಕ್ಕೆ ದಾನ ಮಾಡಿದ್ದನ್ನು ತಿಳಿಸುತ್ತದೆ.

ಕೆಲ್ಲಂಗೆರೆಯ ಶಾಸನವೊಂದು[88] ಆ ಊರಿನ ಗ್ರಾಮೇಶ್ವರ ದೇವಾಲಯವನ್ನು ತೆಲ್ಲಿಗ ಸ್ತ್ರೀಯೊಬ್ಬಳು ಕಟ್ಟಿಸಿದ ವಿಷಯಗಳನ್ನು ತಿಳಿಸುತ್ತದೆ. ಹೀಗೆ ಅನೇಕ ಶಾಸನಗಳು ತೆಲ್ಲಿಗರು ತೆಲ್ಲಿಗೇಶ್ವರ ದೇವಾಲಯವನ್ನು ಕಟ್ಟಿಸಿದ ವಿವರಗಳು ನಮಗೆ ಸಿಗುತ್ತವೆ. ಕೆಲವು ಶಾಸನಗಳಲ್ಲಿ ಗಳಗೇಶ್ವರ ದೇವರು, ವೀರಭದ್ರ ದೇವರು, ದುರ್ಗಾದೇವತೆ ಮುಂತಾದ ದೇವರಿಗೆ ದತ್ತಿ ಬಿಟ್ಟದ್ದು ಕಂಡುಬರುತ್ತದೆ. ಅಪರೂಪಕ್ಕೆ ಇವರು ಜಿನಾಲಯ, ಬೌದ್ಧ ವಿಹಾರಗಳನ್ನು ಪೋಷಿಸಿದ ವಿಷಯವು ತಿಳಿದುಬರುತ್ತದೆ. ಹಾಗಾಗಿ ತೆಲ್ಲಿಗ ಕುಲದವರು ಶೈವ, ಬೌದ್ಧ, ಜೈನ ಮುಂತಾಗಿ ನಾನಾ ಮತಾವಲಂಬಿಗಳಾಗಿದ್ದರೆಂದು ಹೇಳಬಹುದು. ಆದರೆ ಬಹುತೇಕವಾಗಿ 12-13ನೇ ಶತಮಾನದಲ್ಲಿ ತೆಲ್ಲಿಗರೆಲ್ಲರೂ ಶೈವ ಮತದ ತೆಕ್ಕೆಯೊಳಗೆ ಬರುತ್ತಿದ್ದ ಪ್ರಕ್ರಿಯೆ ಶಾಸನಗಳಲ್ಲಿ ವ್ಯಕ್ತವಾಗುತ್ತದೆ. ಇವರು ಕಟ್ಟಿಸಿದ ಈಶ್ವರ ದೇವಾಲಯಕ್ಕೆ ಒಂದಿಲ್ಲೊಂದು ಶೈವ ಕಾಳಾಮುಖ ಮಠದ ಉಸ್ತುವಾರಿಯ ವ್ಯವಸ್ಥೆ ಮಾಡುತ್ತಿದ್ದರು. ಈ ರೀತಿ ತೆಲ್ಲಿಗರ ದೇವರಿಗೆ ಆಗಮೋಕ್ತ ಪೂಜಾಕ್ರಮಗಳನ್ನು ನಡೆಸುವ ನಿಮಿತ್ತವಾಗಿ ತೆಲ್ಲಿಗ ಸಮುದಾಯಗಳು ಈ ಮಠಗಳ ಅನುಯಾಯಿಗಳಾಗಿ ಬದಲಾವಣೆ ಹೊಂದಿದ ಸಾಧ್ಯತೆ ಇದೆ. ತೆಲ್ಲಿಗ ಸ್ಥಾನಾಚಾರ್ಯ ಎಂಬಂಥ ಪ್ರಯೋಗಗಳು ತೆಲ್ಲಿಗರು ಆಗಮೋಕ್ತ ಪೂಜೆಯ ಮೂಲಕ ತಮ್ಮ ಧಾರ್ಮಿಕ ಸ್ಥಾನಮಾನವನ್ನು ಸ್ಥಾಪಿಸಿಕೊಂಡು ಸಮಕಾಲೀನ ಶೈವ ಸಂಪ್ರದಾಯದಲ್ಲಿ ಸ್ಥಾನ ಪಡೆದುಕೊಂಡ ವಿಷಯವನ್ನು ಸೂಚಿಸುತ್ತದೆ.[89]

ಬೆಳಗಾವಿಯ ಶಾಸನವೊಂದರಲ್ಲಿ[90] ಅದೇ ವೇಣುಗ್ರಾಮ ಸ್ಥಳದ ಚಿನ್ನದ ವ್ಯಾಪಾರಿಗಳು, ದೂಸಿಗ ಪರದರು (ಬಟ್ಟೆ ವ್ಯಾಪಾರಿಗಳು) ತೆಲ್ಲಿಗರು, ದಿಂಕಸಾಲಿಗರು ಮೊದಲಾದವರೆಲ್ಲ ಸೇರಿ ಶಾಂತಿನಾಥ ದೇವರ ಬಸದಿಗೆ ದಾನ ಕೊಟ್ಟ ಸಾಕಷ್ಟು ದಾನದ ವಿವರಗಳು ಇದರಲ್ಲಿವೆ.

ಈ ಶಾಸನದಿಂದ ಅಕ್ಕಸಾಲಿಗರು, ತೆಲ್ಲಿಗರು, ನೇಕಾರರು, ಜಿನಾಲಯಗಳಿಗೂ ಕೂಡ ನಡೆದುಕೊಳ್ಳುತ್ತಿದ್ದದ್ದು ಗೊತ್ತಾಗುತ್ತದೆ.

ಹಾಗೆಯೇ ಹೊಯ್ಸಳ ಬಲ್ಲಾಳರಾಯನ ಕಾಲದ ಕ್ರಿ.ಶ. 1003ರ ಕೊಲ್ಲಾಪುರದ ತಾಮ್ರಶಾಸನದಲ್ಲಿ '... ಆ ಊರಿಂಗೆ ಹಿಟ್ಟಿನ ತಳವಾರಿ ಮಾರಯನಾಯಕ ಆತಂಗೆ ಮತ್ತರು ೭ ... ಹಿಟ್ಟಕಾರ ಬಡಗಿ ಹಿಲೇಜಗೆ ಮತ್ತರು ೪, ಹಿಟ್ಟಿನ ಕಂಮ್ಮಾರ ದೇವೋಜಂಗೆ ಮತ್ತರು ೪, ಹಿಟ್ಟಿನ ಅಕ್ಕಸಾಲೆ ಪಾರಿಸೋಜಂಗೆ ಮತ್ತರು ೪ .. '[91] ಎಂದು ಮುಂತಾಗಿ ಭೂಮಿದಾನ ಪಡೆದವರ ವಿವರಗಳಿವೆ.

ಪಾರಿಸೋಜ ಎಂಬ ಹೆಸರಿನಿಂದ ಆ ಅಕ್ಕಸಾಲಿಗನು ಜೈನಮತದವನಾಗಿದ್ದನೆಂದು ವಿದಿತವಾಗುತ್ತದೆ.

ಕ್ರಿ.ಶ. 1007ರ ಲಕ್ಕುಂಡಿಯ ಶಾಸನವು 'ಪರಮಶ್ರೀ ಜಿನಧರ್ಮಾಂಬರ ರವಿಸಿರಿಪಾಳಸೆಟ್ಟಿ-ಯಾತ್ಮಜನುಧ್ಯೆಚ್ಚರಿತಂ ಬಾಹುಬಲಿ ಸವಿಸ್ತರದಿನ್ದಂ ಬರೆದನೆನ್ದೊ ಡಾರ್ಪೊಗಳರಿದಂ'[92], ಕ್ರಿ.ಶ. 1103ರ ಮೊರಬ ಶಾಸನವು '... ಸೇವಬೋವ ಅಪ್ಪಣ್ಣಯ್ಯನ (ಬರ) ಹಂ ವರ್ದ್ಧಮಾನವೋಜರ ಬೆಸಂ'[93] ಕ್ರಿ.ಶ. 1080ರ ತುಂಬರಹೊಸೂರು ಶಾಸನವು 'ಜಿನಪಾದಾರಾಧಕಂ ಪದ್ಮೋಜ'[94] ಕ್ರಿ.ಶ. 1146ರ ಅಮ್ಮಿನಬಾವಿ ಶಾಸನವು 'ಜಿನವರ್ಮ್ಮೋಜನ ಕಣ್ಡರಣೆ'[95] ಈ ಮೊದಲಾದ ಶಾಸನೋಲ್ಲೇಖಗಳಿಂದ ಶಿಲ್ಪಿಗಳಲ್ಲಿಯೂ ಜಿನೋಪಾಸಕರಿದ್ದದ್ದು ಗೊತ್ತಾಗುತ್ತದೆ.

ಹೊಯ್ಸಳರ ಕಾಲದ ಕುಶಲ ಕೆಲಸಗಾರರಲ್ಲಿ ಬಹಳ ಮಂದಿ ಶೈವ ಪಂಥಿಯರಾಗಿದ್ದರು. ಆಗ ಶೈವ ಪಂಥದ ಮತ್ತೊಂದು ತುಂಬ ಪ್ರಬಲವಾಗಿದ್ದ ಶಾಖೆ ಕಾಳಾಮುಖ ಶಾಖೆ. ಸಾಕಷ್ಟು ಮಂದಿ ಕುಶಲ ಕೆಲಸಗಾರರು ಈ ಕಾಳಾಮುಖ ಪಂಥಕ್ಕೆ ಸೇರಿದವರೂ ಆಗಿದ್ದರು. ಬೇಲೂರಿನ ಪ್ರಸಿದ್ಧ ಶಿಲ್ಪಿಯಾದ ದಾಸೋಜನ ಮಗ ಚಾವಣನು ತಾನು ಬಳ್ಳಿಗಾವೆಯ ಧರ್ಮ್ಮೇಶ್ವರ ದೇವರ ಪಾದಪಂಕಜ ಭ್ರಮರನಾಗಿದ್ದುದಾಗಿ ಹೇಳಿಕೊಂಡಿದ್ದಾನೆ. ಅಲ್ಲಿಯೇ ಅದೇ ಕಾಲದಲ್ಲಿ ಕೆಲಸ ಮಾಡಿದ ಮತ್ತೊಬ್ಬ ಮುಖ್ಯ ಶಿಲ್ಪಿ ನಾಗೋಜನು ತಾನು ಗದುಗಿನ ಸ್ವಯಂಭು ತ್ರಿಕೂಟೇಶ್ವರ ದೇವರಿಗೆ ಸೇರಿದವನು ಎಂದು ಹೇಳಿಕೊಂಡಿದ್ದಾನೆ. ಬಳ್ಳಿಗಾವೆಯ ಧರ್ಮೇಶ್ವರ ದೇವರ ದೇವಸ್ಥಾನ ಮತ್ತು ಗದುಗಿನ ತ್ರಿಕೂಟೇಶ್ವರ ದೇವಸ್ಥಾನಗಳು ಅಂದು ಪ್ರಸಿದ್ಧವಾಗಿದ್ದ ಕಾಳಾಮುಖ ಪಂಥೀಯರ ಕೇಂದ್ರಗಳಾಗಿದ್ದವು ಎಂದು ಗುರುತಿಸುವ ಡಾ. ಕೆಲ್ಲಿಸನ್ ಕೋಲಿಯರ್[96] ಅವರು ಈ ಇಬ್ಬರು ಶಿಲ್ಪಿಗಳು ಕಾಳಾಮುಖ ಪಂಥಕ್ಕೆ ಸೇರಿದವರು ಎಂದು ಹೇಳುತ್ತಾರೆ.

ಕೆಲವು ಶಾಸನಗಳಲ್ಲಿ 'ರಾಶಿ', 'ರಾಸಿ', 'ಜೀಯ', 'ಏಕ್ಕೋಟಿ', 'ಪಂಡಿತ' ಎಂಬ ಉಪನಾಮಗಳನ್ನು ಹೊಂದಿರುವ ಹೆಸರುಗಳಿಂದ ಕೂಡಿದ ವ್ಯಕ್ತಿಗಳು ಶಿಲ್ಪಿ ಕರ್ಮವನ್ನು ಮಾಡಿದ್ದಾರೆ.

ಬೈರೋಜ, ಮಲ್ಲಿತಮ್ಮ, ಮಸಣಿತಮ್ಮ, ನಂಜಯ್ಯ, ಮಾಬೋಜ ಮುಂತಾದ ಹಲವಾರು ಶಿಲ್ಪಿಗಳ ಹೆಸರುಗಳಿಂದ ಶೈವ ಪಂಥ ಈ ಕಾಲದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದಿದ್ದು ಗೊತ್ತಾಗುತ್ತದೆ.

ಶೈವ, ವೈಷ್ಣವ, ಜೈನ ಮತ್ತು ಬೌದ್ಧ ಎಂಬ ಚತುಸ್ಸಮಯಗಳು ಲಕ್ಕುಂಡಿಯಲ್ಲಿದ್ದವು. ಇದು ಪರಮತ ಸಹಿಷ್ಣುತೆಯನ್ನು ತೋರಿಸುತ್ತದೆ. ಕ್ರಿ.ಶ. 11-12ನೆಯ ಶತಮಾನಗಳಲ್ಲಿ ಲಾಕುಳ ಪಾಶುಪತ ಪಂಥವು ವಿಶೇಷ ಪ್ರಚಾರದಲ್ಲಿತ್ತು.

ಶೈವ ಮತ್ತು ಜೈನರ ನಡುವೆ ಕೆಲವೊಮ್ಮೆ ಮನಸ್ತಾಪವಾಗುತ್ತಿತ್ತು. ಏಕಾಂತದ ರಾಮಯ್ಯನು ಶಿರಸ್ಸು ಪವಾಡವನ್ನು ಮಾಡಿ ಜೈನಮೂರ್ತಿಗಳನ್ನು ನಾಶಪಡಿಸಿದನೆಂದು ಅಬ್ಬಲೂರಿನ ಶಾಸನವು ಹೇಳುತ್ತದೆ. ಈ ಪ್ರಕಾರ ಪವಾಡ ಮಾಡಿ ವೀರ ಸೋಮನಾಥ ದೇವಾಲಯವನ್ನು ಕಟ್ಟಿಸಿದ್ದನ್ನು ಕಂಡು ಕದಂಬ ಕಾಮದೇವನು ಏಕಾಂತದ ರಾಮಯ್ಯನನ್ನು ಹಾನುಗಲ್ಲಿಗೆ ಕರೆದುಕೊಂಡು ಹೋಗಿ ಮರ್ಯಾದೆ ಮಾಡಿದ್ದಾನೆ ಮತ್ತು ಮಳವಳ್ಳಿ ಎಂಬ ಹಳ್ಳಿಯನ್ನು ವೀರ ಸೋಮನಾಥ ದೇವರಿಗೆ ದಾನ ಮಾಡಿದ್ದಾನೆ.

ಶ್ರೀ ವೈಷ್ಣವರಿಗೂ ಮತ್ತು ಜೈನರಿಗೂ ವಿರೋಧ ಬಂದಾಗ ವಿಜಯನಗರದ ಎರಡನೆಯ ಬುಕ್ಕರಾಯನು ಆ ಎರಡೂ ಮತೀಯರಲ್ಲಿ ರಾಜೀ ಮಾಡಿಸಿದ ಸಂಗತಿಯನ್ನು ಶ್ರವಣಬೆಳಗೊಳದ ಒಂದು ಶಾಸನವು ತಿಳಿಸುತ್ತದೆ. ಜೈನ ಸಮಯಕ್ಕೂ ಶ್ರೀ ವೈಷ್ಣವ ಸಮಯಕ್ಕೂ ಭೇದವಿಲ್ಲ. ಜೈನ ದರ್ಶನಕ್ಕೆ ಆದ ಹಾನಿ ವೃದ್ಧಿ ವೈಷ್ಣವ ದರ್ಶನಕ್ಕೆ ಹಾನಿ ವೃದ್ಧಿಯಾದಂತೆ ; ವೈಷ್ಣವ ಸಮಯವು ಜೈನದರ್ಶನವನ್ನು ರಕ್ಷಿಸಿಕೊಂಡು ಹೋಗಬೇಕೆಂದು ಬುಕ್ಕರಾಯನು ಆದೇಶವಿತ್ತಿದ್ದಾನೆ.[97]

ವಚನಕಾರರ ಕಾಲದಲ್ಲಿ ಜೈನರನ್ನು ಹಿಮ್ಮೆಟ್ಟಿಸುವಂಥಹ ಕಾರ್ಯಗಳು ನಡೆದವು. ಈ ಅವಧಿಯಲ್ಲಿ ಶಿವಮೊಗ್ಗ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಅನೇಕ ಜೈನ ದೇವಾಲಯಗಳು ನಾಶವಾದವಲ್ಲದೇ ಅವುಗಳು ಶೈವದೇವಾಲಯಗಳಾಗಿ ಪರಿವರ್ತನೆಯಾದವು. ಹರಿಹರನ ಕಾಲದಿಂದಲೇ ವೀರಶೈವ ಪರಂಪರೆ ಹೆಚ್ಚು ಪ್ರಬುದ್ಧವಾಯಿತು.

ಒಟ್ಟಿನಲ್ಲಿ ಆ ಕಾಲದಲ್ಲಿ ಮತ ಶ್ರದ್ಧೆಯು ಎಲ್ಲಾ ವೃತ್ತಿಪರರಿಗೂ ತೆರೆದ ಆಯ್ಕೆಯಾಗಿತ್ತು ಎಂಬುದು ಸೂಚಿತವಾಗುತ್ತದೆ. ಉದ್ಯೋಗಗಳು ಜಾತಿ ಅಥವಾ ಧರ್ಮದ ಮೇಲೆ ಆಧರಿಸಲ್ಪಟ್ಟಿಲ್ಲವೆಂಬುದು ಸೂಚಿತವಾಗುತ್ತದೆ.

## ಪರಾಮರ್ಶನ ಗ್ರಂಥಗಳು


1. ಚಿದಾನಂದಮೂರ್ತಿ. ಎಂ., ***ಬಸವಣ್ಣ – ಕರ್ನಾಟಕ : ಭಾರತ,*** ಸ್ವಪ್ನ ಬುಕ್ ಹೌಸ್, ಬೆಂಗಳೂರು, 2004, ಪು. 176-179.

2. ***ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ,*** (ಸಂ) ಪುಟ್ಟಪ್ಪ ಕೆ.ವಿ. 'ಜಾತಿಯೊಳೆಲ್ಲಮುತ್ತಮದ ಜಾತಿಯ ವಿಪ್ರಕುಲಂಗೆ', ಪ್ರಸಾರಾಂಗ, ಮೈಸೂರು ವಿ.ವಿ., ಮೈಸೂರು, 1977, ಪು. 402 (14-48).

3. EC X (Old), ಅಕೆ 149, ಸು. ಕ್ರಿ.ಶ. 1142, ಪು. 193.

4. ***ಕುಮಾರವ್ಯಾಸ ಮಹಾಕವಿಯ ಕರ್ನಾಟ ಭಾರತ ಕಥಾಮಂಜರಿ.*** (ಸಂ) ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್, 'ವಿಪ್ರಜಾತಿಗೆ ಹುತವಹನು ವರ್ಣತ್ರಯಕೆ ಭೂ ದೇವರುಗಳಿರಲು ಕ್ಷಿತಿಯೊಳತಿಶಯವಾವುದೈ ಭೂಪತಿಯೆ ಕೇಳಿಹಪರಕೆ ಸುಖ ಸಂಗತಿಯನೊಲುವೊಡೆ ಪೂಜಿಸುವುದೈ ಬ್ರಾಹ್ಮಣೋತ್ತಮರ', ಪ್ರಕಾಶನ: ಮೈಸೂರು ಸಂಸ್ಥಾನದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಬೆಂಗಳೂರು, 1958, ಪು. 318 (ಉದ್ಯೋಗ ಪರ್ವ).

5. ***ಬ್ರಹ್ಮಶಿವ ವಿರಚಿತ ಸಮಯ ಪರೀಕ್ಷೆ*** (ಸಂ) ಕುಲಕರ್ಣಿ. ಬಿ.ಎಸ್., ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ, 1958, ಪು. 272.

6. ಅದೇ, ಪು. 30.

7. Hegde Rajaram, '*The Jaina Tradition and Regional Society in Early Kannada Literature*' Deccan Studies, Vol. V, Number 1, Jan-June 2007, Centre for Deccan Studies, Hyderabad, India, pp. 44-49.

8. EC VIII (Old), ಸೊ 268, ಕ್ರಿ.ಶ. 1245, ಪು. 118.

9. ***ಸಿದ್ಧರಾಮೇಶ್ವರನ ವಚನ ಸಂಪುಟ.*** ವಚನ 1701<br>(ಚತುರ್ವರ್ಣಿಯಾದಡೇನು,<br>ಚತುರ್ವರ್ಣಾತೀತನೆ ವೀರಶೈವ ನೋಡಾ<br>ಚತುರ್ವೇದಿಯಾದಡೇನು,<br>(ಚರಮ) ದೇಹವಳಿಯದವನೆ ಚಾಂಡಾಲ ನೋಡಾ), ಕ.ಪು.ಪ್ರಾ. ಬೆಂಗಳೂರು, 2001, ಪು. 482.

10. ***ಸಂಕೀರ್ಣ ವಚನ ಸಂಪುಟ 1,*** ಒಕ್ಕಲಿಗ ಮುದ್ದಣ್ಣಗಳ ವಚನ, 1744<br>(ವೇದಶಾಸ್ತ್ರವನೋದುವುದಕ್ಕೆ ಹಾರುವನಲ್ಲ<br>ಇರಿದು ಮೆರೆವುದಕ್ಕೆ ಕ್ಷತ್ರಿಯನಲ್ಲ<br>ವ್ಯವಹಿಸುವುದಕ್ಕೆ ವೈಶ್ಯನಲ್ಲ,<br>ಉಳುವ ಒಕ್ಕಲ ಮಗನ ತಪ್ಪ ನೋಡದೆ ಒಪ್ಪುಗೊಳ್ಳಯ್ಯಾ,<br>ಕಾಮಭೀಮ ಜೀವಧನದೊಡೆಯ ನೀನೆ ಬಲ್ಲೆ), ಕ.ಪು.ಪ್ರಾ., ಬೆಂಗಳೂರು, 2001, ಪು. 662.

11. **EI XIV**, ನಂ. 14, ಲಕ್ಷ್ಮೇಶ್ವರ, ಗದಗ (ತಾ), ವಿಕ್ರಮಾದಿತ್ಯನ ಕಾಲ ಪು. 190-191. 'ಓಂ ಸ್ವಸ್ತಿ ಶ್ರೀ ವಿಕ್ರಮಾದಿತ್ಯ ಯುವರಾಜರ್ ಪೊರಿಗೆಱೆಯಾ ಮಹಾಜನಕ್ಕುಂ ನಗರಕ್ಕುಂ ಹದಿನೆಂಟುಂ ಪ್ರಕೃತಿಗಳ್ಗುಂ ಕೊಟ್ಟ ಆಚಾರ ವ್ಯವಸ್ಥೆ' ಪುಲಿಗೆರೆಯ ಜನರನ್ನು ಈ ಶಾಸನ ಬ್ರಾಹ್ಮಣ ವರ್ಗ, ವರ್ತಕ ವರ್ಗ ಮತ್ತು ಹದಿನೆಂಟು ಪ್ರಕೃತಿ (ಅಥವಾ ಜಾತಿ) ಎಂದು ವಿಂಗಡಿಸಿದೆ.

12. ***ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ,*** (ಸಂ) ಪುಟ್ಟಪ್ಪ ಕೆ.ವಿ., ಪೂರ್ವೋಕ್ತ, ಪು. 402, ***ಬಸವಣ್ಣನವರ ವಚನ ಸಂಪುಟ***, ವಚನ 711, ಪೂರ್ವೋಕ್ತ, ಪು. 178.

13. ***ಸಂಕೀರ್ಣ ವಚನ ಸಂಪುಟ 4***, ಹಾವಿನಹಾಳ ಕಲ್ಲಯ್ಯಗಳ ವಚನ, 1162
(ಬ್ರಾಹ್ಮಣ ಮೊದಲಾಗಿ ಶ್ವಪಚ ಕಡೆಯಾಗಿ, ಎಲ್ಲರಿಗೆಯಾ ಜನನವೊಂದೆ.
ಆಹಾರ ನಿದ್ರೆ ಭಯ ಮೈಥುನವೊಂದೆ, ಪುಣ್ಯಪಾಪವೊಂದೆ, ಸ್ವರ್ಗವೊಂದೆ,
ಬೇರೆಂಬ ಭಂಗಿತರು ನೀವು ಕೇಳಿರೆ!), ಕ.ಪು.ಪ್ರಾ., ಬೆಂಗಳೂರು, 2001, ಪು. 365.

14. ***ಸಂಕೀರ್ಣ ವಚನ ಸಂಪುಟ 1***, ಉರಿಲಿಂಗಪೆದ್ದಿಗಳ ವಚನ, 1535
(ಜಾತಿ ಅಜಾತಿಯೆಂದು ಅಷ್ಟಾದಶ ಜಾತಿಯೊಳಗೆ ಇಕ್ಕಲಾಗದು), ಪೂರ್ವೋಕ್ತ, ಪು. 555
***ಸಂಕೀರ್ಣ ವಚನ ಸಂಪುಟ 3***, ಮಡಿವಾಳ ಮಾಚಿದೇವರ ವಚನ 523, ಪು. 196.
(ಎಂಜಲ ತಿಂಬ ಜಡದೊಳಗೆ ಹದಿನೆಂಟು ಜಾತಿಯ ಎಂಜಲು ಭುಂಜಿಸಿ, ಉತ್ತಮರೆನಿಸಿಕೊಂಬ
ಭವಜೀವಿಗಳು ಕೇಳಿರೊ), ಹಾಗೂ ವಚನ 605, ಪು. 226 (ಜನ್ಮ ಜರೆ ಮರಣ
ಭವಭವಾಂತರದಲ್ಲಿ ತೊಳಲುವ, ನೂರೊಂದು ಕುಲ ಹದಿನೆಂಟು ಜಾತಿಗಿಕ್ಕಿದ)
***ಚೆನ್ನಬಸವಣ್ಣನವರ ವಚನ ಸಂಪುಟ***, ವಚನ 159, ಕ.ಪು.ಪ್ರಾ. ಬೆಂಗಳೂರು, 2001
(ಸೂಳೆಯ ಭಕ್ತಿ ಹದಿನೆಂಟು ಜಾತಿಯ ಎಂಜಲ ತಿಂದಿತ್ತು), ಪು. 48
***ಸಂಕೀರ್ಣ ವಚನ ಸಂಪುಟ 4,*** ಹಾವಿನ ಹಾಳ ಕಲ್ಲಯ್ಯಗಳ ವಚನ 1097
(ಮಿಕ್ಕ ಹದಿನೇಳು ಜಾತಿ ವಿಪ್ರರ ಕೈಯಲನುಗ್ರಹವ ಪಡೆದು), ಪು. 344.

15. ***ಭೀಮಕವಿ ಕೃತ ಬಸವ ಪುರಾಣ,*** ಸಂಪುಟ : 2, (ಸಂ) ಹಿರೇಮಠ ಆರ್.ಸಿ., 'ಸಲುವವಷ್ಟಾದಶವಿವರ ವರ್ಣಂಗಳಾದಿಯಲ್ಲಿ ಇಳೆಯೊಳಿವು ತಾನೀಗಲಾದವೆ', ಪ್ರಕಾಶಕರು : ಲಿಂಗಾಯಿತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ, 1966, ಪು. 828 (54-12)

16. ***ಸಂಕೀರ್ಣ ವಚನ ಸಂಪುಟ 2***, ಕನ್ನಡಿ ಕಾಯಕದ ಅಮ್ಮಿದೇವಯ್ಯನ ವಚನ 12
(ಉಭಯವನಿರಿದು ಕಾಯಕವನೊಡಗೂಡಿ ಮಾಡಬೇಕು. ಹದಿನೆಂಟು ಕಾಯಕ
ದೊಳಗಾದ, ನಾಲ್ಕು ಕಾಯಕ ಹೊರಗಾದ, ಮೂರು ಕಾಯಕ ಮುಂತಾದ
ಕಾಯಕದಂದವ ತಿಳಿದು), ಕ.ಪು.ಪ್ರಾ., ಬೆಂಗಳೂರು, 2001, ಪು. 6.

17. ***ಸಂಕೀರ್ಣ ವಚನ ಸಂಪುಟ 4,*** ಸೊಡ್ಡಳ ಬಾಚರಸನ ವಚನ 812, ಪೂರ್ವೋಕ್ತ, ಪು. 248.

18. ***ಸಂಕೀರ್ಣ ವಚನ ಸಂಪುಟ 1,*** ಅಂಬಿಗರ ಚೌಡಯ್ಯಗಳ ವಚನ 262, ಪೂರ್ವೋಕ್ತ, ಪು. 85.

19. *ಶ್ರೀ ವತ್ಸ ನಿಘಂಟು,* (ಸಂ) ವೆಂಕಟಾಚಲಶಾಸ್ತ್ರೀ ಟಿ.ವಿ., ಮೈಸೂರು, 1971, ಪು. 167-68.

20. *ಬಸವಣ್ಣನವರ ವಚನ ಸಂಪುಟ,* ವಚನ 590
(..... ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ
ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ.....), ಕ.ಪು.ಪ್ರಾ. ಬೆಂಗಳೂರು, 2001, ಪು. 148.

21. *ಸಂಕೀರ್ಣ ವಚನ ಸಂಪುಟ 2,* ಕನ್ನಡಿ ಕಾಯಕದ ಅಮ್ಮಿದೇವಯ್ಯನ ವಚನ 12
(...... ಹದಿನೆಂಟು ಕಾಯಕದೊಳಗಾದ, ನಾಲ್ಕು ಕಾಯಕ ಹೊರಗಾದ ಮೂರು ಕಾಯಕ
ಮುಂತಾದ ಕಾಯಕದಂದವ ತಿಳಿದು ಚೆನ್ನಬಸವಣ್ಣ ಸಾಕ್ಷಿಯಾಗಿ), ಪೂರ್ವೋಕ್ತ, ಪು. 6.

22. *ಸಂಕೀರ್ಣ ವಚನ ಸಂಪುಟ 1,* ಉರಿಲಿಂಗ ಪೆದ್ದಿಗಳ ವಚನ 1535, ಪೂರ್ವೋಕ್ತ, ಪು. 555.

23. ನಾರಾಯಣ, ಪಿ.ವಿ., *ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ,* ವೀರಶೈವ ಅಧ್ಯಯನ ಸಂಸ್ಥೆ, ಡಂಬಳ, ಗದಗ, 1983, ಪು. 66.

24. Verma Onkar Prasad, O.P., *The Yadavas and Their Times*, Vidharbha Samshodhan Mandal, Nagpur, 1970, pp. 228.

25. ನಾಗೇಗೌಡ, ಎಚ್.ಎಲ್., *ಪ್ರವಾಸಿ ಕಂಡ ಇಂಡಿಯಾ I,* ಪ್ರಸಾರಾಂಗ, ಮೈಸೂರು ವಿ.ವಿ., ಮೈಸೂರು, 1964, ಪು. 342.

26. Verma Onkar Prasad, O.P., *The Yadavas and Their Times,* Op. Cit., p. 552.

27. SII XX, ನಂ. 299, ಕಡ್ಲೆವಾಡ, ಸಿಂದಗಿ (ತಾ), 12ನೇ ಶ., ಪು. 334.

28. Stein Burton, *Peasant State and Society in Medieval South India*, Oxford University Press, Oxford, New York, Delhi, 1985, p. 201.

29. Hegde Rajaram, Op. Cit., pp. 44-49.

30. *ಬಸವಣ್ಣನವರ ವಚನ ಸಂಪುಟ,* ವಚನ 718, (ಆವ ಕುಲವಾದರೇನು? ಶಿವಲಿಂಗವಿದ್ದವನೆ ಕುಲಜನು, ಕುಲವನರಸುವರೆ ಶರಣರಲ್ಲಿ ಜಾತಿಸಂಕರವಾದ ಬಳಿಕ?) ಪೂರ್ವೋಕ್ತ, ಪು. 180.

31. ಅದೇ, ವಚನ 711, (ವಿಪ್ರ ಮೊದಲು, ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲನೊಂದೆ ಎಂಬೆ. ಹಾರುವ ಮೊದಲು, ಶ್ವಪಚ ಕಡೆಯಾಗಿ ಭವಿಯಾದವರನೆಲ್ಲರನೊಂಬೆ ಎಂಬೆ) ಪು. 178.
*ಸಂಕೀರ್ಣ ವಚನ ಸಂಪುಟ-4,* ಹಾವಿನಹಾಳ ಕಲ್ಲಯ್ಯಗಳ ವಚನ 1162, ಪು. 365.
(ಬ್ರಾಹ್ಮಣ ಮೊದಲಾಗಿ ಶ್ವಪಚ ಕಡೆಯಾಗಿ)
*ಸಂಕೀರ್ಣ ವಚನ ಸಂಪುಟ-2* ಜೇಡರ ದಾಸಿಮಯ್ಯನ ವಚನ 833, ಪು. 257.
(ಒಡೆಯನ ಪ್ರಾಣಕ್ಕೆ ಇದ್ದಿತ್ತೆ ಯಜ್ಞೋಪವೀತ ? ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೆ ಹಿಡಿಗೋಲ?)

32. ***ಸಂಕೀರ್ಣ ವಚನ ಸಂಪುಟ-4,*** ಹಾವಿನಹಾಳ ಕಲ್ಲಯ್ಯಗಳ ವಚನ 1143, ಪು. 359.

33. ***ಸಂಕೀರ್ಣ ವಚನ ಸಂಪುಟ-1,*** ಉರಿಲಿಂಗಪೆದ್ದಿಗಳ ವಚನ 1571, ಪು. 582.

34. ***ಚೆನ್ನಬಸವಣ್ಣನವರ ವಚನ ಸಂಪುಟ,*** ವಚನ 401
(ಅರಸನ ಹೆಸರಿಟ್ಟು ಅನಾಮಿಕನಂತೆ ನಾಮಕ್ಕರುಹರಲ್ಲದೆ ಪಟ್ಟಕ್ಕರುಹರಪ್ಪರೆ?), ಪೂರ್ವೋಕ್ತ, ಪು. 126.

35. ಚಿದಾನಂದಮೂರ್ತಿ. ಎಂ., ***ಬಸವಣ್ಣ - ಕರ್ನಾಟಕ : ಭಾರತ,*** ಪೂರ್ವೋಕ್ತ ಪು. 233.

36. ***ಸಂಕೀರ್ಣ ವಚನ ಸಂಪುಟ-1,*** ಉರಿಲಿಂಗಪೆದ್ದಿಗಳ ವಚನ 1547
(ಬಡಗಿ ಮಾಚಲದೇವಿಯ ಕುಲಜೆಯ ಮಾಡಿಹೆವೆಂದು
ಸತ್ತ ಕಪಿಲೆಯ ಕಡಿದು ಹಂಚಿ ತನ್ನ ಹೇಳಿತ್ತೆ ವೇದ?) ಪು. 565
***ಬಸವಣ್ಣನವರ ವಚನ ಸಂಪುಟ.*** ವಚನ 583
(ಬಡಗಿ ಮಾಚಲದೇವಿಯ ಕುಲಜೆಯ ಮಾಡಿಹೆವೆಂದು
ಹೊನ್ನ ಕಪಿಲೆಯ ರವಣಶಾಖದ ಉಚ್ಚಿಷ್ಟದ ಹಾಲಿನಿಂದ
ಕೂಳನಟ್ಟುಂಬವರನೇನೆಂಬೆ) ಪು. 146

37. ***ಬಸವಣ್ಣನವರ ವಚನ ಸಂಪುಟ.*** ವಚನ 613
(ಹಾರುವರೆಲ್ಲರೂ ನೆರೆದು ಶೂದ್ರನ ಹಾರುವನ ಮಾಡುವಲ್ಲಿ
ನಂದಿಮುಖವಿಲ್ಲದೆ ಮತ್ತೇನನೂ ಮಾಡಲಾಗದು.
ವಿಭೂತಿ(ಯಿ)ಲ್ಲದೆ ಮತ್ತೇನನೂ ಮಾಡಲಾಗದು.
ಭರ್ಗೋ ದೇವಃ ಎಂಬ ಮಂತ್ರ(ವಿ)ಲ್ಲದೆ ಮತ್ತೇನನೂ ಮಾಡಲಾಗದು), ಪು. 153.

38. SII IX(i), ನಂ. 70. ಕುಡುತಿನಿ, ಬಳ್ಳಾರಿ (ಜಿ), ಕ್ರಿ.ಶ. 971, ಪು. 43.

39. ಕನ್ನಡ ವಿ.ವಿ., ಶಾಸನ ಸಂಪುಟ-1, ಕೊಳಗಲ್ಲು, ಬಳ್ಳಾರಿ (ಜಿ), ಕ್ರಿ.ಶ. 967, ಪು. 71.

40. ***ಶಿವಶರಣೆಯರ ವಚನ ಸಂಪುಟ,*** ಕದಿರ ಕಾಯಕದ ಕಾಳವ್ವೆಯ ವಚನ 743, ಕ.ಪು.ಪ್ರಾ. ಬೆಂಗಳೂರು, 2001, ಪು. 230.

41. ಅದೇ, ***ಕದಿರ ರೆಮ್ಮವ್ವೆಯ ವಚನ*** 747, ಪು. 232.

42. ***ಸಂಕೀರ್ಣ ವಚನ ಸಂಪುಟ,*** ಸಂಪುಟ 2, ಕನ್ನಡಿ ಕಾಯಕದ ಅಮ್ಮಿದೇವಯ್ಯನ ವಚನಗಳು, ಪು. 6-9.

43. ***ಶಿವಶರಣೆಯರ ವಚನ ಸಂಪುಟ,*** ಗುಂಡಯ್ಯಗಳ ಪುಣ್ಯಸ್ತ್ರೀ ಕೇತಲದೇವಿಯ ವಚನ 772, ಪೂರ್ವೋಕ್ತ ಪು. 245.

44. ಅದೇ, ಬಾಚಿಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆಯ ವಚನ 1091, ಪು. 323.

45. ***ಸಂಕೀರ್ಣ ವಚನ ಸಂಪುಟ 2,*** ಜೇಡರ ದಾಸಿಮಯ್ಯನ ವಚನ 738, ಪು. 236.

46. ಅದೇ, ವಚನ 777, ಪು. 244.

47. ***ಸಂಕೀರ್ಣ ವಚನ ಸಂಪುಟ 3***, ಮಾದಾರ ಚೆನ್ನಯ್ಯನ ವಚನ 1157, ಪು. 405.

48. ಅದೇ, ವಚನ 1164, ಪು. 408.

49. ಅದೇ, ವಚನ 1161, ಪು. 407.

50. ಅದೇ, ವಚನ 1163, ಪು. 408.

51. ***ಸಂಕೀರ್ಣ ವಚನ ಸಂಪುಟ 3***, ಮಾದಾರ ಧೂಳಯ್ಯನ ವಚನ 1171, ಪು. 411.

52. ಅದೇ, ಮಾದಾರ ಧೂಳಯ್ಯನ ವಚನ 1202, ಪು. 421.

53. ***ಸಂಕೀರ್ಣ ವಚನ ಸಂಪುಟ 3***, ಮೇದರ ಕೇತಯ್ಯನ ವಚನ 1395, ಪು. 475.

54. ಅದೇ, ವಚನ 1405, ಪು. 478.

55. ***ಸಂಕೀರ್ಣ ವಚನ ಸಂಪುಟ 4***, ಹಾವಿನಹಾಳ ಕಲ್ಲಯ್ಯಗಳ ವಚನ 1097, ಪು. 344.

56. ಅದೇ, ವಚನ 1162, ಪು. 365.

57. ಅದೇ, ವಚನ 1143, ಪು. 359.

58. ***ಶಿವಶರಣೆಯರ ವಚನಗಳು***, ಹಾದರ ಕಾಯಕದ ಮಾರಯ್ಯಗಳ ಪುಣ್ಯಸ್ತ್ರೀ ಗಂಗಮ್ಮನ ವಚನ 1349, ಪು. 415.

59. ***ಬಸವಣ್ಣನವರ ವಚನ ಸಂಪುಟ.*** ವಚನ 590, ಪು. 148.

60. ಅದೇ, ವಚನ 325, ಪು. 79.

61. ***ಶಿವಶರಣೆಯರ ವಚನ ಸಂಪುಟ***, ಅಕ್ಕಮ್ಮನ ವಚನ 445, ಪೂರ್ವೋಕ್ತ, ಪು. 134.

62. ***ಸಂಕೀರ್ಣ ವಚನ ಸಂಪುಟ 3***, ಮೆರೆಮಿಂಡಯ್ಯನ ವಚನ 1298, ಪು. 451.

63. ***ಸಂಕೀರ್ಣ ವಚನ ಸಂಪುಟ 2***, ಜೇಡರ ದಾಸಿಮಯ್ಯನ ವಚನ 777, ಪು. 244.

64. ***ಶಿವಶರಣೆಯರ ವಚನ ಸಂಪುಟ***, ಕಾಳವ್ವೆಯ ವಚನ 733, ಪೂರ್ವೋಕ್ತ, ಪು. 226.

65. ***ಸಂಕೀರ್ಣ ವಚನ ಸಂಪುಟ 1***, ಅಂಬಿಗರ ಚೌಡಯ್ಯನ ವಚನ 116, ಪು. 39.
(ಕುರಿಕೋಳಿ ಕಿರುಮೀನ ತಿಂಬವರ ಊರೊಳಗೆ ಇರು ಎಂಬರು
ಅಮೃತಾನ್ನವ ಕರೆವ ಗೋವ ತಿಂಬವರ ಊರಿಂದ ಹೊರಗಿರು ಎಂಬರು.... )

66. (ಲೇ) ನಂದಿ, ಆರ್.ಎನ್., 'ವೀರಶೈವ ಚಳುವಳಿಯ ಹುಟ್ಟು', ನುಗಡೋಣಿ ಅಮರೇಶ (ಸಂ), ***ಬಸವಣ್ಣನವರ ವಚನಗಳು : ಸಾಂಸ್ಕೃತಿಕ ಮುಖಾಮುಖಿ***, ಪ್ರಸಾರಾಂಗ , ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2004, ಪು. 2.

67. EC X, ಅಕೆ 149, ಕ್ರಿ. ಶ. 1142, ಪು. 193.

68. SII XV, ನಂ. 566, ನಿಡಗುಂದಿ, ರೋಣ (ತಾ.), 12ನೇ ಶ., ಪು. 378.

69. SII XX, ನಂ. 304. ಅಣ್ಣೀಗೆರೆ, ನವಲಗುಂದ (ತಾ), 12ನೇ ಶ., ಪು. 337.

70. EC VI (Old), ಮೂಗೆ 20, ಹೊಯ್ಸಳ ನರಸಿಂಹನ ಕಾಲ, ಪು. 246.

71. ಕನ್ನಡ ವಿ.ವಿ., ಶಾಸನ ಸಂಪುಟ-1, ಕೊಳಗಲ್ಲು, ಬಳ್ಳಾರಿ (ಜಿ), ಕ್ರಿ.ಶ. 967, ಪು. 71.

72. SII IX(ii), ನಂ. 70. ಕುಡುತಿನಿ, ಬಳ್ಳಾರಿ (ತಾ), ಕ್ರಿ.ಶ. 971, ಪು. 43.

73. SII XI(i), ನಂ. 144. ಡಂಬಳ, ಗದಗ (ತಾ), ಕ್ರಿ.ಶ. 1098, ಪು. 175.

74. SII IX(i), ನಂ. 336. ಕುಡುತಿನಿ, ಬಳ್ಳಾರಿ (ತಾ), ಕ್ರಿ.ಶ. 1218, ಪು. 357.

75. EC XII, ಕ 70, ಕ್ರಿ.ಶ. 1143, ಪು. 93.

76. EC IX, ಬೇ 317, ಕ್ರಿ.ಶ. 1173, ಪು. 294.

77. EC VI, ಕೃಪೇ 27, ಕ್ರಿ.ಶ. 1171, ಪು. 80.

78. SII XX, ನಂ. 199. ಕುಂದುಗೋಳ, ಕುಂದುಗೋಳ (ತಾ), ಕ್ರಿ.ಶ. 1240, ಪು. 248.

79. EC X, ಅಕೆ 149, ಕ್ರಿ.ಶ. 1142, ಪು. 193.

80. KI V, ನಂ. 70, ಧಾರವಾಡ, ಕ್ರಿ.ಶ. 1221, ಪು. 261.

81. SII XI(i), ನಂ. 144. ಡಂಬಳ, ಗದಗ (ತಾ), ಕ್ರಿ.ಶ. 1098, ಪು. 175.

82. SII XV, ನಂ. 220. ಮುಳುಗುಂದ, ಗದಗ (ತಾ), ಕ್ರಿ.ಶ. 1207, ಪು. 269.

83. *ಸಂಕೀರ್ಣ ವಚನ ಸಂಪುಟ 3*, ಬಾಚಿ ಕಾಯಕದ ಬಸವಣ್ಣನ ವಚನ 201, ಪು. 80.

84. *ಶಿವಶರಣೆಯರ ವಚನ ಸಂಪುಟ*, ಬಾಚಿ ಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆಯ ವಚನ 1090, ಪೂರ್ವೋಕ್ತ, ಪು. 323.

85. *ಬಸವಣ್ಣನವರ ವಚನ ಸಂಪುಟ*. ವಚನ 451, ಪು. 109.
(ಬಡಹಾರುವನೇಸು ಭಕ್ತನಾದಡೆಯೂ ನೇಣಿನ ಹಂಗ ಬಿಡ!
ಮಾಲೆಗಾರನೇಸು ಭಕ್ತನಾದಡೆಯೂ ಬಾವಿಯ ಬೊಮ್ಮನ ಹಂಗ ಬಿಡ!
ಕಂಚುಗಾರನೇಸು ಭಕ್ತನಾದಡೆಯೂ ಕಾಳಿಕಾದೇವಿಯ ಹಂಗ ಬಿಡ!)

86. Kelleson Collyer, *The Hoysala Artistists : Their Identity and Styles*, Directorate of Archaeology and Museums, 1990, pp. 62-63,

87. SII XV, ನಂ. 156. ಕಂದಗಲ್, ಹುನುಗುಂದ (ತಾ), ಕ್ರಿ.ಶ. 1207, ಪು. 201.

88. EC X, ಅಕೆ 149, ಕ್ರಿ.ಶ. 1142, ಪು. 193.

89. (ಲೇ) ಸಿದ್ಧಲಿಂಗಮ್ಮ ಬಿ.ಜಿ. ಮತ್ತು ಹೆಗಡೆ ರಾಜಾರಾಮ, 'ಕನ್ನಡ ಶಾಸನಗಳಲ್ಲಿ ಬಿಂಬಿತವಾದಂತೆ ಮಧ್ಯಕಾಲೀನ ಕರ್ನಾಟಕದಲ್ಲಿ ತೆಲ್ಲಿಗರು', ಶಾಸನ ಅಧ್ಯಯನ, ಸಂಪುಟ 3, ಸಂಚಿಕೆ 2, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ಜುಲೈ-ಡಿಸೆಂಬರ್ 2006, ಪು. 97.

90. EI XIII, ಬೆಳಗಾವಿ, ಬೆಳಗಾವಿ (ತಾ), ಕ್ರಿ.ಶ. 1204, ಪು. 19-22.

91. Kundangar, K.G., *Inscriptions in Northern Karnataka and the Kolhapur State*, No. 37, pp. 115-119.

92. SII XI, ನಂ. 52. ಲಕ್ಕುಂಡಿ, ಧಾರವಾಡ (ತಾ), ಕ್ರಿ.ಶ. 1007, ಪು. 43.

93. SII XI, ನಂ. 186. ಮೊರಬ, ನವಲಗುಂದ (ತಾ), ಕ್ರಿ.ಶ. 1103, ಪು. 245.

94. EC VII (Old), ಶಿಪು 293, ಕ್ರಿ.ಶ. 1080, ಪು. 342.

95. SII XV, ನಂ. 31, ಅಮ್ಮಿನಭಾವಿ, ಧಾರವಾಡ (ತಾ), ಕ್ರಿ.ಶ. 1146, ಪು. 36.

96. Kelleson Collyer, Op. Cit., p. 61-62.

97. ಅಣ್ಣೀಗೇರಿ ಎ.ಎಂ., ಶೇಷಶಾಸ್ತ್ರೀ, ಆರ್. (ಸಂ), ***ಶಾಸನ ಸಂಗ್ರಹ,*** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1999, ಪು. xxv.

ಪ್ರಸ್ತುತ ಸಂಪ್ರಬಂಧವು 'ಮಧ್ಯಕಾಲೀನ ಕರ್ನಾಟಕದಲ್ಲಿ ಕುಶಲಕರ್ಮಿಗಳು ಒಂದು ಸಾಮಾಜಿಕ ಮತ್ತು ಚಾರಿತ್ರಿಕ ಅಧ್ಯಯನ ' ಎಂಬ ಶೀರ್ಷಿಕೆಯನ್ನು ಹೊಂದಿದೆ.

ಪ್ರಕೃತ ಪ್ರಬಂಧದಲ್ಲಿ ಆಯಾ ವೃತ್ತಿಗಳಿಗಿದ್ದ ವಿವಿಧ ಹೆಸರುಗಳು, ಅವುಗಳ ವ್ಯುತ್ಪತ್ತಿ ಮೊದಲಾದ ವಿಚಾರಗಳ ಕುರಿತು ಚರ್ಚಿಸಲಾಗಿದೆ. ನೇಕಾರರಲ್ಲೂ ಸಾಲಿಗ ಗಾವುಂಡಗಳಿದ್ದ ವಿಚಾರ ಗೊತ್ತಾಗುತ್ತದೆ. ಅಲ್ಲದೇ ಅವರಲ್ಲಿದ್ದ ಆಂತರಿಕ ವೈವಿಧ್ಯತೆಯನ್ನು ಗುರುತಿಸಲಾಗಿದೆ. ಉದಾ : ನೇಕಾರರೆಂಬುದು ಸಾಮಾನ್ಯ ವೃತ್ತಿಯಾದರೆ, ಪಟ್ಟಗಾರರು ರೇಷ್ಮೆ ಬಟ್ಟೆಗಳನ್ನು ನೇಯುವವರು, ಜೇಡರು ಬಹುಶಃ ಹತ್ತಿ ಬಟ್ಟೆಗಳನ್ನು ನೇಯುವವರು, ಕದಿರ ಕಾಯಕದವರು ಹತ್ತಿಯಿಂದ ನೂಲು ತಯಾರಿಸುವವರು ಹಾಗೂ ತಯಾರಾದ ಬಟ್ಟೆಗಳನ್ನು ಮಾರಾಟ ಮಾಡುತ್ತಿದ್ದ ನೇಕಾರ ಸೆಟ್ಟಿಗಳಿದ್ದ ವಿವರಗಳನ್ನು ನಮಗೆ ಶಾಸನಗಳು ನೀಡುತ್ತವೆ. ಅಂಥಹ ಮಹತ್ವದ ವಿಚಾರಗಳನ್ನು ಕಲೆ ಹಾಕಲಾಗಿದೆ. ಅಮ್ಮಿನಬಾವಿ ಶಾಸನವು ಇವರ ಮತ, ದಾನಗುಣ, ರೂಪ, ಶಿವಭಕ್ತಿಗಳನ್ನು ಬಣ್ಣಿಸಿದೆ ಹಾಗೂ ನೇಕಾರರು ತಯಾರಿಸುತ್ತಿದ್ದ ಬಟ್ಟೆಯ ವಿಧಗಳನ್ನು ತಿಳಿಸಲಾಗಿದೆ. ಬಡಗಿಗಳ ಕುರಿತು ಅವರು ಮಾಡುತ್ತಿದ್ದ ವಸ್ತುಗಳು ಮೊದಲಾದ ವಿವರಗಳು, ಕಮ್ಮಾರರು ವಿವಿಧ ಸಂದರ್ಭಗಳಲ್ಲಿ ಶೌರ್ಯದಿಂದ ಹೋರಾಡಿ ಮಡಿದ ವಿಷಯಗಳು, ಕುಂಬಾರ ವೃತ್ತಿಯ ಪೌರಾಣಿಕ ಹಿನ್ನೆಲೆ, ಅಕ್ಕಸಾಲಿಗಳು ರಾಜನ ಕಮ್ಮಟಗಳಲ್ಲಿಯೂ ಕೆಲಸ ನಿರ್ವಹಿಸುತ್ತಿದ್ದ ವಿಚಾರಗಳು, ಕಂಚುಗಾರರು ತಾಮ್ರ, ಹಿತ್ತಾಳೆ ಹಾಗೂ ಕಂಚು ಮೂರು ಲೋಹಗಳಲ್ಲೂ ಕೆಲಸ ಮಾಡುತ್ತಿದ್ದ ವಿವರಗಳು, ತೆಲ್ಲಿಗರ ಕುರಿತು ಅವರು ಎಣ್ಣೆಯನ್ನು ಪೂರೈಸುತ್ತಿದ್ದ ರೀತಿ, ಇಂದಿಗೂ ಇರುವ ಗಾಣದ ಕಲ್ಲಿನ ಶಾಸನಗಳು (ಆ ಸ್ಥಳಗಳಿಗೆ ಭೇಟಿ ನೀಡಿ ಫೋಟೋ ತೆಗೆಯಲಾಗಿದೆ). ಅವರ ಸಾಂಸ್ಕೃತಿಕ ಸ್ಥಾನಮಾನ ಇತ್ಯಾದಿ ವಿಷಯಗಳು, ಶಿಲ್ಪಿಗಳ ಕುರಿತು ಅವರ ನೈಪುಣ್ಯತೆಯ ಆಧಾರದ ಮೇಲೆ ಅವರನ್ನು ರೂವಾರಿ, ಕಲ್ಕುಟಿಗ, ಬಿನ್ನಾಣಿ, ಸೂತ್ರಧಾರಿ ಹೀಗೆ ವಿವಿಧ ಹೆಸರುಗಳಿಂದ ಉಲ್ಲೇಖಿಸಿರುವುದು, ಮಾಲೆಗಾರರ ಬಗ್ಗೆ ಅಂದಿನ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಬರುವ ವಿವರ ಇತ್ಯಾದಿ, ಮೇದರ ಕುರಿತು ವಚನಗಳೋಲ್ಲೇಖಗಳು, ಚರ್ಮಕಾರರ ಕುರಿತು ಶಾಸನ ಹಾಗೂ ಧರ್ಮಾಮೃತದಲ್ಲಿನ ವಿವರಗಳು ಹೀಗೆ

ಶಾಸನ ಹಾಗೂ ಸಾಹಿತ್ಯಗಳ ಹಿನ್ನೆಲೆಯಿಟ್ಟುಕೊಂಡು ಎಲ್ಲಾ ಕುಶಲಕರ್ಮಿಗಳನ್ನು ಕ್ರೋಢೀಕರಿಸುವ ಪ್ರಯತ್ನ ಮಾಡಲಾಗಿದೆ.

ಕಲಾಕೌಶಲ್ಯವೇ ಜಾಸ್ತಿಯಿದ್ದು, ತಕ್ಕಮಟ್ಟಿಗೆ ಯಂತ್ರೋಪಕರಣಗಳ ಬಳಕೆಯನ್ನು ಇವರ ತಾಂತ್ರಿಕ ವಿವರಗಳಲ್ಲಿ ನೋಡಬಹುದಾಗಿದೆ. ಈ ವೃತ್ತಿಗಳು ಬಹುತೇಕವಾಗಿ ವಂಶ ಪಾರಂಪರ್ಯ ವೃತ್ತಿಗಳಾದ್ದರಿಂದ ಇವರ ಶಿಕ್ಷಣವು ಪ್ರಾಯೋಗಿಕವಾಗಿ ಮನೆಯಲ್ಲಿಯೇ ತಂದೆಯಿಂದ ಮಗನಿಗೆ, ಮಗನಿಂದ ಮೊಮ್ಮಗನಿಗೆ ಹೀಗೆ ಮುಂದುವರಿಯುತ್ತಿವೆ. ಹಾಗಾಗಿ ಇವರ ಅಕ್ಷರ ಜ್ಞಾನಕ್ಕಿಂತ ವೃತ್ತಿ ತರಬೇತಿಯು ಮನೆಯಲ್ಲಿಯೇ ನಡೆಯುತ್ತಿತ್ತು. ನಮಗೆ ತುಂಬ ವಿರಳವಾಗಿ ಇವರು ಮೂಲಕಸುಬಲ್ಲದೇ ಇತರೆ ವೃತ್ತಿಗಳನ್ನು ಮಾಡಿದ ನಿದರ್ಶನಗಳು ದೊರೆಯುತ್ತವೆ. ನಮಗೆ ಈ ಎಲ್ಲಾ ವಿವರಗಳನ್ನು ತಿಳಿದುಕೊಳ್ಳಲು ವಚನಗಳು ತುಂಬಾ ಸಹಾಯಕವಾಗಿವೆ. ವಚನಕಾರರಲ್ಲಿ ಬರುವ ಅನೇಕ ವಚನಕಾರರು ತಮ್ಮ ವಚನಗಳ ಮೂಲಕ ತಮ್ಮ ಕಾಯಕದ ವಿವರಗಳನ್ನು ನೀಡುತ್ತಾರೆ. ಇಂಥಹ ವಚನಗಳು ನಮಗೆ ಅಂದಿನ ಕಾಲದ ಆರ್ಥಿಕ ಹಾಗೂ ಸಾಮಾಜಿಕ ಸ್ಥಿತಿಗತಿ ಅರಿಯಲು ಅತ್ಯಂತ ಉಪಯುಕ್ತವಾಗಿವೆ. ಈ ನಿಟ್ಟಿನಲ್ಲಿ ವಚನಕಾರರ ಈ ಕೆಲಸ ತುಂಬ ಶ್ಲಾಘನೀಯವಾದುದು. ನನ್ನ ಈ ಸಂಪ್ರಬಂಧದಲ್ಲಿ ಎಲ್ಲಾ ಕುಶಲಕರ್ಮಕ್ಕೆ ಸಂಬಂಧಿಸಿದ ವಚನಗಳನ್ನು ಪರಿಶೀಲಿಸಲಾಗಿದೆ ಹಾಗೂ ವಿಶ್ಲೇಷಿಸಲಾಗಿದೆ. ಈ ಮೂಲಕ ಕುಶಲಕರ್ಮದ ಅಂದಿನ ತಾಂತ್ರಿಕತೆಗೂ ಇಂದಿನ ಸಾಂಪ್ರದಾಯಿಕ ಗ್ರಾಮೀಣ ತಾಂತ್ರಿಕತೆಗೂ ಹೆಚ್ಚಿನ ವ್ಯತ್ಯಾಸವಿಲ್ಲದಿದ್ದದ್ದು ಗೊತ್ತಾಗುತ್ತದೆ. ಆದರೆ ಈಚೆಗೆ ಯಂತ್ರೋಪಕರಣಗಳ ಬಳಕೆ ಹೆಚ್ಚಾದ್ದರಿಂದ ಉತ್ಪಾದನಾ ಮಟ್ಟ ಹೆಚ್ಚಿರಬಹುದು. ಆದರೂ ಗ್ರಾಮೀಣ ಪ್ರದೇಶದ ಈ ಕುಶಲಕಲೆಗಳಲ್ಲಿ ಯಾವುದೇ ಹೇಳಿಕೊಳ್ಳುವಂಥಹ ಬದಲಾವಣೆಗಳೇನು ಆಗಿಲ್ಲವೆಂದು ನಿರ್ಣಯಿಸಬಹುದಾಗಿದೆ.

ಎಲ್ಲಾ ಕುಶಲಕರ್ಮಿಗಳು ಉತ್ಪಾದಿಸುತ್ತಿದ್ದ ಉತ್ಪಾದಿತ ವಸ್ತುಗಳು ಹಾಗೂ ಮಧ್ಯಕಾಲೀನ ಕರ್ನಾಟಕದ ಶಾಸನಗಳಲ್ಲಿ ಉಲ್ಲೇಖಿತವಾದ ಕುಶಲಕಲೆಗಳ ಸರಕುಗಳ ಕುರಿತು ವಿವೇಚಿಸಲಾಗಿದೆ. ಶಾಸನಗಳ ಮೂಲಕ ಮಧ್ಯಕಾಲೀನ ಕರ್ನಾಟಕದ ಮುಖ್ಯ ವ್ಯಾಪಾರದ ಕೇಂದ್ರವಾಗಿ ಸಂತೆಯನ್ನು ಗುರುತಿಸಲಾಗಿದೆ. ಸಂತೆಯಲ್ಲಿ ಬಯಲು ಅಂಗಡಿ, ಕಟ್ಟಿದ ಅಂಗಡಿ, ಧರ್ಮದ ಅಂಗಡಿ, ದೇವರ ಅಂಗಡಿ, ಮಾನ್ಯದ ಅಂಗಡಿ, ಇತ್ಯಾದಿ ಪ್ರಭೇದಗಳು ತೋರಿಬರುತ್ತವೆ. ಶಾಸನಗಳಲ್ಲಿ ಕಂಚಗಾಱರ ಪಸರ, ಕುಂಬಾಱರ ಹಸರ, ಗಂಧವಣದಂಗಡಿ, ದೇವರಂಗಡಿ, ದೂಸಿಗವಸರ ಎಂಬ ಅಂಗಡಿಗಳಿರುವುದನ್ನು ಶ್ರೀನಿವಾಸ ರಿತ್ತಿಯವರು ಗುರುತಿಸುತ್ತಾರೆ. ಕಲ್ಕೇರಿ ಶಾಸನವೊಂದು ರೇಷ್ಮೆ

ಬಟ್ಟೆಯ ಅಂಗಡಿಯನ್ನು ಪಟ್ಟೆ ಅಂಗಡಿ ಎಂದು ಉಲ್ಲೇಖಿಸುವುದರಿಂದ ಅಂದು ಕೂಡ ಇಂದಿನಂತೆ ರೇಷ್ಮೆ ವಸ್ತುಗಳ ವ್ಯಾಪಾರ ನಡೆಯುತ್ತಿದ್ದುದು ಶಾಸನಗಳಿಂದ ಗೊತ್ತಾಗುತ್ತದೆ. ಅಮೃತಾಪುರ ಶಾಸನವು ಅಂಗಡಿಗಳಿಗೆ ವ್ಯಕ್ತಿಗಳ ಹೆಸರಿಟ್ಟಿರುವುದನ್ನು ತಿಳಿಸುತ್ತದೆ. ಲಕ್ಕುಂಡಿ ಶಾಸನ ಒಬ್ಬ ವ್ಯಕ್ತಿಯ ಒಡೆತನದಲ್ಲಿ ಅನೇಕ ಅಂಗಡಿಗಳಿದ್ದುದನ್ನು ತಿಳಿಸುತ್ತದೆ. ಇವುಗಳನ್ನು ಗಮನಿಸಿದಾಗ ಮಧ್ಯಕಾಲೀನ ಕರ್ನಾಟಕದ ಮಾರಾಟ ವ್ಯವಸ್ಥೆಯೂ ಇಂದಿಗೂ ಹೆಚ್ಚಿನ ವ್ಯತ್ಯಾಸವಿಲ್ಲದಿದ್ದುದು ಗೊತ್ತಾಗುತ್ತದೆ.

ಈ ಕುಶಲಕರ್ಮದ ವಸ್ತುಗಳ ಸಾಗಾಟವು ಗ್ರಾಮಪಟ್ಟಣಗಳಲ್ಲಿರುವ ವ್ಯಾಪಾರಿಗಳು ಒಬ್ಬೊಬ್ಬರಾಗಿ ಅಥವಾ ಗುಂಪಾಗಿಯೂ ಬೇರೆ ಬೇರೆ ಸ್ಥಳಗಳಿಗೆ ವ್ಯಾಪಾರಕ್ಕಾಗಿ ಹೋಗುತ್ತಿದ್ದರು. ಆ ವಸ್ತುಗಳನ್ನು ಹಸುಬೆ, ಮೂಟೆ, ಹೆಡಗಿ, ಬರಕ, ಕಲ್ಲಿ, ಕೊಡ, ಚರ್ಮದ ಚೀಲ, ಬಿದಿರಿನ ಕೊಳವೆ (=ಲಳಿಗೆ), ಕರಂಡಿಗೆ, ಜಲ್ಲೆಗಳಲ್ಲಿ ತುಂಬಿದ ವಿವಿಧ ಸರಕುಗಳನ್ನು ಎತ್ತು, ಕತ್ತೆ, ಕೋಣ, ಎಮ್ಮೆ, ಕುದುರೆ, ತೊತ್ತು ಬಂಡಿಗಳ ಮೂಲಕ ಸಾಗಿಸುತ್ತಿದ್ದರು. ಆಗ ಸಾಗಿಸುವಾಗ ಮಾರ್ಗ ಮಧ್ಯದಲ್ಲಿ ಹಾದಿಗಳ್ಳರು ದಾಳಿ ಮಾಡುತ್ತಿದ್ದ ವಿಚಾರವನ್ನು ವಡ್ಡಾರಾಧನೆಯಿಂದ ತಿಳಿಯಬಹುದಾಗಿದೆ. ವರ್ತಕರನ್ನು ಕಳ್ಳರು ಲೂಟಿ ಮಾಡಿದ ವಿಷಯವನ್ನು ಧರ್ಮಾಮೃತ ತಿಳಿಸುತ್ತದೆ.

ಮಾರ್ಗಮಧ್ಯದಲ್ಲಿ ಅಧಿಕಾರಿಗಳು ಸರಕನ್ನು ಪರೀಕ್ಷಿಸಿದರೆ, ಸರಕಿನ ಬಗೆಗೆ ಸಂಶಯ ತಾಳಿದರೆ ತಾವು ಸುಂಕದ ಕಟ್ಟೆಯಿಂದ ತಂದ ಚೀಟಿಯನ್ನು ಅವರಿಗೆ ತೋರಿಸಲಾಗುತ್ತಿತ್ತು. ಕೆಲವೊಮ್ಮೆ ವರ್ತಕರು ತಾವು ತೆಗೆದುಕೊಂಡು ಹೋಗುವ ವಸ್ತುಗಳಿಗೆ ಸುಂಕ ಕೊಡದೆ, ಕಳ್ಳದಾಗಿ ವಸ್ತುಗಳನ್ನು ಸಾಗಿಸುತ್ತಿದ್ದುದನ್ನು ದಾಸಿಮಯ್ಯನ 'ಹರಿದ ಗೋಣಿಯಲೊಬ್ಬ ಕಳವೆಯ ತುಂಬಿದ, ಇರುಳೆಲ್ಲಾ ನಡೆದನಾ ಸುಂಕ ಕಂಜಿ' ವಚನವು ತಿಳಿಸುತ್ತದೆ. ಹೀಗೆ ಸಂತೆ, ಪಟ್ಟಣ ಪ್ರವೇಶಿಸುವ ವಸ್ತುಗಳ ಮೇಲೆ ಸುಂಕ ವಿಧಿಸುತ್ತಿದ್ದ ವಿಚಾರವನ್ನು ನಮಗೆ ಸಾಹಿತ್ಯವು ವಿಫಲವಾಗಿ ಮಾಹಿತಿ ಒದಗಿಸುತ್ತವೆ.

ತೂಕ ಮತ್ತು ಅಳತೆಗಳ ಕುರಿತು ಕೂಡ ಸಾಹಿತ್ಯದಲ್ಲಿ ವಿಷಯಗಳು ದೊರೆಯುತ್ತವೆ. ವಚನಗಳಲ್ಲಿ ಚಿನ್ನ, ರತ್ನ ಮುಂತಾದ ಅಮೂಲ್ಯ ವಸ್ತುಗಳ ಕೆಲವು ತೂಕದ ಹೆಸರುಗಳು ದೊರೆಯುತ್ತವೆ. ಗುಂಜ, ಮಾಸಿ, ಜವೆ ಇವು ವಚನಗಳಲ್ಲಿ ಉಕ್ತವಾಗಿವೆ. 'ವ್ಯವಹಾರ ಗಣಿತ 'ದಲ್ಲಿ ತೂಕಗಳ ಪರಸ್ಪರ ಸಂಬಂಧ ಈ ರೀತಿಯಾಗಿದೆ. ನಾಲ್ಕು ಸುವರ್ಣ = ಒಂದು ಕರ್ಷ, ನಾಲ್ಕು ಕರ್ಷ = ಒಂದು ಪಲ, ಇಪ್ಪತ್ತು ಪಲ = ಒಂದು ಬೀಸಗೆ, ಐದು ಬೀಸಗೆ = ಒಂದು ತೊಲೆ ಮತ್ತು ಇಪ್ಪತ್ತು ತೊಲೆ = ಒಂದು ಭಾರ.

ಅಳತೆಗಳಲ್ಲೆಲ್ಲ ಗಿದ್ದವೇ ತುಂಬ ಚಿಕ್ಕದು. ಇದಕ್ಕಿಂತ ದೊಡ್ಡದಾದ ಅಳತೆಯೆಂದರೆ ಸೊಲ್ಲಗೆ, ಮುಂದಿನದು ಮಾನ, ಅನಂತರ ಬರುವುದು ಬಳ್ಳ, ಆ ಮೇಲೆ ಕೊಳಗ, ಎಲ್ಲಕ್ಕಿಂತ ದೊಡ್ಡ ಅಳತೆಯೆಂದರೆ ಖಂಡುಗ. ಇವುಗಳ ಸಂಬಂಧವು ರಾಜಾದಿತ್ಯನ ಪ್ರಕಾರ ಹೀಗಿದೆ. ನಾಲ್ಕು ಗಿದ್ದ = ಒಂದು ಸೊಲ್ಲಗೆ, ನಾಲ್ಕು ಸೊಲ್ಲಗೆ = ಒಂದು ಮಾನ, ನಾಲ್ಕು ಮಾನ = ಒಂದು ಬಳ್ಳ, ನಾಲ್ಕು ಬಳ್ಳ = ಒಂದು ಕೊಳಗ ಮತ್ತು ಇಪ್ಪತ್ತು ಕೊಳಗ = ಒಂದು ಖಂಡುಗ.

ಎಣ್ಣೆಯ ಅಳತೆಯನ್ನು ನಾನಾ ವಿಧದಲ್ಲಿ ಸೂಚಿಸಲಾಗಿದೆ. ಎಣ್ಣೆ ಉತ್ಪಾದಕರ ಸಂದರ್ಭದಲ್ಲಿ ದೊಡ್ಡ ಅಳತೆ ಗಾಣದ ರೂಪದಲ್ಲಿಯೂ, ಎಣ್ಣೆ ಮಾರಾಟಗಾರರ ಸಂದರ್ಭದಲ್ಲಿ ದೊಡ್ಡ ಅಳತೆ ಹಾಡದ ರೂಪದಲ್ಲಿಯು ಇತ್ತು. ಅಂದಿನ ಕಾಲದಲ್ಲಿದ್ದ ಅಳತೆಗಳಾದ ಸೊಲ್ಲಗೆ, ಸೊಟ್ಟಗೆ, ಮಾನ, ಅರವನ, ಅರಸೊಲ್ಲಗೆ, ಸೊಳಸಿಗೆ, ಅಡ್ಡ ಮೊದಲಾದ ಅಳತೆ ಪ್ರಮಾಣಗಳಿದ್ದುದು ನಮಗೆ ಅನೇಕ ಶಾಸನಗಳಿಂದ ಗೊತ್ತಾಗುತ್ತದೆ. ಅಲ್ಲದೆ ಹಾದ, ಹಾಡ, ಹಾಗ ಎಂಬ ದ್ರವ ಅಳತೆಯ ಮಾನಗಳು ಬಳಕೆಯಲ್ಲಿದ್ದವು.

ಕೆಲವೊಂದು ವಸ್ತುಗಳು ಎಣಿಕೆ ರೂಪದಲ್ಲಿಯೂ ಮಾರಾಟವಾಗುತ್ತಿದ್ದವು. ಉದಾ : ನಿರ್ದಿಷ್ಟಪಡಿಸಿದ ಆಕಾರದ ಬೆಲ್ಲದ ಅಚ್ಚನ್ನು 'ಅಚ್ಚು' ಎಂದು, ನಿರ್ದಿಷ್ಟ ಸಂಖ್ಯೆಯ ವೀಳ್ಯದ ಎಲೆಗಳ ಕಟ್ಟನ್ನು 'ಕಟ್ಟು' ಎಂದು, ನಿರ್ದಿಷ್ಟ ಸಂಖ್ಯೆಯ ಬಟ್ಟೆಗಳ ಒಂದು ಗಂಟನ್ನು 'ಕಡಗೆ' ಎಂದು (ಹೊಱಗಣಿಂ ಬಂದ ಸೀರೆಯ ಕಡಗೆಗೆ ವೀಸವೊಂದು), ನಿರ್ದಿಷ್ಟ ಸಂಖ್ಯೆಯ ವೀಳ್ಯದೆಲೆಗಳ ಒಂದು ಕಟ್ಟನ್ನು 'ಕೌಳಿಗೆ' ಎಂದು, ನಿರ್ದಿಷ್ಟ ಸಂಖ್ಯೆಯ ಬಟ್ಟೆಗಳ ಗಂಟನ್ನು 'ಪೊದಕೆ' ಎನ್ನಲಾಗುತ್ತಿತ್ತು. ಇಂದು ಕೂಡ ಇದೇ ಹೆಸರುಗಳಿಂದ ಇದೇ ರೀತಿಯಲ್ಲಿ ವ್ಯಾಪಾರ ಚಟುವಟಿಕೆಗಳು ನಡೆಯುತ್ತಿವೆ.

ರಾಜ್ಯದ ಬಹುದೊಡ್ಡ ಆದಾಯಗಳಲ್ಲೊಂದಾದ ವ್ಯಾಪಾರ ತೆರಿಗೆ ಶಾಸನಗಳಲ್ಲಿ ಸುಂಕವೆಂದೇ ಉಲ್ಲೇಖಿಸಲ್ಪಟ್ಟಿದೆ. ಸುಂಕದಾದಾಯಕ್ಕಾಗಿ ಪಟ್ಟಣ ಮತ್ತು ಸಂತೆಯ ಊರುಗಳಲ್ಲಿ ಸುಂಕದ ಕಟ್ಟೆಗಳನ್ನು ನಿರ್ಮಿಸಿ ಸುಂಕದಧಿಕಾರಿಯನ್ನು ನೇಮಿಸುತ್ತಿದ್ದರು. ಬಹುತೇಕ ಎಲ್ಲಾ ವೃತ್ತಿಗಳ ಮೇಲೂ ತೆರಿಗೆ ಹಾಕುತ್ತಿದ್ದ ವಿಚಾರವನ್ನು ಶಾಸನಗಳು ತಿಳಿಸುತ್ತವೆ. ಇವುಗಳನ್ನು ವಿವರವಾಗಿ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಪ್ರಾಚೀನ ಹಾಗೂ ಮಧ್ಯಕಾಲೀನ ಕರ್ನಾಟಕದ ವರ್ತಕರಲ್ಲಿಯೂ ಅನೇಕ ಪ್ರಕಾರಗಳಿದ್ದವು. ಇವರನ್ನು 1. ವಿನಿಮಯ ವರ್ತಕರು ಮತ್ತು 2. ಉತ್ಪಾದಕ ವಿನಿಮಯ ವರ್ತಕರು ಎಂದು ವಿಭಾಗಿಸಬಹುದು. ವಿನಿಮಯ

ವರ್ತಕರು ಉತ್ಪಾದಕ ವರ್ಗದಿಂದ ಕೊಂಡು ತಾವು ಮಾರಾಟಮಾಡುತ್ತಿದ್ದರು. ಇಂಥಹವರನ್ನು ಶಾಸನಗಳು 'ಸೆಟ್ಟಿ'ಗಳೆಂಬುದಾಗಿ ಕರೆದಿರುತ್ತವೆ.

ಉತ್ಪಾದಕ ವಿನಿಮಯ ವರ್ತಕರು ಗೃಹ ಕೈಗಾರಿಕೆಗಳ ಮೂಲಕ ತಾವೇ ಉತ್ಪಾದಿಸಿದ ವಸ್ತುಗಳನ್ನು ತಾವೇ ಮಾರಾಟ ಮಾಡುವ ವರ್ತಕರಿವರು. ಕುಂಬಾರ, ಅಕ್ಕಸಾಲಿ, ತೆಲ್ಲಿಗ, ನೇಕಾರ, ಸಮಗಾರ, ಮೇದ ಮುಂತಾದವರು ಈ ವರ್ತಕ ಗುಂಪಿನಲ್ಲಿ ಬರುತ್ತಾರೆ. ಇವರು ಉತ್ಪಾದನೆ - ಮಾರಾಟ ಎರಡೂ ಕಾರ್ಯಗಳನ್ನು ಇವರೇ ನಿರ್ವಹಿಸುತ್ತಿದ್ದರು. ನೇಕಾರರಲ್ಲಿ ಬಟ್ಟೆಗಳನ್ನು ನೇಯುವ ವರ್ಗ ಒಂದಾದರೆ ನೇಯ್ದ ಬಟ್ಟೆಗಳನ್ನು ಮಾರಾಟ ಮಾಡುತ್ತಿದ್ದ ಮತ್ತೊಂದು ವರ್ಗ ಇತ್ತೆಂಬುದು ನಮಗೆ ದೂಸಿಗ ಕೇತಿಸೆಟ್ಟಿ ಮೊದಲಾದ ನಾಮವಿಶೇಷಣಗಳಿಂದ ಶಾಸನಗಳ ಮೂಲಕ ಖಚಿತವಾಗಿ ತಿಳಿಯಬಹುದು. ಇದರಂತೆ ತೆಲ್ಲಿಗರಲ್ಲೂ ತೈಲಿಗಸೆಟ್ಟಿ, ತೆಲ್ಲಿಗ ಸೋಯಿಸೆಟ್ಟಿ, ತೆಲಿಗ ಐಬಿಸೆಟ್ಟಿ ಹೀಗೆ ಇವರ ಹೆಸರುಗಳನ್ನು ಸೆಟ್ಟಿ ಪ್ರತ್ಯಯದಿಂದ ಇವರಲ್ಲೂ ಎಣ್ಣೆಯನ್ನು ಮಾರಾಟ ಮಾಡುತ್ತಿದ್ದ ವರ್ಗ ಇತ್ತೆಂಬುದು ಗೊತ್ತಾಗುತ್ತದೆ.

ಈ ಕುಶಲಕರ್ಮಿ ವರ್ಗದವರು ತಾವು ಮಾಡಿಕೊಡುತ್ತಿದ್ದ ವಸ್ತುಗಳಿಗೆ ಪ್ರತಿಯಾಗಿ ವೇತನವನ್ನು ಪಡೆಯುತ್ತಿದ್ದರು. ಅದು ಹಣ, ವಸ್ತು, ಭೂಮಿ, ಆಯ ಮೊದಲಾದ ರೂಪಗಳಲ್ಲಿತ್ತು. ಕೆಲವೊಂದು ಶಾಸನಗಳು ಇದನ್ನು ದೃಢಪಡಿಸುತ್ತವೆ. ಉದಾ : ಕ್ರಿ.ಶ. 1035ರ ಬಾಗಳಿ ಶಾಸನದಲ್ಲಿಯ 'ಅಕ್ಕಸಾಲಿಯಾಯ ಉಪ್ಪೊಳಗಾಗಿ ಧಾನ್ಯಂಗಳೊಳೆಲ್ಲಂ' ಎಂಬ ಉಲ್ಲೇಖದಿಂದ ಅಕ್ಕಸಾಲಿಗಳು ಆಯವನ್ನು ಪಡೆಯುತ್ತಿದ್ದರೆಂದು ತಿಳಿಯಬಹುದು. ಹೀಗೆ ಅನೇಕ ಶಾಸನಗಳು ಇಲ್ಲಿ ಉಲ್ಲೇಖನೀಯ.

ಆಯಗಾರಿಕೆ ಜೀವಂತವಾಗಿ ಪ್ರಚಲಿತದಲ್ಲಿದ್ದ ಸಾಮಾಜಿಕ ವ್ಯವಸ್ಥೆಯಿಂದ ಇಂದಿನ ನಮ್ಮ ನಗರ ಮತ್ತು ಗ್ರಾಮೀಣ ಜೀವನ ಈಗಾಗಲೇ ಸಾಕಷ್ಟು ದೂರ ಸರಿದಿದ್ದರೂ ತೀರ ಕೆಲವೇ ಹಳ್ಳಿಗಳಲ್ಲಿ ಇದು ಜೀವಂತವಾಗಿದೆ. ಈ ಆಯ ಪದ್ದತಿಯು 'ಬಲೂತಾ' ಎಂಬ ಹೆಸರಿನಿಂದ ಮಹಾರಾಷ್ಟ್ರದಲ್ಲಿ ಸಾರ್ವತ್ರಿಕವಾಗಿ ಕಂಡುಬಂದಿದೆ. ಎಪ್ಪತ್ತರ ದಶಕದಲ್ಲಿಯೂ ಅದು ಆ ರಾಜ್ಯದ ಹಲವು ಕಡೆಗಳಲ್ಲಿ ಉಳಿದುಕೊಂಡಿದೆಯೆಂದು ವರದಿಗಳು ಹೇಳುತ್ತವೆ. ಉತ್ತರ ಭಾರತದ ಹಲವೆಡೆ ಅದನ್ನು 'ಜಜಮಾನಿ' ಎಂದು ಕರೆಯುತ್ತಾರೆ. ಆಯ ಪದ್ಧತಿಯು ಜಜಮಾನಿ, ಬಲೂತಾ ಮತ್ತೆ ಬೇರೆ ಯಾವುದೇ ಹೆಸರಿನಿಂದ ಕರೆಯಲ್ಪಟ್ಟಿರಲಿ, ಅದು ಗ್ರಾಮೀಣ ಭಾರತದಲ್ಲಿ ಬಹು ಪ್ರಾಚೀನ ಕಾಲದಿಂದಲೂ ಇತ್ತೆಂದು ಊಹಿಸಬಹುದು.

ಇನ್ನು ಇವರ ದಾನಕ್ಕೆ ಸಂಬಂಧಿಸಿದಂತೆ ಎರಡು ರೀತಿಯಲ್ಲಿ ಕಾಣಬಹುದು. 1) ವೈಯಕ್ತಿಕ ದಾನ, 2) ಸಾಮೂಹಿಕ ದಾನ ತುಂಬಾ ವಿರಳವಾಗಿ ನಮಗೆ ವೈಯಕ್ತಿಕ ದಾನದ ವಿಷಯಗಳು ಶಾಸನಗಳಿಂದ ದೊರಕುತ್ತವೆ. ಶಾಸನಗಳನ್ನು ದೃಷ್ಟಿಯಲ್ಲಿಟ್ಟು ಹೇಳುವುದಾದರೆ ವೈಯಕ್ತಿಕವಾಗಿ ವರ್ತಕರುಗಳು ನೀಡಿದ ದಾನಗಳಲ್ಲಿ ಭೂದಾನಗಳ ಸಂಖ್ಯೆಯೇ ಜಾಸ್ತಿ ಇರುವುದು. ಈ ಹಿನ್ನೆಲೆಯಲ್ಲಿ ಇವರು ಮಾಡುತ್ತಿದ್ದ ದಾನ-ಧರ್ಮಗಳನ್ನು ನೋಡಿದಾಗ ಇವರ ಆರ್ಥಿಕ ಸ್ಥಿತಿ ಉತ್ತಮವಾಗಿದ್ದು ದೇವಾಲಯವನ್ನು ಕಟ್ಟಿಸುವ ಮಟ್ಟವನ್ನು ತಲುಪಿದ್ದು ಸಮಾಜದಲ್ಲಿ ಇವರ ಸ್ಥಾನಮಾನವನ್ನು ಗುರುತಿಸುತ್ತದೆ.

ದೇವಾಲಯಗಳ ವಿವಿಧ ಕಾರ್ಯಗಳಿಗಾಗಿ ಸಂಯುಕ್ತವಾಗಿ ಬಿಟ್ಟ ದಾನಗಳನ್ನು ಸಾಮೂಹಿಕ ದಾನವೆನ್ನಲಾಗಿದೆ. 1. ಒಂದೇ ಪ್ರಕಾರದ ಕುಶಲಕರ್ಮಿಗಳು ನೀಡಿದ ದಾನಗಳು, 2. ವಿವಿಧ ಪ್ರಕಾರದ ವರ್ತಕರು ಹಾಗೂ ಕುಶಲಕರ್ಮಿಗಳು ನೀಡಿದ ದಾನಗಳು ಎಂದು ಎರಡು ರೀತಿಯಾಗಿ ಅಧ್ಯಯನಕ್ಕಾಗಿ ವಿಭಾಗಿಸಿಕೊಳ್ಳಲಾಗಿದೆ.

ಶಾಸನಗಳ ಆಧಾರದ ಮೇಲೆ ತೆಲ್ಲಿಗರೇ ಅಧಿಕ ಸಂಖ್ಯೆಯ ದಾನಗಳನ್ನು ನೀಡಿರುವುದು ಗೊತ್ತಾಗುತ್ತದೆ. ಹೀಗೆ ಮಧ್ಯಕಾಲೀನ ಕರ್ನಾಟಕದ ಉತ್ಪಾದಕ ವಿನಿಮಯ ವರ್ತಕರು ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ದಾನ ಕಾರ್ಯ ನಿರ್ವಹಿಸಿದ್ದಾರೆ. ಇವುಗಳಲ್ಲಿ ಸಾಮೂಹಿಕ ದಾನಗಳೇ ಅತ್ಯಧಿಕವಾಗಿರುತ್ತವೆ. ಇಲ್ಲಿ ವರ್ತಕರ ದಾನಗುಣ ಹಾಗೂ ಭಕ್ತಿಭಾವಗಳು ಕಂಡುಬರುತ್ತವೆ. ಇದಲ್ಲದೆ ವರ್ತಕರು ಅಂದಿನ ಕಾಲದಲ್ಲಿ ಹೊಂದಿದ್ದ ಉತ್ತಮ ಆರ್ಥಿಕ ಸ್ಥಿತಿಗತಿ ಹಾಗೂ ವಿವಿಧ ಸಂಘಗಳೊಂದಿಗೆ ಅವರು ಇಟ್ಟುಕೊಂಡಿದ್ದ ಸಹಕಾರ ಭಾವನೆಗಳೂ ವ್ಯಕ್ತವಾಗುತ್ತವೆ.

ಉತ್ಪಾದನೆ, ವಿನಿಮಯ ವ್ಯವಹಾರಗಳು ಬೆಳೆಯುತ್ತ ಬಂದಂತೆ ಅವನ್ನು ವ್ಯವಸ್ಥಿತಗೊಳಿಸಿಕೊಳ್ಳುವ ಅಗತ್ಯತೆ ತಲೆದೋರಿದ್ದು ಸಂಘ ನಿರ್ಮಾಣಕ್ಕೆ ಕಾರಣವಾದಂತಿದೆ. ಆದ್ದರಿಂದ ಸಮಾಜ ವ್ಯವಸ್ಥೆಯಲ್ಲಿ ಸಹಕಾರ ತತ್ವಕ್ಕಿರುವ ಮಹತ್ವ ಮನಗಂಡು ಸಮಾನ ವೃತ್ತಿಯವರು ತಮ್ಮ ಸಮಾಜದ ಇಲ್ಲವೆ ಸಮುದಾಯದ ಜನರೊಂದಿಗೆ ಕೂಡಿಕೊಂಡು ಕಟ್ಟಿದ ಶ್ರೇಣಿ (Guilds) ಗಳೇ ಸಂಘಗಳಾದವು. ಪ್ರಾಚೀನ ಬರಹಗಳಲ್ಲಿ ಶ್ರೇಣಿ, ಸಂಘ, ಗಣ, ಪೂಗ, ವ್ರಾತ ಇತ್ಯಾದಿ ಅನೇಕ ಸಮಾನಾರ್ಥ ಪದಗಳಿವೆ.

ಪ್ರಾಚೀನ ಮತ್ತು ಮಧ್ಯಕಾಲೀನ ಕನ್ನಡ ಶಾಸನಗಳಲ್ಲಿ ಸಂಘಕ್ಕೆ ಪರ್ಯಾಯವಾಗಿ ಕೊತ್ತಳಿ, ಒಕ್ಕಲು, ಸಮಯ, ಹಿಟ್ಟು, ಸಂಖ್ಯೆ (30, 40, 50, 60, 500, 1000 ಇತ್ಯಾದಿ) ಗಳು ಬಳಕೆಯಾಗಿವೆ. ಇವುಗಳಲ್ಲಿ ಸಂಘ

ಸೂಚಿಯಾಗಿ ಸಂಖ್ಯೆಗಳನ್ನೇ ಅಧಿಕವಾಗಿ ಉಪಯೋಗಿಸಲಾಗಿದೆ. ಅರುವತ್ತೊಕ್ಕಲು, ಐಯ್ವತ್ತೊಕ್ಕಲು, ಅಯ್ಯಾವೊಳೆ ಐನೂರ್ವರು, ಸಾಲಿಗಸಮಯ, ಎಂಟುಹಿಟ್ಟು, ಪಂಚಮಠ ಇವೇ ಮೊದಲಾದವು ಈ ಸಂಘ ಸಂಸ್ಥೆಗಳು. ಇವುಗಳ ಕುರಿತು ಸಮಗ್ರವಾಗಿ ವಿಶ್ಲೇಷಿಸಲಾಗಿದೆ.

ಒಟ್ಟಾರೆಯಾಗಿ ಶಾಸನ ಹಾಗೂ ಸಾಹಿತ್ಯಗಳ ಹಿನ್ನೆಲೆಯಿಂದ ಕುಶಲಕರ್ಮಿಗಳ ಆರ್ಥಿಕ ಸ್ಥಿತಿಗತಿ ನೋಡಿದಾಗ ತೀರಾ ಉನ್ನತ ಹಂತ ತಲುಪದಿದ್ದರೂ, ಉತ್ತಮವಾದಂಥಹ ಆರ್ಥಿಕ ಮಟ್ಟ ತಲುಪಿದ್ದುದನ್ನು ಅವರು ಮಾಡುತ್ತಿದ್ದ ಉತ್ಪಾದನೆ, ವ್ಯಾಪಾರ, ದಾನ, ಸಂಘಟನೆ ಮೊದಲಾದ ಅಂಶಗಳಿಂದ ನಿರ್ಣಯಿಸಬಹುದು.

ಋಗ್ವೇದದಲ್ಲಿ ಜಾತಿಗಳ ಉಲ್ಲೇಖವಿಲ್ಲವಾದರೂ ಬಡಗಿ, ಕಮ್ಮಾರ, ನಾವಿದ, ವೈದ್ಯ, ಅಕ್ಕಸಾಲಿ, ವ್ಯಾಪಾರಿ, ರಥಕಾರ ಮುಂತಾದ ವೃತ್ತಿಕಾರರ ಹೆಸರಿವೆ. ಇವುಗಳಲ್ಲಿ ಯಾವು ಯಾವುದು ಯಾವ ವರ್ಣಕ್ಕೆ ಸೇರಿದ್ದುವೆಂಬುದನ್ನು ಹೇಳುವುದು ಅಸಾಧ್ಯ. ಋಗ್ವೇದದಲ್ಲಿ 'ಜಾತಿ' ಶಬ್ದವಿಲ್ಲದಿದ್ದರೂ ನಿರುಕ್ತದಲ್ಲಿದೆ. ಕನ್ನಡದ ಮೊದಲ ಕೃತಿ ಕವಿರಾಜಮಾರ್ಗದಲ್ಲಿ ನಾಲ್ಕು ವರ್ಣಗಳನ್ನು ವೈಶ್ಯ, ಬ್ರಾಹ್ಮಣ, ಕ್ಷತ್ರಿಯ, ಶೂದ್ರ ಈ ಅನುಕ್ರಮದಲ್ಲಿ ಹೇಳಿ ಪಶುಪಾಲನೆ, ಅಧ್ಯಯನ, ರಾಜ್ಯಭಾರ, ವ್ಯವಸಾಯಗಳು ಅವರ ವೃತ್ತಿಗಳು ಎಂದಿದೆ. ಒಂದು ಕಾಲಕ್ಕೆ ಪಶುಪಾಲನೆ, ವ್ಯವಸಾಯ ವ್ಯಾಪಾರಾದಿಗಳೆಲ್ಲಾ ವೈಶ್ಯರ ವೃತ್ತಿಯಾಗಿದ್ದು ಶೂದ್ರರದು ಮೇಲಿನವರ ಸೇವೆ ಮಾಡುವುದಷ್ಟೇ ಕೆಲಸವಾಗಿದ್ದು, ಕ್ರಮೇಣ ವ್ಯಾಪಾರ ಮಾತ್ರ ವೈಶ್ಯರ ವೃತ್ತಿಯೆಂದೂ ಪಶುಪಾಲನೆ, ವ್ಯವಸಾಯಗಳು ಶೂದ್ರರ ವೃತ್ತಿಗಳೆಂದೂ ಪರಿಗಣಿತವಾದವು. ಈ ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣನೇ ಶ್ರೇಷ್ಟನೆಂದೂ ಉಳಿದ ವರ್ಣಗಳು ಅವನ ಸೇವೆಗಾಗಿ ಇರುವವೆಂದು ಸ್ಪಷ್ಟೋಕ್ತಿಗಳಿವೆ. ದುರ್ಗಸಿಂಹನ ಪಂಚತಂತ್ರದ ಪ್ರಕಾರ ಬ್ರಾಹ್ಮಣನಿಗೆ ಅಗ್ನಿಯೇ ಗುರು; ಕ್ಷತ್ರಿಯ, ವೈಶ್ಯ ಶೂದ್ರರಿಗೆ ಬ್ರಾಹ್ಮಣನೇ ಗುರು ಇತ್ಯಾದಿ ಆಧಾರಗಳು ನಮಗೆ ಸಾಹಿತ್ಯ ಹಾಗೂ ಶಾಸನಗಳಲ್ಲಿ ದೊರೆಯುತ್ತವೆ.

ಈ ನಾಲ್ಕು ವರ್ಣಗಳೂ, ತಂತಮ್ಮ ವರ್ಣಧರ್ಮವನ್ನು ಅನುಸರಿಸಿಕೊಂಡು ಇರುವುದೇ 'ಧರ್ಮ' ಎಂಬಂತಹ ಮಾತುಗಳು ಇವೆ. ಹುಟ್ಟಿನಿಂದ ಒಬ್ಬ ವ್ಯಕ್ತಿ ಒಂದೊಂದು ಜಾತಿಗೆ ಸೇರುತ್ತಾನೆ. ಮತ್ತು ಆಯಾ ಜಾತಿ ಅನುಸರಿಸಿಕೊಂಡು ಬಂದಿರುವ ವೃತ್ತಿಯನ್ನೇ ಅವನು ಅವಲಂಬಿಸಬೇಕು. ಉದಾ: ಕುಂಬಾರ ಮಡಕೆಯನ್ನು ಮಾಡುವುದು, ರೈತ ಹೊಲವನ್ನು ಉಳುವುದು, ನೇಕಾರ ಬಟ್ಟೆ ನೇಯುವುದು ಇತ್ಯಾದಿ. ಆಯಾ ಜಾತಿಯ

ನಿಯಮಗಳನ್ನು ಆಯಾ ಜಾತಿಯವರು ಅನುಸರಿಸುವುದೇ 'ಧರ್ಮ'. ಇಲ್ಲಿ 'ಧರ್ಮ' ಎಂದರೆ ಮತ ಅಲ್ಲ, ಅನಾದಿ ಕಾಲದಿಂದ ನಡೆದು ಬಂದಿರುವ ಪರಂಪರೆ, ಪದ್ಧತಿ, ಸಹಜ ನಿಯಮ. ಈ ಪರಂಪರೆಗೆ ಕಾಪಾಡುವ, ಶಿಕ್ಷಿಸುವ ಶಕ್ತಿ ಇರುತ್ತದೆ. ಭಾರತದಲ್ಲಿ ಮತದ ನಿಯಮಗಳಿಗಿಂತ ಜಾತಿಯ ನಿಯಮಗಳು ಹೆಚ್ಚು ಕಠಿಣವೆಂಬ ಮಾತು ಒಂದರ್ಥದಲ್ಲಿ ನಿಜ.

ವರ್ಣ-ಜಾತಿ ಪದಗಳು ವಚನಕಾರರಿಗೆ ತಿಳಿದಿದ್ದುದು ಮಾತ್ರವಲ್ಲದೆ ಅವುಗಳ ಬಗ್ಗೆ ಅವರಿಗೆ ಸ್ಪಷ್ಟ ಕಲ್ಪನೆಯೂ ಇದ್ದಿತು. 'ಚತುರ್ವರ್ಣ' ಎಂಬ ಮಾತು ಸಿದ್ಧರಾಮನಲ್ಲಿ ಬರುತ್ತದೆ. ವೀರಶೈವನು ಶೂದ್ರನಾದರೂ ಚತುರ್ವರ್ಣಗಳನ್ನು ಮೀರಿದವನು, ಚತುರ್ವರ್ಣಗಳ ಆಚೆ ಇರುವವನು ಅಥವಾ ಚತುರ್ವರ್ಣಗಳನ್ನು ಅಥವಾ ಚತುರ್ವರ್ಣಗಳು ಪ್ರತಿಪಾದಿಸುವ ಅನುಶ್ರೇಣಿಯನ್ನು ಮನ್ನಿಸಿದವನು ಎನ್ನುತ್ತಾನೆ. ಅಂದರೆ ಚತುರ್ವರ್ಣಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಯಾರೇ ಆಗಲಿ ಯಾವನು ಅವುಗಳ ಮೇಲು ಕೀಳನ್ನು ಗುರುತಿಸುವುದಿಲ್ಲವೋ ಅವನೇ ವೀರಶೈವ. ಒಕ್ಕಲಿಗ ಮುದ್ದಣ್ಣನು ತನ್ನ ವಚನವೊಂದರಲ್ಲಿ ಬ್ರಾಹ್ಮಣ ವೇದವನ್ನೋದುವ, ಕ್ಷತ್ರಿಯ ಯುದ್ಧ ಮಾಡುವ, ವೈಶ್ಯ ವ್ಯಾಪಾರ ಮಾಡುವ, ಶೂದ್ರ ಉಳುಮೆ ಮಾಡುವ ವೃತ್ತಿಯವರೆಂದು ಹೇಳುತ್ತಾ ತಾನು ಶೂದ್ರನಾದರೂ ತನ್ನ ಮಿತಿಗಳನ್ನು ಲಕ್ಷ್ಯಕ್ಕೆ ತಾರದೆ ತನ್ನನ್ನು ಒಪ್ಪಿಕೊಳ್ಳಬೇಕೆಂದು ತನ್ನ ಆರಾಧ್ಯ ದೈವನಲ್ಲಿ ಮೊರೆಯಿಡುತ್ತಾನೆ. ವರ್ಣ ವ್ಯವಸ್ಥೆಯ ಅರಿವು ಸಾಂಪ್ರದಾಯಿಕವಾಗಿ ಬಂದದ್ದು, ಅದನ್ನು ವಚನಕಾರರು ತಮ್ಮ ವಚನಗಳಲ್ಲಿ ಉಲ್ಲೇಖಿಸಿದರು.

ಕರ್ನಾಟಕದಲ್ಲಿ ಹಿಂದೆ 'ಅಷ್ಟಾದಶ ಜಾತಿ' ಅಥವಾ 'ಹದಿನೆಂಟು ಜಾತಿ' ಎಂಬುದು ಸಾಮಾನ್ಯವಾದ ಮಾತಾಗಿದ್ದಿತು. ಹದಿನೆಂಟು ಜಾತಿಗಳಲ್ಲಿ ಮೊದಲನೆಯದು ಬ್ರಾಹ್ಮಣ. ಕೊನೆಯದು 'ಅಂತ್ಯಜ' ಅಥವಾ ಹೊಲೆಯ. ಜಾತಿಗಳಲ್ಲೆಲ್ಲಾ ಬ್ರಾಹ್ಮಣ ಶ್ರೇಷ್ಠ, ಹೊಲೆಯ ಕನಿಷ್ಠ ಎಂಬುದು ಸಾರ್ವತ್ರಿಕವಾಗಿ ಒಪ್ಪಿತವಾಗಿದ್ದಿತು. 'ಜಾತಿಯೊಳೆಲ್ಲಮುತ್ತಮದ ಜಾತಿಯ ವಿಪ್ರಕುಲ' ಎಂಬ ಪಂಪನ ಮಾತಾಗಲಿ, 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ' ಎಂಬ ಬಸವಣ್ಣನವರ ಮಾತಾಗಲಿ ಇದನ್ನೇ ತಿಳಿಸುತ್ತದೆ. 'ಬ್ರಾಹ್ಮಣ ಮೊದಲಾಗಿ ಶ್ವಪಚ ಕಡೆಯಾಗಿ' ಎಂಬ ಹಾವಿನಹಾಳ ಕಲ್ಲಯ್ಯನ ಮಾತೂ ಅದನ್ನೇ ಹೇಳುತ್ತದೆ. 'ಅಷ್ಟಾದಶಜಾತಿ' ಎಂಬ ಮಾತನ್ನು ಬೇರೆ ಬೇರೆ ವಚನಕಾರರು ಉಲ್ಲೇಖಿಸುತ್ತಾರೆ.

ಹದಿನೆಂಟು ಜಾತಿ ಜನರ ವೃತ್ತಿಗಳನ್ನು 'ಹದಿನೆಂಟು ಕಾಯಕ' ವೆಂದಿದ್ದಾನೆ ಕನ್ನಡಿ ಕಾಯಕದ ಅಮ್ಮಿದೇವ. ಸೊಡ್ಡಳ ಬಾಚರಸ ಹಾಗೂ ಅಂಬಿಗರ ಚೌಡಯ್ಯ ಇಬ್ಬರೂ ತಮ್ಮ ವಚನಗಳೊಂದರಲ್ಲಿ ಹದಿನೆಂಟು ಜಾತಿಗಳ ಉಲ್ಲೇಖ ಮಾಡುತ್ತಾರೆ. ಮನುಷ್ಯನ ದೇಹದ ಮೇಲ್ತುದಿಯಿಂದ ಕೆಳಗಿನ ಅಂಗಾಲುವರೆಗೆ ಇರುವ ಒಂದೊಂದು ಅಂಗಕ್ಕೂ ಒಂದೊಂದು ಜಾತಿಯನ್ನು ಸಮೀಕರಿಸಿ ಮನುಷ್ಯ ಸಮಾಜ ಒಬ್ಬ ವ್ಯಕ್ತಿಯಿದ್ದಂತೆ, ಅದು ಒಂದು ಅಖಂಡ ವಸ್ತು, ಅದರ ಭಿನ್ನ ಭಿನ್ನ ಭಾಗಗಳೇ ಜಾತಿಗಳು ಎಂಬ ಕಲ್ಪನೆ ವಿನೂತನವಾದುದು. ಇನ್ನು ನಮಗೆ ದೊರಕುವ ಬೇರೆ ಪಟ್ಟಿಗಳಲ್ಲಿಯೂ ಹೊಲೆಯ, ಮಾದಿಗರ ಹೆಸರುಗಳು ಕೊನೆಯಲ್ಲಿವೆ.

ಜಾತಿಯಲ್ಲಿ ಪ್ರಧಾನವಾದುದು ಹುಟ್ಟು ಎಂಬುದನ್ನು ಉರಿಲಿಂಗ ಪೆದ್ದಿ ಗುರುತಿಸಿದ್ದಾನೆ. ಬ್ರಾಹ್ಮಣನ ಮಗ ಬ್ರಾಹ್ಮಣ, ಕ್ಷತ್ರಿಯನ ಮಗ ಕ್ಷತ್ರಿಯ, ವೈಶ್ಯನ ಮಗ ವೈಶ್ಯ, ಶೂದ್ರನ ಮಗ ಶೂದ್ರ. ಅದೇ ತರ್ಕವನ್ನು ಮುಂದುವರಿಸಿದರೆ, ಕಮ್ಮಾರನ ಮಗ ಕಮ್ಮಾರ, ಮಡಿವಾಳನ ಮಗ ಮಡಿವಾಳ ಇತ್ಯಾದಿ. ಜಾತಿ ವ್ಯವಸ್ಥೆಯ ಅಡಿಗಲ್ಲುಗಳಾದ ಉದ್ಯೋಗ ಮತ್ತು ಜನ್ಮಗಳೆರಡರ ವಿಷಯವು ವಚನಕಾರರಿಗೆ ತಿಳಿದಿತ್ತೆಂಬುದು ಸ್ಪಷ್ಟವಾಗುತ್ತದೆ.

ಹದಿನೆಂಟು ಜಾತಿಗಳನ್ನು 'ಎಡಗೈ' ಜಾತಿಗಳೆಂದೂ 'ಬಲಗೈ' ಜಾತಿಗಳೆಂದೂ ವಿಭಾಗ ಮಾಡಿದ್ದುದರ ಉಲ್ಲೇಖ ವಚನಗಳಲ್ಲಿ ದೊರೆಯದಿದ್ದರೂ ಇವುಗಳ ವಿಷಯ ಶಾಸನಗಳಲ್ಲಿ ಕ್ರಿ.ಶ. 459 ರಷ್ಟು ಹಿಂದೆಯೇ ಉಕ್ತವಾಗಿರುವ ವಿಚಾರವನ್ನು ಪಿ.ವಿ. ನಾರಾಯಣ ಉಲ್ಲೇಖಿಸುತ್ತಾರೆ. 'ಬಲಗೈ' ವರ್ಗವು ಬಣಜಿಗರಿಂದ ಮೊದಲಾಗಿ ಹೊಲೆಯರಿಂದ ಕೊನೆಯಾದರೆ, 'ಎಡಗೈ' ವರ್ಗವು ಪಾಂಚಾಲರಿಂದ ಮೊದಲುಗೊಂಡು ಮಾದಿಗರಿಂದ ಮುಗಿಯುತ್ತದೆ. ತಮಿಳು ಶಾಸನವೊಂದರಲ್ಲಿ 'ಇಡಂಗೈ' (ಎಡಗೈ)ನ ತೊಂಭತ್ತೆಂಟು ಉಪಜಾತಿಗಳ ಹೆಸರನ್ನು ಹೇಳಿ, ಇವರನ್ನು ವಣಿಯ ಬ್ರಾಹ್ಮಣ ಮತ್ತು ವೆಲ್ಲಾಲ ಕುಲದ ಭೂ ಮಾಲೀಕರು ಕ್ರೂರವಾಗಿ ನಡೆಸಿಕೊಳ್ಳುತ್ತಿದ್ದ ವಿಚಾರವು ಉಕ್ತವಾಗಿದೆ. ಅಲ್ಬೆರೂನಿ ಹದಿನಾರು ಜಾತಿಗಳನ್ನು ಹೆಸರಿಸುತ್ತಾನೆ. ಬರ್ಟನ್‌ಸ್ಟೈನ್ ಕೂಡ ಈ ಕುರಿತು ಉಲ್ಲೇಖಿಸುತ್ತಾನೆ. ಈ ಕುರಿತಾದ ಎಲ್ಲಾ ವಿಷಯಗಳನ್ನು ವಿವರವಾಗಿ ಚರ್ಚಿಸಲಾಗಿದೆ.

ವಚನಗಳ ಉಲ್ಲೇಖಗಳಿಂದ ಆಗ ವೃತ್ತಿಗಳು ಜಾತಿಗಳೂ ಆಗಿದ್ದವೆಂಬುದು ಗೊತ್ತಾಗುತ್ತದೆ. ಆಶ್ಚರ್ಯದ ವಿಷಯವೆಂದರೆ ಶಾಸನಗಳಲ್ಲೆಲ್ಲೂ ಕೂಡ ಅವರನ್ನು ಜಾತಿ ಎಂದು ಉಲ್ಲೇಖಿಸಿಲ್ಲ, ಆದರೆ ವಚನಕಾರರು ಜಾತಿ ಎಂದು ಉಲ್ಲೇಖಿಸುತ್ತಾರೆ. ಪ್ರಾಚೀನ ಕಾಲದಲ್ಲಿ ವರ್ಣಗಳ ಮಿಶ್ರಣವು ವರ್ಣಸಂಕರವೆನ್ನಿಸಿಕೊಂಡಂತೆ, ಮಧ್ಯಯುಗದಲ್ಲಿದ್ದ

ಜಾತಿಗಳ ಮಿಶ್ರಣವು 'ಜಾತಿ ಸಂಕರ' ವೆನ್ನಿಸಿಕೊಳ್ಳಬೇಕು. ಬಸವಣ್ಣ ಈ ಕುರಿತು ಉಲ್ಲೇಖಿಸುತ್ತಾನೆ. ಜಾತಿಗಳಲ್ಲಿ ವಿಪ್ರ ಮೇಲಿನವನು, ಶ್ವಪಚ ಅಥವಾ ಅಂತ್ಯಜ ಕಡೆಯವನು ಎಂಬುದನ್ನು ವಚನಕಾರರು ಹೇಳುವಾಗ ತಮ್ಮ ಕಾಲದ ಒಟ್ಟು ಜನಾಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದಾರೆಂದು ಅರ್ಥ ಮಾಡಿಕೊಳ್ಳಬೇಕು. ಹಾವಿನಹಾಳ ಕಲ್ಲಯ್ಯ '*ಜಾತಿಯಲ್ಲಿ ಅಧಿಕವೆಂದು ನುಡಿವರು ವಿಪ್ರಜನರು, ಶ್ವಪಚ ಮಚ್ಚಿಗ ಬೋಯ ಕುಲಜರೆ ದ್ವಿಜರು,* ಅಗಸ ಕಮ್ಮಾರ ನಾವಿದ ಕುಲಜರೆ ದ್ವಿಜರು' ಎಂದು ವಚನವೊಂದರಲ್ಲಿ ಹೇಳುತ್ತಾನೆ. ಅಂದರೆ ಇಲ್ಲಿ 'ದ್ವಿಜ' ಎಂದರೆ 'ಎರಡು ಹುಟ್ಟಿನವರು' ಅನ್ನುವ ಕಲ್ಪನೆಯಿದೆ. ಜಾತಿಯಲ್ಲಿ ಬ್ರಾಹ್ಮಣ ಶ್ರೇಷ್ಠನಾದಂತೆ ಶ್ವಪಚ ಮಚ್ಚಿಗ ಬೋಯ, ಅಗಸ, ಕಮ್ಮಾರ ನಾವಿದ ಕುಲದವರೂ ದ್ವಿಜರೇ ಎಂಬುದು ಈತನ ಅಭಿಪ್ರಾಯ. ಬ್ರಾಹ್ಮಣರು ವಿದ್ಯೆಯನ್ನು ಕಲಿತು ಎರಡನೇ ಹುಟ್ಟು ಪಡೆದು ದ್ವಿಜರಾಗುವಂತೆ ಇವರು ಕೂಡ ಕುಲವಿದ್ಯೆಯನ್ನು ಕಲಿಯುವುದರಿಂದ ಎರಡನೇ ಹುಟ್ಟು ಪಡೆದು ದ್ವಿಜರಾಗುತ್ತಾರೆ ಎಂಬುದು ಹಾವಿನಹಾಳ ಕಲ್ಲಯ್ಯನ ವಾದವಿರಬೇಕು.

ಉರಿಲಿಂಗಪೆದ್ದಿಯ ವಚನವೊಂದರಲ್ಲಿ ಬ್ರಾಹ್ಮಣರೂ ಹೊಲೆಯರೂ ಮಲಸೋದರರು ಜಮದಗ್ನಿ ಋಷಿಗೆ ರೇಣುಕೆ ಮತ್ತು ಮಾತಂಗಿಯಲ್ಲಿ ಹುಟ್ಟಿದವರು ಇವರು ಎಂದು ತಿಳಿಸುತ್ತಾನೆ. 'ಜಾತಿ ಸಂಕರ' ಎಂಬ ಮಾತನ್ನು ಬಸವಣ್ಣ ಬಳಸಿದ್ದಾನೆ. ಆಯಾ ಜಾತಿಯವರು ಆಯಾ ಜಾತಿಯಲ್ಲೇ ಮದುವೆಯಾಗಿ ಮಕ್ಕಳನ್ನು ಪಡೆಯುವುದು ಜಾತಿಗಳಿಗೆ ಮಾನ್ಯವಾದುದು. ಬೇರೆ ಬೇರೆ ಜಾತಿಗಳವರ ವಿವಾಹ ಜಾತಿಸಂಕರವೆನ್ನಿಸಿಕೊಳ್ಳುತ್ತದೆ. ಈ ಜಾತಿಸಂಕರವು ಬಸವಣ್ಣನವರ ಸಮಕಾಲೀನದಲ್ಲಿ ನಡೆಯಿತು.

ಕುಡುತಿನಿ ಹಾಗೂ ಕೊಳಗಲ್ಲು ಶಾಸನಗಳೆರಡು ಕೂಡ 'ಕರ್ಮ್ಮಾರದ್ವಿಜ'ರನ್ನು ಉಲ್ಲೇಖಿಸುವುದರಿಂದ ಕರ್ಮ್ಮಾರರು ತಮ್ಮನ್ನು ದ್ವಿಜರೆಂದು ಕರೆದುಕೊಂಡಿದ್ದು ಗೊತ್ತಾಗುತ್ತದೆ. ಉಪನಯನದಂಥಹ ಸಂಸ್ಕಾರಗಳಾದಾಗ ಮಾತ್ರ ದ್ವಿಜರು ಎಂದು ಕರೆಯುವುದರಿಂದ ಇವರೂ ಕೂಡ ಉಪನಯನ ಮೊದಲಾದ ಸಂಸ್ಕಾರಗಳನ್ನು ಆಗಿನ ಕಾಲದಲ್ಲಿ ರೂಢಿಸಿಕೊಂಡಿದ್ದು ಗೊತ್ತಾಗುತ್ತದೆ. ಹಾಗೂ ಸಾಧಾರಣವಾಗಿ ವಿಶ್ವಕರ್ಮರಲ್ಲಿ ಈಗಲೂ ಕೂಡ ಈ ಪದ್ಧತಿ ಇದೆ.

ನೇಕಾರರು, ಬಡಗಿಗಳು, ಅಕ್ಕಸಾಲಿಗರು, ಚಮ್ಮಾರರು, ಮೇದರು, ಕ್ಷೌರಿಕರು, ಕುಂಬಾರರು ಮೊದಲಾದ ಕುಶಲ ವೃತ್ತಿಪರ ವಚನಕಾರರು ನಮಗೆ 12ನೇ ಶತಮಾನದಲ್ಲಿ ಕಂಡುಬರುತ್ತಾರೆ. ಇವರನ್ನು ಗುರುತಿಸಿ ಇವರು ತಮ್ಮ ಜಾತಿ ಹಾಗೂ ವೃತ್ತಿಗಳ ಕುರಿತಾಗಿ ಬರೆದ ವಚನಗಳೆಲ್ಲವನ್ನೂ ಕ್ರೂಢೀಕರಿಸಲಾಗಿದೆ.

ವಚನಕಾರರಿದ್ದ ಸಮಾಜದಲ್ಲಿ ಜನ ಡೋಹರ ಕಕ್ಕ, ಮಾದಾರ ಚನ್ನ, ಓಹಿಲದೇವ, ಉದ್ಭಟಯ್ಯರನ್ನು ಕೀಳು ಎಂದು ಭಾವಿಸಿದ್ದು ಕಂಡುಬರುತ್ತದೆ. ಬಹುತೇಕ ಇವರು ಮಾಡುತ್ತಿದ್ದ ವೃತ್ತಿಯಿಂದ ಹೀಗೆ ಪರಿಗಣಿಸಿರಬೇಕು. ಇದನ್ನು ಗಮನಿಸಿದ ವಚನಕಾರರು ತಮ್ಮ ವಚನಗಳಲ್ಲಿ 'ಅಸಿಯಾಗಲಿ ಕೃಷಿಯಾಗಲಿ, ವಾಚಕ ವಾಣಿಜ್ಯ ಮಸಿಯಾಗಲಿ, ಮಾಡುವಲ್ಲಿ ಹುಸಿಯಿಲ್ಲದಿರಬೇಕು. ಆದು ಅಸಮಾಕ್ಷನ ಬರವು. ಪಶುಪತಿಯ ಇರವು ಎಂದು ಹೇಳುವ ಮೂಲಕ ಕಾಯಕದಲ್ಲಿ ಮೇಲು-ಕೀಳೆಂಬುದಿಲ್ಲ. ಕಾಯಕ ಸೂತ್ರದಲ್ಲಿ ಎಲ್ಲವೂ ಎಲ್ಲರೂ ಸಮಾನ, ಮಾಡುವ ಕಾಯಕ ಶಿವನಿಂದ ವರವಾಗಿ ಬಂದುದು, ಮಾಡುವ ಕಾಯಕದಲ್ಲೇ ಶಿವನಿರುವನು' ಎಂದು ಮೆರೆಮಿಂಡಯ್ಯನ ವಚನಕಾರ ಹೇಳುತ್ತಾನೆ.

ಹೀಗೆ ವೃತ್ತಿಗಳ ಸ್ಥಾನಮಾನದ ಕುರಿತು ವಚನಕಾರರ ಅಭಿಪ್ರಾಯಗಳನ್ನು ವಿವರವಾಗಿ ಚರ್ಚಿಸಲಾಗಿದೆ. ವಚನಕಾರರು ಕಾಯಕತತ್ವವನ್ನು ಪರಿಚಯಿಸುವ ಮೂಲಕ ವೃತ್ತಿ ತಾರತಮ್ಯವನ್ನು ಮಾಡದಂತೆಯು ಹಾಗೂ ಎಲ್ಲ ವೃತ್ತಿಗಳು ಸಾಮಾಜಿಕವಾಗಿ ಸಮಾನ ಸ್ಥಾನಮಾನ ಹೊಂದಿವೆ. ಯಾವುದೂ ಮೇಲಲ್ಲ, ಕೀಳಲ್ಲ ಎಂದು ತಮ್ಮ ವಚನಗಳ ಮೂಲಕ ವ್ಯಕ್ತಪಡಿಸಿದ್ದಾರೆ. ಆದರೂ ವೃತ್ತಿಯ ಮೇಲು-ಕೀಳು ಹೋಗಲಿಲ್ಲವೆಂದೇ ನಿರ್ಣಯಿಸಬಹುದು.

ಮಧ್ಯಕಾಲೀನ ವೃತ್ತಿಪರರ ಸ್ಥಾನಮಾನದ ಕುರಿತು ಭಾರತದ ಎಡಪಂಥದ ಇತಿಹಾಸಕಾರರು ಫ್ಯೂಡಲಿಸಂ ಚೌಕಟ್ಟಿನಲ್ಲಿ ಕೆಲ ತೀರ್ಮಾನಗಳನ್ನು ಮಾಡಿದ್ದಾರೆ. ಅದೆಂದರೆ ದೇವಾಲಯ ಮತ್ತು ಬ್ರಾಹ್ಮಣ ವಿಧಿಗಳ ಬೆಳವಣಿಗೆ ಫ್ಯೂಡಲಿಸಂನ ಒಂದು ಲಕ್ಷಣವಾಗಿದ್ದು, ಈ ಕಾಲದ ವೃತ್ತಿಪರರನ್ನು ಪರಾಧೀನರನ್ನಾಗಿ ಮಾಡುವ ಪ್ರಕ್ರಿಯೆ ಎಂಬಂತೆ ನೋಡಲಾಗಿದೆ. ಮಧ್ಯಕಾಲದ ವೃತ್ತಿಪರರು ದೇವಾಲಯ ಸಂಸ್ಕೃತಿಯಲ್ಲಿ ಶೋಷಣೆಗೆ ಒಳಗಾದರು ಹಾಗೂ ವೀರಶೈವವು ಅನೇಕ ಉತ್ಪಾದನ ಹಾಗೂ ಹಂಚಿಕೆಯ ಪ್ರಕ್ರಿಯೆಗಳನ್ನೊಳಗೊಂಡ ವಿವಿಧ ಸಾಮಾಜಿಕ ವಿಭಾಗಗಳ ಒಗ್ಗೂಡುವಿಕೆಯಿಂದ ಹುಟ್ಟಿದ ಮತ ಚಳುವಳಿ ಎಂದು ಅಭಿಪ್ರಾಯಿಸುತ್ತಾರೆ.

ಆದರೆ ನಮಗೆ ಸಿಗುವ ಶಾಸನಾಧಾರಗಳ ಮೂಲಕ ಈ ತೀರ್ಮಾನಗಳನ್ನು ತಲುಪುವುದು ಅಷ್ಟು ಸಮಂಜಸವೆನಿಸಲಾರದು. ಇದಕ್ಕೆ ಆಧಾರವಾಗಿ ಅನೇಕ ಶಾಸನೋಲ್ಲೇಖಗಳನ್ನು ತೆಗೆದುಕೊಂಡು ಅಧ್ಯಾಯದಲ್ಲಿಯೇ ವಿಶ್ಲೇಷಿಸಲಾಗಿದೆ. ಕುಶಲಕರ್ಮಿಗಳ ಸಾಮಾಜಿಕ ಸ್ಥಾನಮಾನವನ್ನು ಶಾಸನಗಳ ಹಿನ್ನೆಲೆಯಿಂದ ನೋಡಿದಾಗ ಉತ್ತಮವಾದ ಸಾಮಾಜಿಕ ಸ್ಥಾನಮಾನ ದೊರಕಿದುದು ಗೊತ್ತಾಗುತ್ತದೆ. ಈ ಅವಧಿಯಲ್ಲಿ ಬೃಹತ್ ಕೈಗಾರಿಕೆಗಳಿಗಿಂತ ಗೃಹಕೈಗಾರಿಕೆಗಳೇ ಪ್ರಮುಖವಾಗಿದ್ದು ಉತ್ಪನ್ನಗಳು ಹೆಚ್ಚು ಕೌಶಲ್ಯಪೂರ್ಣವಾಗಿದ್ದವು.

ನೇಕಾರರು, ಕಮ್ಮಾರರು ಹಾಗೂ ತೆಲ್ಲಿಗರ ಕುರಿತು ಹೆಚ್ಚಿನ ಶಾಸನಗಳಿವೆ. ಈ ಶಾಸನಗಳಿಂದ ಇವರು ಉತ್ತಮವಾದ ಸಾಮಾಜಿಕ ಸ್ಥಾನಮಾನ ಹೊಂದಿದ್ದು, ಆರ್ಥಿಕವಾಗಿ ಏಳಿಗೆ ಹೊಂದಿದ ವಿಷಯಗಳು, ಜೊತೆಗೆ ಉಪನಯನ ಮೊದಲಾದ ಸಂಸ್ಕಾರಗಳನ್ನು ರೂಢಿಸಿಕೊಂಡಿದ್ದು, ದೇವಾಲಯವನ್ನು ತಾವೇ ಸ್ವತಃ ಕಟ್ಟಿಸಿದ್ದು, ಅಲ್ಲಿ ಆಚಾರ್ಯರುಗಳನ್ನು ನೇಮಿಸಿ, ಅಲ್ಲದೆ ಬೇರೆ ಬೇರೆ ರೀತಿಯ ದಾನ ನೀಡಿದ ವಿವರಗಳು ಇತ್ಯಾದಿ ಅಂಶಗಳಿಂದ ಇವರು ಸಾಮಾಜಿಕವಾಗಿ ಬೆಳವಣಿಗೆ ಹೊಂದಿದ್ದು ಕಂಡುಬರುತ್ತದೆ.

ಈ ವೃತ್ತಿಪರ ಕುಶಲಕರ್ಮಿಗಳಲ್ಲಿ ಶಿವೋಪಾಸಕರು, ವಿಷ್ಣುವಿನ ಉಪಾಸಕರು, ಬ್ರಹ್ಮನ ಉಪಾಸಕರು, ಜಿನೋಪಾಸಕರು ಹಾಗೂ ಕಾಳಿಯ ಆರಾಧಕರೂ ಇದ್ದರು. ಈ ಕುರಿತಾಗಿ ವಚನಗಳು ಹಾಗೂ ಶಾಸನಗಳು ಬೆಳಕು ಚೆಲ್ಲಿವೆ ಅವುಗಳನ್ನು ಕ್ರೂಢೀಕರಿಸಿ ಚರ್ಚಿಸಲಾಗಿದೆ.

ಹೀಗೆ ಪ್ರಬಂಧವನ್ನು ರಚಿಸಲು ಇಟ್ಟುಕೊಂಡ ಎಲ್ಲಾ ಉದ್ದೇಶಗಳನ್ನು ಆಯಾಯ ಅಧ್ಯಾಯಗಳಲ್ಲಿ ಸಾಧ್ಯವಾದಷ್ಟು ಕೂಲಂಕುಷವಾಗಿ ವಿಶ್ಲೇಷಿಸಿ ಪೂರ್ಣಗೊಳಿಸಲಾಗಿದೆ.



ಅಂಕನಾಥೇಶ್ವರ ದೇವಾಲಯದ ಮುಂಭಾಗದಲ್ಲಿರುವ ಪ್ರಸ್ತುತ ಗಾಣದ ಕಲ್ಲಿನ ಶಾಸನ

ವಾಜಮಂಗಲ, ಮೈಸೂರು ಜಿಲ್ಲೆ



ಪ್ರಸ್ತುತ ಗದ್ದೆಯೊಂದರಲ್ಲಿರುವ ಗಾಣದ ಕಲ್ಲು

ಚಟ್ಟನಹಳ್ಳಿ ಪಾಳ್ಯ, ಮೈಸೂರು ಜಿಲ್ಲೆ



*ಜೇಡರ ದಾಸಿಮಯ್ಯಂಗಳು ದೇವರಿಗೆ ವಸ್ತ್ರ ಕುಡುವ ಠಾವು*

ಜೇಡರ ದಾಸಿಮಯ್ಯ ಶಿವನಿಗೆ ವಸ್ತ್ರಕೊಡುತ್ತಿರುವ ವಿಗ್ರಹ

ಅಬ್ಬಲೂರು, ಹಾವೇರಿ ಜಿಲ್ಲೆ



*ಕುಂಬಾಱಗುಂಡನ ಮುಂದೆ ಬಂದಾಡಿದ ನಂಮ ಶಿವನು*

ಕುಂಬಾರಗುಂಡನು ಗಡಿಗೆ ಬಾರಿಸುತ್ತ ಕುಳಿತ ಚಿತ್ರ,

ಅಬ್ಬಲೂರು, ಹಾವೇರಿ ಜಿಲ್ಲೆ

**ಶಾಸನ ಸಂಪುಟಗಳು**

ಎಪಿಗ್ರಾಫಿಯಾ ಕರ್ನಾಟಿಕ ಸಂಪುಟಗಳು, I, II, III, IV, V, VI, VII, VIII, IX, X, XI, XII, XIII (Revised)

ಎಪಿಗ್ರಾಫಿಯಾ ಕರ್ನಾಟಿಕ ಸಂಪುಟಗಳು, II, III, V, VII, VIII, X, XI, XV, XVI (Old)

ಎಪಿಗ್ರಾಫಿಯಾ ಇಂಡಿಕಾ ಸಂಪುಟಗಳು, VI, XIII, XIV

ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್ ಸಂಪುಟಗಳು, IX (i,ii), XI(i,ii), XV, XVIII, XX

ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್ ಸಂಪುಟಗಳು, I, II, IV, V, VI

ಕನ್ನಡ ವಿಶ್ವವಿದ್ಯಾನಿಲಯ ಶಾಸನ ಸಂಪುಟಗಳು, I, II, VI, VII

ಮೈಸೂರು ಆರ್ಕಿಯಾಲಜಿಕಲ್ ರಿಪೋರ್ಟ್ಸ್, 1910, 1916, 1929, 1930, 1932, 1934, 1936, 1940, 1942

ಧಾರವಾಡ ಜಿಲ್ಲೆಯ ಶಾಸನ ಸೂಚಿ, (ಸಂ) ಕಲಬುರ್ಗಿ ಎಂ.ಎಂ., ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1975.

ವಿಜಾಪುರ ಜಿಲ್ಲೆಯ ಶಾಸನ ಸೂಚಿ, (ಸಂ) ಕಲಬುರ್ಗಿ ಎಂ.ಎಂ., ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1976.

ಧಾರವಾಡ ತಾಲ್ಲೂಕಿನ ಶಾಸನಗಳು, (ಸಂ) ಕಲಬುರ್ಗಿ ಎಂ.ಎಂ., ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1976.

**ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿ : ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, 2001**

1. ***ಬಸವಣ್ಣನವರ ವಚನ ಸಂಪುಟ***, (ಸಂ) ಕಲಬುರ್ಗಿ ಎಂ.ಎಂ.
2. ***ಅಲ್ಲಮಪ್ರಭುದೇವರ ವಚನ ಸಂಪುಟ***, (ಸಂ) ಮಲ್ಲಾಪುರ ಬಿ.ವ್ಹಿ.
3. ***ಚನ್ನಬಸವಣ್ಣನವರ ವಚನ ಸಂಪುಟ***, (ಸಂ) ಮಲ್ಲಾಪುರ ಬಿ.ವ್ಹಿ.
4. ***ಸಿದ್ಧರಾಮೇಶ್ವರರ ವಚನ ಸಂಪುಟ***, (ಸಂ) ವಿದ್ಯಾಶಂಕರ ಎಸ್.
5. ***ಶಿವಶರಣೆಯರ ವಚನ ಸಂಪುಟ***, (ಸಂ) ವೀರಣ್ಣ ರಾಜೂರ.
6. ***ಸಂಕೀರ್ಣ ವಚನ ಸಂಪುಟ***, ಸಂಪುಟ : 1 (ಸಂ) ಕಲಬುರ್ಗಿ ಎಂ.ಎಂ.
7. ***ಸಂಕೀರ್ಣ ವಚನ ಸಂಪುಟ***, ಸಂಪುಟ : 2 (ಸಂ) ವಿದ್ಯಾಶಂಕರ ಎಸ್.
8. ***ಸಂಕೀರ್ಣ ವಚನ ಸಂಪುಟ***, ಸಂಪುಟ : 3 (ಸಂ) ಹಿರೇಮಠ ಬಿ.ಆರ್.
9. ***ಸಂಕೀರ್ಣ ವಚನ ಸಂಪುಟ***, ಸಂಪುಟ : 4 (ಸಂ) ಹಿರೇಮಠ ಬಿ.ಆರ್.
10. ***ವಚನ ಪರಿಭಾಷಾ ಕೋಶ***, (ಸಂ) ಮಹಾದೇವಪ್ಪ ಎನ್.ಜಿ.

**ವಚನ ಸಂಕಲನಗಳು**

ಬಸವರಾಜು, ಎಲ್. (ಸಂ), ***ಶಿವದಾಸ ಗೀತಾಂಜಲಿ,*** ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲ, ಮೈಸೂರು, 1963.

ಬಸವರಾಜು, ಎಲ್. (ಸಂ), ***ಅಲ್ಲಮನ ವಚನಗಳು,*** ಗೀತಾ ಬುಕ್ ಹೌಸ್, ಮೈಸೂರು, 1977.

ಬಸವರಾಜು, ಎಲ್. (ಸಂ), ***ದೇವರ ದಾಸಿಮಯ್ಯನ ವಚನಗಳು,*** ಗೀತಾ ಬುಕ್ ಹೌಸ್, ಮೈಸೂರು, 1985.

ಬಸವರಾಜು, ಎಲ್. (ಸಂ), ***ಬಸವಣ್ಣನವರ ವಚನಗಳು,*** ಗೀತಾ ಬುಕ್ ಹೌಸ್, ಮೈಸೂರು, 1988.

ಬಸವರಾಜು, ಎಲ್. (ಸಂ), ***ಅಕ್ಕನ ವಚನಗಳು***, ಗೀತಾ ಬುಕ್ ಹೌಸ್, ಮೈಸೂರು, 1990.

ಬಸವರಾಜು, ಎಲ್. (ಸಂ), ***ಬಸವಣ್ಣನವರ ಷಟ್‌ಸ್ಥಲ ವಚನಗಳು***, ಶ್ರೀ ಬಸವೇಶ್ವರ ಗ್ರಂಥ, ವಿಶ್ವವಿದ್ಯಾನಿಲಯ, ಗುಲ್ಬರ್ಗಾ, 1990.

ಬಸವರಾಜು, ಎಲ್. (ಸಂ), ***ಅಲ್ಲಮನ ವಚನ ಚಂದ್ರಿಕೆ,*** ಲೋಹಿಯಾ ಪ್ರಕಾಶನ, ಬಳ್ಳಾರಿ, 2001.

ಸಣ್ಣಯ್ಯ, ಬಿ.ಎಸ್. (ಸಂ), ***ಮೋಳಿಗೆ ಮಾರಯ್ಯನ ವಚನಗಳು***, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1969.

ಸಣ್ಣಯ್ಯ, ಬಿ.ಎಸ್. (ಸಂ), ***ಶಿವಲೆಂಕ ಮಂಚಣ್ಣ ಮತ್ತು ಢಕ್ಕೆಯ ಬೊಮ್ಮಣ್ಣಗಳ ವಚನಗಳು***, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, 1971.

ಸಣ್ಣಯ್ಯ, ಬಿ.ಎಸ್. (ಸಂ), ***ಅರಿವಿನ ಮಾರಿತಂದೆಗಳ ವಚನಗಳು***, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, 1971.

ಸುಂಕಾಪುರ, ಎಂ.ಎಸ್. (ಸಂ), ***ಸಕಲ ಪುರಾತನರ ವಚನಗಳು***, ಸಂಪುಟ-2, ಕನ್ನಡ ಅಧ್ಯಯನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1976.

ಸುಂಕಾಪುರ, ಎಂ.ಎಸ್. (ಸಂ), ***ಸಕಲ ಪುರಾತನರ ಬೆಡಗಿನ ವಚನಗಳು***, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1978.

ಹಿರೇಮಠ, ಆರ್.ಸಿ. (ಸಂ), ***ಭಕ್ತಿ ಭಂಡಾರಿ ಬಸವಣ್ಣನವರ ವಚನಗಳು***, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1968.

ಹಿರೇಮಠ, ಆರ್.ಸಿ. (ಸಂ), ***ಶ್ರೀ ಸಿದ್ಧರಾಮೇಶ್ವರರ ವಚನಗಳು***, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1968.

ಹಿರೇಮಠ, ಆರ್.ಸಿ. (ಸಂ), ***ಶಿವಶರಣೆಯರ ವಚನಗಳು***, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1968.

ಹಿರೇಮಠ, ಆರ್.ಸಿ. (ಸಂ), ***ಚನ್ನಬಸವಣ್ಣನವರ ವಚನಗಳು***, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1971.

ಹಿರೇಮಠ, ಆರ್.ಸಿ. ಮತ್ತು ಸುಂಕಾಪುರ ಎಂ.ಎಸ್. (ಸಂ), ***ವ್ಯೋಮಮೂರುತಿ ಅಲ್ಲಮ ಪ್ರಭುದೇವರ ವಚನಗಳು***, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1976.

**ಪ್ರಾಚೀನ ಕನ್ನಡ ಕೃತಿಗಳು**

ಅನಂತರಂಗಾಚಾರ್, ಎನ್. (ಸಂ), ***ಶ್ರೀ ಮಲ್ಲಿಕಾರ್ಜುನ ಕವೀಶ್ವರ ಸಂಯೋಜಿತ ಸೂಕ್ತಿ ಸುಧಾರ್ಣವಂ,*** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1972.

ಅನಂತರಂಗಾಚಾರ್, ಎಸ್. (ಸಂ), ***ಪಂಪಭಾರತ,*** ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು, 1977.

ಕಲಬುರ್ಗಿ, ಎಂ.ಎಂ. (ಸಂ), ***ಸೋಮೇಶ್ವರ ವಿರಚಿತ ಮಾನಸೋಲ್ಲಾಸ,*** ಸಂಪುಟ 1 ಮತ್ತು 2, ಪ್ರಸಾರಾಂಗ, ಕರ್ನಾಟಕ ವಿ.ವಿ. ಧಾರವಾಡ, 1998.

ಕಲಬುರ್ಗಿ, ಎಂ.ಎಂ. (ಸಂ), ***ಹರಿಹರನ ರಗಳೆಗಳು,*** ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 1999.

ಕುಲಕರ್ಣಿ, ಬಿ.ಎಸ್. (ಸಂ), ಬ್ರಹ್ಮಶಿವ ಕವಿ ವಿರಚಿತ ***ಸಮಯ ಪರೀಕ್ಷೆ,*** ಕನ್ನಡ ಸಂಶೋಧನ ಸಂಸ್ಥೆ ಧಾರವಾಡ, 1958.

ಕುಲಕರ್ಣಿ, ಆರ್.ವಿ. (ಸಂ), ಕವಿಚಕ್ರವರ್ತಿ ಕವಿರನ್ನ ವಿರಚಿತ ***ಸಾಹಸ ಭೀಮ ವಿಜಯಂ*** (ಗದಾಯುದ್ಧಂ), ಕನ್ನಡ ಮತ್ತುಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1998.

ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಸಂ), ***ಕುಮಾರವ್ಯಾಸ ಮಹಾಕವಿಯ ಕರ್ಣಾಟ ಭಾರತ ಕಥಾಮಂಜರಿ.*** ಪ್ರಕಾಶನ: ಮೈಸೂರು ಸಂಸ್ಥಾನದ ಸಾಹಿತ್ಯ ಮತ್ತುಸಂಸ್ಕೃತಿ ಅಭಿವೃದ್ಧಿ ಇಲಾಖೆ, ಬೆಂಗಳೂರು, 1958.

ಕೃಷ್ಣಭಟ್, ಕೆ. (ಅನು), ***ಕೌಟಿಲ್ಯನ ಅರ್ಥಶಾಸ್ತ್ರ*** ಸಮಾಜ ಪುಸ್ತಕಾಲಯ, ಧಾರವಾಡ, 2000.

ಕೇಶವಭಟ್ಟ, ಬಿ. (ಗದ್ಯಾನುವಾದ), ಶಿವಕೋಟ್ಯಾಚಾರ್ಯನ ***ವಡ್ಡಾರಾಧನೆ,*** ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, 2003.

ದೇವೀರಪ್ಪ, ಎಚ್. (ಸಂ), ***ಹಂಪೆಯ ಹರಿಹರ ದೇವರ ಶರಣ ಚರಿತ ಮಾನಸಂ,*** ಶ್ರೀ ಗೌರಿಶಂಕರ ಬುಕ್ ಡಿಪೋ, ಮೈಸೂರು, 1968.

ದೇವೀರಪ್ಪ, ಎಚ್. (ಸಂ), ***ಹಂಪೆಯ ಹರಿಹರ ವಿರಚಿತ ಬಸವರಾಜ ದೇವರ ರಗಳೆ,*** ಶಿವಕುಮಾರ ಪ್ರಕಾಶನ, ಬೆಂಗಳೂರು, 1981.

ನರಸಿಂಹಚಾರ್, ಡಿ.ಎಲ್. (ಸಂ), ***ಪಂಪ ಭಾರತ ದೀಪಿಕೆ,*** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., 1971.

ನರಸಿಂಹಚಾರ್, ಡಿ.ಎಲ್. (ಸಂ), ಶಿವಕೋಟ್ಯಾಚಾರ್ಯನ ***ವಡ್ಡಾರಾಧನೆ,*** ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಮೈಸೂರು, 2003.

ನರಸಿಂಹಶಾಸ್ತ್ರಿ ಕೆ.ಎಲ್. (ಗದ್ಯಾನುವಾದ), ಪಂಪಮಹಾಕವಿ ವಿರಚಿತ ***ಆದಿಪುರಾಣಂ,*** ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, 1999.

ನಾಗರಾಜಯ್ಯ, ಹಂ.ಪ. ಮತ್ತು ಕುಲಕರ್ಣಿ ಆರ್.ವಿ. (ಗದ್ಯಾನುವಾದ), ***ಕರ್ಣಪಾರ್ಯ ವಿರಚಿತ ನೇಮಿನಾಥ ಪುರಾಣಂ,*** ಸಂಪುಟ 1, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, 2004.

ನಾಗೇಶ ರಂಗೋ ಕುಲಕರ್ಣಿ (ಅನು), ***ಯಾಜ್ಞವಲ್ಕ್ಯ ಸ್ಮೃತಿ*** (ಸಂಸ್ಕೃತ ಮೂಲ ಶ್ಲೋಕ ಸಹಿತ ಸಮಗ್ರ ಕನ್ನಡಾನುವಾದ), ಪ್ರಕಾಶಕರು, ಪ್ರತಿಭಾ ಗ್ರಂಥಮಾಲೆ, ಧಾರವಾಡ.

ಪದ್ಮನಾಭಶರ್ಮ, ಡಿ. (ವ್ಯಾಖ್ಯಾನ), ಕೇಶಿರಾಜಕೃತ ***ಶಬ್ದಮಣಿದರ್ಪಣ,*** ಪದ್ಮಾಂಬ ಪ್ರಕಾಶನ, ಬೆಂಗಳೂರು, 1976.

ಪುಟ್ಟಪ್ಪ ಕೆ.ವಿ. (ಸಂ), ***ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ,*** ಪ್ರಸಾರಾಂಗ, ಮೈಸೂರು ವಿ.ವಿ., ಮೈಸೂರು, 1977.

ಬಸಪ್ಪ, ಎಸ್. (ಸಂ), ***ಕುಮಾರ ಪದ್ಮರಸ ವಿರಚಿತ ಸಾನಂದ ಚರಿತೆ,*** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., ಮೈಸೂರು, 1975.

ವೆಂಕಟರಾಮಪ್ಪ, ಕೆ. (ಗದ್ಯಾನುವಾದ), ನಯಸೇನ ವಿರಚಿತ ***ಧರ್ಮಾಮೃತಂ,*** ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, 1977.

ವೆಂಕಣ್ಣಯ್ಯ, ಟಿ.ಎಸ್. (ಸಂ), ***ಹರಿಹರ ಕವಿಯ ಬಸವರಾಜ ದೇವರ ರಗಳೆ,*** ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, 1976.

ವೆಂಕಣ್ಣಯ್ಯ, ಟಿ.ಎಸ್., ಕೃಷ್ಣಶಾಸ್ತ್ರಿ ಎ.ಆರ್. (ಸಂ), ***ಹರಿಶ್ಚಂದ್ರ ಕಾವ್ಯ ಸಂಗ್ರಹ,*** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1998.

ಶಾಮಶಾಸ್ತ್ರಿ, ಆರ್. (ಸಂ), ***ರುದ್ರಭಟ್ಟ ವಿರಚಿತ ಜಗನ್ನಾಥ ವಿಜಯಂ,*** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., ಮೈಸೂರು, 1976.

ಶಾಂತನಿರಂಜನ ವಿರಚಿತ ***ಅಬ್ಬಲೂರು ಚರಿತೆ,*** (ಸಂ) ಬಸವಾರಾಧ್ಯ ಎನ್., ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., ಮೈಸೂರು, 1973.

ಶೇಷ ನವರತ್ನ (ಅನು), ***ಮನುಸ್ಮೃತಿ,*** ಸಮಾಜ ಪುಸ್ತಕಾಲಯ, ಧಾರವಾಡ, 2005.

ಹಿರೇಮಠ, ಆರ್.ಸಿ. (ಸಂ), ***ಕವಿಚಕ್ರವರ್ತಿ ಸುರಂಗ ಕೃತ ತ್ರಿಷಷ್ಟಿ ಪುರಾತನ ಚಾರಿತ್ರಂ,*** ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1966.

ಹಿರೇಮಠ, ಆರ್.ಸಿ. (ಸಂ), ***ಭೀಮಕವಿ ಕೃತ ಬಸವ ಪುರಾಣ,*** ಸಂಪುಟ : 2, ಪ್ರಕಾಶಕರು : ಲಿಂಗಾಯಿತ ವಿದ್ಯಾಭಿವೃದ್ಧಿ ಸಂಸ್ಥೆ. ಧಾರವಾಡ, 1966.

## ಆಧುನಿಕ ಕನ್ನಡ ಕೃತಿಗಳು ಮತ್ತು ಲೇಖನಗಳು

ಅಣ್ಣೀಗೇರಿ, ಎ.ಎಂ. ಮತ್ತು ಶೇಷಶಾಸ್ತ್ರೀ, ಆರ್. (ಸಂ), ***ಶಾಸನ ಸಂಗ್ರಹ,*** ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, 1999.

ಇಮ್ರಾಪೂರ ಸೋಮಶೇಖರ, 'ಅಕ್ಕಸಾಲಿ', ***ಜಾನಪದ ಸಾಹಿತ್ಯ ದರ್ಶನ : ಏಳು,*** (ಸಂ) ವೃಷಭೇಂದ್ರಸ್ವಾಮಿ, ಎಸ್.ಎಂ., ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿ.ವಿ., ಧಾರವಾಡ, 1982.

ಈರಣ್ಣ, ಕೆ.ಪಿ., ***ಶಾಸನೋಕ್ತ ವಿಶ್ವಕರ್ಮರ ವೀರ ಜೀವನ,*** ಶ್ರೀ ಭುವನೇಶ್ವರಿ ಸಾಹಿತ್ಯ ಪ್ರಕಾಶನ, ಶಿರಹಟ್ಟಿ, 1993.

ಎಲಿಗಾರ್ ಚನ್ನಕ್ಕ, ***ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ,*** ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1990.

ಕಲಬುರ್ಗಿ, ಎಂ.ಎಂ., ***ಶಾಸನ ವ್ಯಾಸಂಗ-1,*** ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1974.

ಕಲಬುರ್ಗಿ, ಎಂ.ಎಂ., ***ಶಾಸನಗಳಲ್ಲಿ ಶಿವಶರಣರು,*** ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ ಡಂಬಳ ಗದಗ, 1978.

ಕಲಬುರ್ಗಿ, ಎಂ.ಎಂ. (ಸಂ), ***ಬಸವ ಮಾರ್ಗ,*** ಸಂಪುಟ 1, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1980.

ಕಲಬುರ್ಗಿ, ಎಂ.ಎಂ., ***ಮಾರ್ಗ ಸಂಪುಟ-1 ಮತ್ತು 2,*** ನರೇಶ್ ಅಂಡ್ ಕಂಪನಿ, ಬೆಂಗಳೂರು, 1988.

ಕಲಬುರ್ಗಿ, ಎಂ.ಎಂ., ***ಸಮಾಧಿ ಬಲಿದಾನ ವೀರ ಮರಣ ಸ್ಮಾರಕಗಳು,*** ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, 1990.

ಕಲಬುರ್ಗಿ, ಎಂ.ಎಂ. (ಸಂ), ***ಕರ್ನಾಟಕದ ಕೈಫಿಯತ್ತುಗಳು,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 1994.

ಕಲಬುರ್ಗಿ, ಎಂ.ಎಂ., ***ಶಾಸನ ಸೂಕ್ತಿ ಸುಧಾರ್ಣವ,*** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1997.

ಕಲಬುರ್ಗಿ, ಎಂ.ಎಂ. (ಸಂ), ***ಬಸವಣ್ಣನವರ ಟೀಕಿನ ವಚನಗಳು,*** ಸಂಪುಟ 1, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1979.

ಕಲಬುರ್ಗಿ, ಎಂ.ಎಂ., ***ಮಾರ್ಗ ಸಂಪುಟ-4,*** ಸ್ವಪ್ನ ಬುಕ್ ಹೌಸ್, ಬೆಂಗಳೂರು, 2004.

ಕಲ್ಗುಡಿ ಬಸವರಾಜ, ***ಅನುಭಾವ, ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ,*** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, 2001.

ಕಾಣಿಯಾರ ವಾಸುದೇವ, ***ಕಲಾ ಪ್ರಕಾರಗಳು,*** ಭಾರದ್ವಾಜ ಪ್ರಕಾಶನ, ಕದಿರೆ, ಮಂಗಳೂರು, 2001.

ಕಾಂಬಳೆ ಜೆ. ಶಿವಾಜಿ, ***ದಲಿತ ವಚನಕಾರರ ಸಾಮಾಜಿಕ ಪರಿಕಲ್ಪನೆ,*** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 2003.

ಕುಮಾರಸ್ವಾಮಿ, ಕೆ.ಎಸ್., ***ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರಿಯರು,*** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1996.

ಕುಲಕರ್ಣಿ ವಿರೂಪಾಕ್ಷ (ಅನು), ***ಕಾಪಾಲಿಕರು ಮತ್ತು ಕಾಳಾಮುಖರು,*** (ಇಂಗ್ಲೀಷ್ ಮೂಲ) ಡೇವಿಡ್ ಎನ್. ಲಾರೆಂಜನ್, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, 2005.

ಕೊಪ್ಪಾ, ಎಸ್.ಕೆ., ***ತರ್ದವಾಡಿ ನಾಡು ಒಂದು ಅಧ್ಯಯನ,*** ಪ್ರತಿಭಾ ಪ್ರಕಾಶನ, ಇಂಡಿ, 1990.

ಕೊಪ್ಪ, ಎಸ್.ಕೆ. (ಸಂ), ***ಅಲ್ಲಮಪ್ರಭು-ಚಿಂತನ,*** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 2004.

ಗಣೇಶ, ಕೆ.ಆರ್., ***ಆಂಧ್ರ ಪ್ರದೇಶದ ಕನ್ನಡ ಶಾಸನಗಳು,*** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1996.

ಗುರುರಾಜಾಚಾರ್, ಎಸ್., 'ಮಧ್ಯಕಾಲೀನ ಕರ್ನಾಟಕದ ವಿದೇಶಿ ವ್ಯಾಪಾರ', ಮಾನವಿಕ ಕರ್ನಾಟಕ, ಸಂಪುಟ-4, ಸಂಚಿಕೆ-1, 1973.

ಗುರುರಾಜಾಚಾರ್, ಎಸ್., 'ಕರ್ನಾಟಕದ ಕೆಲವು ಕೈಗಾರಿಕೆಗಳು', ಮಾನವಿಕ ಕರ್ನಾಟಕ, ಸಂಪುಟ-4, ಸಂಚಿಕೆ-2, 1974.

ಗುರುರಾಜಾಚಾರ್, ಎಸ್., 'ಕರ್ನಾಟಕದ ಕೆಲವು ಖ್ಯಾತ ವರ್ತಕರು : ಕ್ರಿ.ಶ. 1300ರ ವರೆಗೆ', ಮಾನವಿಕ ಕರ್ನಾಟಕ, ಸಂಪುಟ-6, ಸಂಚಿಕೆ-1, 1975.

ಗುರವ, ಆರ್.ಎನ್., 'ಪಾರ್ಶ್ವಪಂಡಿತನ ಕಲ್ಹೊಳೆಯ ಶಾಸನ', ಕರ್ನಾಟಕ ಭಾರತಿ, ಸಂಪುಟ 6, ಸಂಚಿಕೆ 3, ಕರ್ನಾಟಕ ವಿ.ವಿ., ಧಾರವಾಡ, 1974.

ಗೋಪಾಲ್, ಆರ್., 'ಹೊಯ್ಸಳ ಕಾಲದ ಕೈಗಾರಿಕೆಗಳು', ಇತಿಹಾಸ ದರ್ಶನ, ಸಂಪುಟ-6, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, 1991.

ಗೋಪಾಲ್, ಬಾ.ರಾ., ***ಕನ್ನಡ ಶಾಸನಗಳು,*** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1995.

ಚರಂತಿ ಮಠ, ವಿ.ಎಸ್., ***ಬಸವಣ್ಣನವರ ವಚನಗಳಲ್ಲಿ ದಲಿತ ದರ್ಶನ,*** ಬಸವ ಧರ್ಮ ಪ್ರಸಾರ ಸಂಸ್ಥೆ, ಹಿರೇಮಠ ಸಂಸ್ಥಾನ, ಭಾಲ್ಕಿ, ಬೀದರ ಜಿಲ್ಲೆ.

ಚಿದಾನಂದಮೂರ್ತಿ, ಎಂ., ***ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,*** ಪ್ರಸಾರಾಂಗ, ಮೈಸೂರು ವಿ.ವಿ., ಮೈಸೂರು, 1979.

ಚಿದಾನಂದಮೂರ್ತಿ, ಎಂ., ***ಹೊಸತು-ಹೊಸತು,*** ಕನ್ನಡ ವಿಶ್ವವಿದ್ಯಾಲಯ, ಹಂಪಿ, 1993.

ಚಿದಾನಂದಮೂರ್ತಿ, ಎಂ., ***ಬಸವಣ್ಣ - ಕರ್ನಾಟಕ : ಭಾರತ,*** ಸ್ವಪ್ನ ಬುಕ್ ಹೌಸ್, ಬೆಂಗಳೂರು, 2004.

ಚಿದಾನಂದಮೂರ್ತಿ, ಎಂ., ***ಸ್ಥಾವರ ಜಂಗಮ :*** ಸ್ವಪ್ನ ಬುಕ್ ಹೌಸ್, ಬೆಂಗಳೂರು, 2004.

ಜನರಯ್ಯ, ಮ.ನ., ***ದಲಿತ ವರ್ಗದ ಶರಣರು ಮತ್ತು ಶರಣೆಯರು ಒಂದು ಅಧ್ಯಯನ,*** ಸಿದ್ಧಾರ್ಥ ಗ್ರಂಥಮಾಲೆ, ಕುವೆಂಪು ನಗರ, ಮೈಸೂರು, 1997.

ತಾರಾನಾಥ, ಎಸ್.ಎಸ್. (ಸಂ), ***ಶತಮಾನದ ಸಂಶೋಧನೆ,*** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 2001.

ತಿಪ್ಪೇರುದ್ರಸ್ವಾಮಿ, ಎಚ್., ***ವಚನಗಳಲ್ಲಿ ವೀರಶೈವ ಧರ್ಮ,*** ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಮೈಸೂರು, 1997.

ತಿಪ್ಪೇರುದ್ರಸ್ವಾಮಿ, ಎಚ್., ***ಶರಣರ ಅನುಭಾವ ಸಾಹಿತ್ಯ,*** ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಮೈಸೂರು, 1998.

ತಿಪ್ಪೇರುದ್ರಸ್ವಾಮಿ ,ಎಚ್., ***ಕರ್ನಾಟಕ ಸಂಸ್ಕೃತಿ ಸಮೀಕ್ಷೆ,*** ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಮೈಸೂರು, 2003.

ತಿಪ್ಪೇಸ್ವಾಮಿ, ಪಿ.ಆರ್., ***ಗ್ರಾಮೀಣ ಗೃಹ ವಸ್ತುಗಳು,*** ಮಹರ್ಷಿ ಪ್ರಕಾಶನ, ಶಾರದಾದೇವಿ ನಗರ, ಮೈಸೂರು, 2003.

ತೆಲಗಾವಿ ಲಕ್ಷ್ಮಣ್ (ಸಂ), ***ಸಂಶೋಧನ,*** ಎಂ. ಚಿದಾನಂದಮೂರ್ತಿ ಅಭಿನಂದನ ಸಮಿತಿ, ಬೆಂಗಳೂರು, 1991.

ತೆಲಗಾವಿ ಲಕ್ಷ್ಮಣ್ (ಸಂ), ***ಹರತಿ ಸಿರಿ,*** ಹೆಚ್.ವಿ. ವೀರನಾಯಕ 'ಹರತಿ' ನೆನಪಿನ ಸಂಪುಟ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ಹಿರಿಯೂರು ತಾಲ್ಲೂಕು, 1987.

ದೇಸಾಯಿ, ಪಿ.ಬಿ., ***ಕನ್ನಡ ನಾಡಿನ ಶಾಸನಗಳು,*** ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1971.

ನರಸಿಂಹಾಚಾರ್, ಆರ್., ***ಶಾಸನ ಪದ್ಯ ಮಂಜರಿ,*** ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು, 1975.

ನರಸಿಂಹ ಮೂರ್ತಿ, ಎ.ವಿ., ***ವಿಜಯನಗರದ ನಾಣ್ಯ ಸಂಪತ್ತು,*** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1996.

ನರಸಿಂಹ ಮೂರ್ತಿ, ಎ.ವಿ., ***ಕರ್ನಾಟಕ ನಾಣ್ಯ ಪರಂಪರೆ,*** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, 2003.

ನರೋಡೆ ಅಶೋಕ, ***ವಚನ ಚಳುವಳಿ ಕೆಲವು ಅಧ್ಯಯನಗಳು,*** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2000.

ನಾಗೇಗೌಡ, ಎಚ್.ಎಲ್. (ಸಂ), ***ಪ್ರವಾಸಿ ಕಂಡ ಇಂಡಿಯಾ,*** ಸಂಪುಟ-1, ಪ್ರಸಾರಾಂಗ, ಮೈಸೂರು ವಿ.ವಿ., 1964.

ನಾರಾಯಣ, ಪಿ.ವಿ., ***ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ,*** ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ-ಗದಗ, 1983.

ನಾರಾಯಣ, ಪಿ.ವಿ., ***ವಚನ ನಿರ್ವಚನ,*** ಪುಸ್ತಕಾಲಯ ಪ್ರಕಾಶಕರು, ಮೈಸೂರು, 1990.

ನಾರಾಯಣ, ಪಿ.ವಿ., ***ವಚನಗಳಲ್ಲಿ ಕಾಯಕ ಮತ್ತು ದಾಸೋಹ,*** ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, 2001.

ನಾರಾಯಣ, ಪಿ.ವಿ., ***ವಚನ ಸಮಗ್ರ,*** ವಸಂತ ಪ್ರಕಾಶನ, ನಂ. 10, ತುಳಸಿ ವನ, ಬೆಂಗಳೂರು, 2005.

ನಾವಲಗಿ, ಸಿ.ಕೆ., ***ವಚನ ಸಾಹಿತ್ಯದಲ್ಲಿ ಜಾನಪದ ಅಂಶಗಳು ಒಂದು ಅಧ್ಯಯನ,*** ಜ್ಞಾನೋದಯ ಪ್ರಕಾಶನ, ಬಸವೇಶ್ವರ ನಗರ, ಬೆಂಗಳೂರು, 2000.

ನಂದಿ, ಆರ್.ಎನ್., 'ವೀರಶೈವ ಚಳುವಳಿಯ ಹುಟ್ಟು', ***ಬಸವಣ್ಣನವರ ವಚನಗಳು : ಸಾಂಸ್ಕೃತಿಕ ಮುಖಾಮುಖಿ,*** ನುಗಡೋಣಿ ಅಮರೇಶ (ಸಂ), ಪ್ರಸಾರಾಂಗ , ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2004.

ಪರಮಶಿವಮೂರ್ತಿ, ಡಿ.ವಿ., ***ಕನ್ನಡ ಶಾಸನ ಶಿಲ್ಪ,*** ಪ್ರಸಾರಾಂಗ , ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 1999.

ಪಂಚಮುಖಿ, ಆರ್.ಎಸ್., ***ಕರ್ನಾಟಕದ ಶಾಸನಗಳು,*** ಕನ್ನಡ ಸಂಶೋಧನಾ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1981.

ಪಾಟೀಲ, ವಿ.ಎಲ್., ***ವಡ್ಡಾರಾಧನೆಯಲ್ಲಿ ಜಾನಪದೀಯ ಹಾಗೂ ಸಾಮಾಜಿಕ ಅಂಶಗಳು,*** ಆರ್.ಸಿ. ಹಿರೇಮಠ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಪಾಡಿಗಾರ, ವಿ. ಶ್ರೀನಿವಾಸ, 'ಆನೆಗೊಂದಿ ತಾಮ್ರ ಪುಟ ಶಾಸನ : ಒಂದು ಮರುನೋಟ', ವಿಜಯನಗರ ಅಧ್ಯಯನ ಸಂಪುಟ 2, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, 1977.

ಪಾಡಿಗಾರ ಶ್ರೀನಿವಾಸ, ***ಭಾರತೀಯ ಇತಿಹಾಸದ ಶಾಸನ ಆಕರಗಳು***, ರಾಮಾಶ್ರಯ ಪಬ್ಲಿಕೇಷನ್ಸ್, ಧಾರವಾಡ, 2004.

ಪುಟ್ಟಪ್ಪ , ಕೆ.ವಿ. (ಸಂ), ***ಯುಗಯಾತ್ರೀ ಭಾರತೀಯ ಸಂಸ್ಕೃತಿ***, ಸಂಪುಟ 2, ಪ್ರಸಾರಾಂಗ, ಮೈಸೂರು ವಿ.ವಿ., ಮೈಸೂರು, 1971.

ಬಡಿಗೇರ ವಾಸುದೇವ, ***ಸಂಡೂರು ಪರಿಸರದ ಕಾರ್ತಿಕೇಯ ತಪೋವನ, ಚಾರಿತ್ರಿಕ ಅಧ್ಯಯನ***, ಮಯ ಪ್ರಕಾಶನ, ಕಮಲಾಪುರ, ಹಂಪಿ, 1997.

ಬಡಿಗೇರ ವಾಸುದೇವ, ***ಶಿರಸಂಗಿ ಕಾಳಮ್ಮ ಸಾಂಸ್ಕೃತಿಕ ಅಧ್ಯಯನ (ಚಾರಿತ್ರಿಕ ಪರಂಪರೆ)***, ಶ್ವೇತ-ಭಾಗೀರತಿ ಪ್ರಕಾಶನ, ಹೊಸಪೇಟೆ, 2002.

ಬಸವನಾಳ ಶಿವಲಿಂಗಪ್ಪನವರು (ಸಂ), ***ಬಸವಣ್ಣನವರ ಷಟ್‌ಸ್ಥಲದ ವಚನಗಳು***, ಲಿಂಗಾಯಿತ ವಿದ್ಯಾಭಿವೃದ್ಧಿ ಸಂಸ್ಥೆ ಧಾರವಾಡ, 1990.

ಬಸವರಾಜ ಕುಂಚೂರು, ***ಕುಂಬಾರ ಜನಾಂಗ***, ಶ್ರೀ ಚಕ್ರ ಪ್ರಕಾಶನ, ಹರಪನಹಳ್ಳಿ, 2003.

ಬಸವರಾಜ ಕುಂಚೂರು, ***ಕುಂಭಕಲೆ***, ಮಣ್ಣಿನಲ್ಲಿ ಅರಳಿದ ಕಾವ್ಯ, ಪ್ರಕಾಶಕರು, ತುಮಕೂರು ಜಿಲ್ಲಾ ಕುಂಬಾರರ ಸಂಘ, 2004.

ಭೂಸನೂರ ಮಠ, ಸಂ.ಶಿ. (ಸಂ), ***ವಚನ ಸಾಹಿತ್ಯ ಸಾರ ಸಂಗ್ರಹ***, ಪ್ರಕಾಶಕರು ಲಿಂ|| ಶ್ರೀ ಗುರು ಅನ್ನದಾನ ಮಹಾಸ್ವಾಮಿಗಳ ಶತಮಾನೋತ್ಸವ ಸಮಿತಿ, ಹಾಲಕೆರೆ, ನರೇಗಲ್.

ಮಹಾದೇವ ಮಾ. ಜಗತಾಪ, ***ಕರ್ನಾಟಕ ಜನಪದ ಚಿತ್ತಾರಗಳು ಹಾಗೂ ಶಿಲ್ಪಗಳು***, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, 2004.

ಮಹೇಶ ತಿಪ್ಪಶೆಟ್ಟಿ, ***ಬಸವ ತತ್ವ ಸಾಮಾಜಿಕ ಬದಲಾವಣೆ***, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2003.

ಮಲ್ಲಾಪುರ, ಬಿ.ವ್ಹಿ., ***ನಯಸೇನ ಮತ್ತು ಆತನ ಕೃತಿಗಳು***., ಪಠ್ಯಪುಸ್ತಕ ನಿರ್ದೇಶನಾಲಯ, ಕರ್ನಾಟಕ ವಿ.ವಿ., ಧಾರವಾಡ, 1978.

ಮಲ್ಲಾರಿ ಮೇವುಂಡಿ, ***ಕನ್ನಡ ನಾಡಿನ ಶಾಸನ ಕವಿಗಳು***, ಪ್ರತಿಭಾ ಗ್ರಂಥಮಾಲೆ, ಧಾರವಾಡ, 1974.

ಮಂಜುನಾಥ, ಸಿ.ಯು., ***ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ***, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು, 1990 (ಅಪ್ರಕಟಿತ ನಿಬಂಧ).

ರಾಮಗಿರಿ ಕರಿಸಿದ್ದಪ್ಪ ಕುಂಬಾರ, ***ಕುಂಬಾರ ದರ್ಶನ***, ರಾಮಗಿರಿ ಪ್ರಕಾಶನ, ದಾವಣಗೆರೆ, 2004.

ರಂಗಸ್ವಾಮಿ, ಎ., ***ಚಾವುಂಡರಾಯನ ಲೋಕೋಪಕಾರ ಒಂದು ಅವಲೋಕನ***, ದರ್ಶನ ಕೀರ್ತಿ ಪ್ರಕಾಶನ, ಮೈಸೂರು, 1996.

ರಾಮಚಂದ್ರರಾವ್, ಎಸ್.ಕೆ., ಶಾರದಾ ಪ್ರಸಾದ ಎನ್.ಎಸ್. (ಅನು), ***ಧರ್ಮಶಾಸ್ತ್ರದ ಇತಿಹಾಸ***, ಸಂಪುಟ-1, ಭಾಗ-2, ಮೂಲ (ಪಾಂಡುರಂಗ ವಾಮನ ಕಾಣೆ), ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2003.

ರುಮಾಲೆ ಮೃತ್ಯುಂಜಯ (ಸಂ), ***ಬಸವ ಸಾಹಿತ್ಯ***, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 2004.

ವಿದ್ಯಾಶಂಕರ, ಎಸ್., ***ವಚನಾನುಶೀಲನ,*** ಸ್ನೇಹ ಪ್ರಕಾಶನ, ಬೆಂಗಳೂರು, 1989.

ವಿವೇಕ ರೈ, ಬಿ.ಎ., ***ತುಳು ಜನಪದ ಸಾಹಿತ್ಯ,*** ಕನ್ನಡ ಸಾಹತ್ಯ ಪರಿಷತ್ತು, ಬೆಂಗಳೂರು, 1985.

ವಿನೋದ ಪಾಟೀಲ, ***ಶಿಲ್ಪಗಳಲ್ಲಿ ಶಿವಭಕ್ತರು,*** ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, 2003.

ವೃಷಭೇಂದ್ರಸ್ವಾಮಿ, ಎಸ್.ಎಂ. (ಸಂ), ***ಜಾನಪದ ಸಾಹಿತ್ಯ ದರ್ಶನ 7,*** ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1982.

ಶಾಮರಾಯ, ತ.ಸು., ***ಶಿವಶರಣ ಕಥಾರತ್ನ ಕೋಶ,*** ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಗೋಕುಲಂ, 3ನೇ ಹಂತ, ಮೈಸೂರು, 2003.

ಶಿವಕುಮಾರಸ್ವಾಮಿ, ಸಿ.ಎಸ್., ***ವಚನಕಾರರ ಜೀವನ ದೃಷ್ಟಿ,*** ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, 2001.

ಶ್ರೀಕಂಠಯ್ಯ, ಕೆ., 'ಕನ್ನಡ ಕಾವ್ಯಗಳಲ್ಲಿ ಸಮರಾಯುಧಗಳು ಒಂದು ಅವಲೋಕನ', ***ಸಂಶೋಧನ,*** (ಸಂ) ಲಕ್ಷ್ಮಣ್ ತೆಲಗಾವಿ. ಎಂ. ಚಿದಾನಂದಮೂರ್ತಿ ಅಭಿನಂದನ ಸಮಿತಿ, ಬೆಂಗಳೂರು, 1991.

ಶ್ರೀನಿವಾಸ ಮೂರ್ತಿ, ಎಂ.ಆರ್., ***ವಚನ ಧರ್ಮ ಸಾರ,*** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1990.

ಶ್ರೀನಿವಾಸ ಮೂರ್ತಿ, ಜೆ., ಶೋಭಾ, ಆರ್., ಗುರುದತ್, ಎಸ್. ಮತ್ತು ರಾಮಕೃಷ್ಣ ಜಿ. (ಅನು), ***ಪ್ರಾಚೀನ ಭಾರತದಲ್ಲಿ ಶೂದ್ರರು,*** ಮೂಲ : ಶರ್ಮ ಆರ್.ಎಸ್., ನವಕರ್ನಾಟಕ ಪ್ರಕಾಶನ, ಬೆಂಗಳೂರು, 2004.

ಶೇಷಶಾಸ್ತ್ರೀ, ಆರ್., ***ಕನ್ನಡ ವೀರಗಲ್ಲುಗಳು,*** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1982.

ಸಕಲೇಶ, ಮ., ***ಹೊಯ್ಸಳೋದಯ ಸಂಶೋಧನ,*** ಹಿಮಶೈಲ ಪ್ರಕಾಶನ, ಶಿವಮೊಗ್ಗ, 2002.

ಸಬರದ ಬಸವರಾಜ, ***ಶರಣರ ಬಂಡಾಯದ ವಚನಗಳು,*** ಯುವ ಹಿರಿಯ ವಿದ್ಯಾರ್ಥಿ ಸಂಘ, ಎಂ. ಬಸವಯ್ಯ ವಸತಿ ಮಹಾ ವಿದ್ಯಾಲಯ, ಸಿರಿಗೆರೆ, 1991.

ಸಬರದ ಬಸವರಾಜ, ***ವಚನ ಚಳುವಳಿ,*** ಪಲ್ಲವಿ ಪ್ರಕಾಶನ, ಗುಲ್ಬರ್ಗಾ, 1992.

ಸಬರದ ಬಸವರಾಜ, ***ವಚನಕಾರರು ಮತ್ತು ದಲಿತ ಸಂವೇದನೆ,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2004.

ಸಿದ್ಧಲಿಂಗಮ್ಮ, ಬಿ.ಜಿ. ಮತ್ತು ಹೆಗಡೆ ರಾಜಾರಾಮ, 'ಕನ್ನಡ ಶಾಸನಗಳಲ್ಲಿ ಬಿಂಬಿತವಾದಂತೆ ಮಧ್ಯಕಾಲೀನ ಕರ್ನಾಟಕದಲ್ಲಿ ತೆಲ್ಲಿಗರು', ಶಾಸನ ಅಧ್ಯಯನ, ಸಂಪುಟ 3, ಸಂಚಿಕೆ 2, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ಜುಲೈ-ಡಿಸೆಂಬರ್ 2006.

ಸಿದ್ಧಲಿಂಗಸ್ವಾಮಿ. 'ಮಧ್ಯಕಾಲೀನ ಸಮಾಜ ಮತ್ತು ಸಾಮಾಜಿಕ ಚಿಂತನೆಗಳು', ಸಾಧನೆ, ಸಂಪುಟ 28, ಸಂಚಿಕೆ 1, 2, 3 ಮತ್ತು 4, ಬೆಂಗಳೂರು ವಿ.ವಿ., ಜನವರಿ-ಡಿಸೆಂಬರ್ 1999.

ಸುಲೋಚನ ಎಸ್. ಮಟ್ಟಿ, ***ಶಿವಶರಣೆಯರ ವಚನಗಳಲ್ಲಿ ಸಾಮಾಜಿಕ ಪ್ರಜ್ಞೆ,*** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1992 (ಅಪ್ರಕಟಿತ ನಿಬಂಧ).

ಹಕಾರಿ ದೇವೇಂದ್ರ ಕುಮಾರ, ಸಂಧ್ಯಾರೆಡ್ಡಿ ಕೆ.ಆರ್. (ಸಂ), ***ಗ್ರಾಮೀಣ ವೃತ್ತಿಗಳು,*** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, 2000.

ಹಾಜನಗೋಳ ಧನವಂತ, ***ಮುಳುಗುಂದ ನಾಡು ಒಂದು ಅಧ್ಯಯನ,*** ಮಹಾದೇವಿ ಪ್ರಕಾಶನ, ಧಾರವಾಡ, 2004.

ಹನುಮಾಕ್ಷಿಗೋಗಿ (ಸಂ), ***ಸುರಪುರ ತಾಲ್ಲೂಕಿನ ಶಾಸನಗಳು,*** ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ, 1995.

ಹನುಮಾಕ್ಷಿಗೋಗಿ (ಸಂ), ***ಕಲಬುರ್ಗಿ ಜಿಲ್ಲೆಯ ಶಾಸನಗಳು,*** ಶಿವಚಂದ್ರ ಪ್ರಕಾಶನ, ಹುಬ್ಬಳ್ಳಿ, 1996.

ಹಿರೇಮಠ, ಬಿ.ಆರ್. ***ಶಾಸನಗಳಲ್ಲಿ ಕರ್ನಾಟಕದ ವರ್ತಕರು,*** ಪ್ರಸಾರಾಂಗ, ಕರ್ನಾಟಕ ವಿ.ವಿ. ಧಾರವಾಡ, 1986.

ಹಿರೇಮಠ, ಬಿ.ಆರ್., ಹೆಗಡೆ ಜಿ.ಎಂ., ವಸ್ತ್ರದ ವೀಡಿ (ಸಂ), ***ಬಸವಣ್ಣನವರ ವಚನಗಳ ಸಮಾಲೋಕನ,*** ಪೂಜ್ಯಶ್ರೀ ಚನ್ನವೀರ ಸ್ವಾಮಿ ಪ್ರತಿಷ್ಠಾನ, ಸಾರಾಂಗ ಮಠ, ಸಿಂದಗಿ, ಬಿಜಾಪುರ ಜಿಲ್ಲೆ.

ಹಿರೇಮಠ, ಬಿ.ಆರ್., ***ವ್ಯಾಸಂಗ ತರಂಗ,*** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2004.

ಹಿರೇಮಠ, ಆರ್.ಸಿ. ಮತ್ತು ಕಲುಬುರ್ಗಿ ಎಂ.ಎಂ. (ಸಂ), ***ಕನ್ನಡ ಶಾಸನ ಸಂಪದ,*** ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1995.

ಹಿರೇಮಠ, ಎಸ್.ಎಸ್., ***ದಲಿತ ಸಂಸ್ಕೃತಿ,*** ಪ್ರಸಾರಾಂಗ , ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2001.

ಹಿರೇಮಠ ಚೆನ್ನಬಸವಯ್ಯ, ***ಕುರುಗೋಡು ಸಿಂದರು – ಒಂದು ಅಧ್ಯಯನ,*** ಸಂಗಣ್ಣನವರು ಅಗಡಿ ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ, 1995.

ಹೆಗಡೆ ರಾಜಾರಾಮ, ***ಲೌಕಿಕ-ಅಲೌಕಿಕ,*** ಆನಂದ ಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ, 2001.

ಹೆಗಡೆ ರಾಜಾರಾಮ, ***ರಾಜ ಪ್ರಭುತ್ವ ಮತ್ತು ಮತಧರ್ಮ,*** ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ಶಿವಮೊಗ್ಗ, 2001.

ಹೆಗಡೆ ರಾಜಾರಾಮ, (ಸಂ), ***ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ,*** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 2004.

ಜ್ಞಾನಾನಂದ, ಜಿ., ***ಶಿಲ್ಪದರ್ಶ,*** ಸಂಪುಟ 2, ಪ್ರಸಾರಾಂಗ , ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2002.

## ENGLISH BOOKS AND ARTICLES

Agrawala Vasudeva Sharma. *India as Described by Manu*, Prithivi Prakashan, Varanasi, India, 1970.

Altekar, A.S. *A History of Village Communities in Western India*, Madras, 1927.

Appadorai, A., *Economic Conditions in Southern India* (1000-1500 A.D.), University of Madras, 1936.

Bhadani, B.L., *Peasants, Artisans and Enterpreneurs* (Economy of Marwar in the 17th Century), Rawat Publications, Jaipur and New Delhi, 1993.

Bhisham Pal, *Handicrafts of Rajasthan*, Publications Division, Ministry of Information and Broadcasting Government of India, 1984.

Chaitanya Krishna, *Arts of India*, Shakti Malik Abhinav Publications, E-37, Hauz Khas, New Delhi, 1987.

Chattopadhyaya Brajadulal, *Coins and Currency Systems in South India*, Munshilal Manohar Lal Publishers Pvt. Ltd., 1977.

Chattopadhyaya Brajadulal (Ed.), *Essays in Ancient Indian Economic History*, Munshiram Manoharlal Publishers Pvt. Ltd., 1987.

Chitnis, K.N., *Socio-Economic Aspects of Medieval India*, Atlantic Publishers and Distributors, Ansari Road, New Delhi, 1990.

Dikshit, G.S., *Local Bodies in Medieval South India,* Department of Archaeology and Museums, Hospet, 2004.

Dikshith, G.S., *Local Self-Government in Medieval Karnataka*, Prasaranga, Karnatak University, Dharwad, 2001.

Dipakranjan Das, *Economic History of the Deccan* (From the 1st to the 6th Century A.D.), Munshiram Manohar Lal, Delhi, 1969.

Ghurye, G.S., *Caste and Class in India*, Popular Book Depo, Bombay, 1957.

Gururajachar, S., *Some Aspects of Economic and Social Life in Karnataka* (A.D. 1000-1300) Prasaranga, Mysore University, Mysore, 1974.

Hanuma Nayaka, *Artisanal and Trading Activities in Medieval Karnataka with (Special Reference to the Hoysala Kingdom, A.D. 1973-1342)*, Mangalore University, Mangalore, 2000, Un-published Ph.D. Thesis.

Hanuma Nayaka. 'Artisans in Medeival Karnataka'. QJMS. Vol. XCII. January to June 2001.

Hegde Rajaram, *Temple Patronage in Medieval Karnataka with Special Reference to the Banavasi-12000*, Indian Council of Historical Research, Southern Regional Center, Bangalore, 2006.

Hegde Rajaram, *'The Jaina Tradition and Regional Society in Early Kannada Literature'* Deccan Studies, Vol. V, Number 1, Jan-June 2007, Centre for Deccan Studies, Hyderabad, India.

Kamath Jyotna, *Studies in Social Life in Karnataka* (10-14th Century), Karnatak University, Dharwad, 1972.

Karmarkar, A.P., 'Economic Conditions in Medieval Karnataka', QJMS, Vol. xxxix, Jan. 1949.

Kelleson Collyer, *The Hoysala Artistists : Their Identity and Styles*, p. 62-63, Directorate of Archaeology and Museums, 1990.

Kiran Singh, *Textiles in Ancient India*, Vishwavidyalaya Prakashana, Varanasi, 1994.

Krishnappa, M.V., *Social and Economic Conditions of Karnataka (A.D. 400-1000)*, Prasaranga, University of Mysore, Mysore, 1994.

Kundanagar, K.G., *Inscriptions in Northern Karnataka and the Kolhapur State.*

Kuppuswamy, G.R., *Economic Conditions in Karnataka,* Prasaranga, Karnataka University, Dharwar, 1975.

Misra, R.N., *Ancient Artists and Art Activity*, Indian Institute of Advanced Study, Simla, 1975.

Nandi Ramendranath, *State Formation Agrarian Growth and Social Change in Feudal South India, C.A.D. 600-1200,* Manohar Publishers and Distributors, New Delhi, 2000.

Pal, M.K., *Crafts and Craftsmen and Traditional India*, Kanak Publications, New Delhi, India, 1978.

Ramaswamy Vijaya, *Some Enquiries into the Condition of Weavers in Medieval South India*, The Indian Historical Review, Vol. VI, Nov. 1-2, Indian Council of Historical Research, 1980.

Raychaudhuri Tapan and Habib Irfan (Ed.), *The Cambridge Economic History of India*, Vol. I, (C. 1200-C. 1750), Orient Longman in Association with Cambridge University Press, 1982.

Rice, B.L., *Mysore and Coorg from the Inscriptions*, Asian Educational Services, New Delhi, 1986.

Ritti Srinivas and Kumbar Anand, *Inscriptions from Solapur district,* Srihari Prakashana, Dharwad.

Ritti Srinivas and Shelke, G.S., *Inscriptions from Nanded district,* Yashavanth Mahavidhyala, Nanded, Maharashtra state, 1968.

Salatore, R.N., *Vijayanagara Art*, Sundeep Prakashan, Delhi, 1982.

Saletore, B.A., *Ancient Karnataka*, Vol. 1, Oriental Book Agency, 1936.

Settar, S. and Vettickal, G.K., 'Artists of Memorial Stones in Karnataka: From Early Chalukya to the Kadamba Times (6-10th Century A.D.)', *Memorial Stones*, (ed.) Settar, S. and Gunther D. Sonthaimer, Institute of Indian Artistry, Karnatak University, Dharwad, 1982.

Settar, S., *Footprints of Artisans in History*, 64th Session of Indian History Congress, Mysore, 2003.

Settar, S., *The Hoysala Temples*, Institute of Indian Art History, Karnataka University and Kala Yatra Publications, 1992.

Sharma, R.S., *Early Medieval Indian Society – A Study in Feudalism*, Orient Longman Ltd., 17, Chittaranjan Avenue, Kolkata, 2001.

Shivanna, K.S., *The Agrarian system of Karnataka (A.D. 1336-1761)*, Prasaranga, University of Mysore, Mysore, 1983.

Singh Rajeshwar Prasad. 'Artisans in Manu'. *Essays in Ancient Indian Economic History,* (ed.) Chattopadhyaya Brajadulal. Munshiram Manoharlal Publishers Pvt. Ltd., 1987.

Stein Burton, *Peasant State and Society in Medieval South India*, Oxford University Press, Oxford, New York, Delhi, 1985.

Thurston Edgar, *Castes and Tribes of Southern India*, Asian Educational Services, New Delhi, 1909.

Verma Onkar Prasad, *The Yadavas and their Times*, Vidharbha Samshodhan Mandal, Nagpur, 1970.

**ಪತ್ರಿಕೆಗಳು**

ಇತಿಹಾಸ ದರ್ಶನ

ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

ಕರ್ನಾಟಕ ಭಾರತಿ

ಪ್ರಬುದ್ಧ ಕರ್ಣಾಟಕ

ಬಸವಪಥ

ಮಾನವಿಕ ಕರ್ನಾಟಕ

ವಿಜಯನಗರ ಅಧ್ಯಯನ.

ಶಾಸನ ಅಧ್ಯಯನ

ಸತ್ಯ ಶುದ್ಧ ಕಾಯಕ

ಸಾಧನೆ

**Deccan Studies**

**Indian Antiquary**

**Indica**

**Journal of Indian History**

**Journal of Karnataka Studies**

**Kala, Journal of the Indian Art History Congress**

**Quarterly Journal of the Mythic Society**

**Quest Historica**

**The Indian Historical Review**

**The Journal of the Centre for Heritage Studies**

**ವೃತ್ತಿ ಪದಕೋಶಗಳು, ನಿಘಂಟು, ವಿಶ್ವಕೋಶ**

ಅಂಗಡಿ, ಎಸ್.ಎಸ್., ***ಕುಂಬಾರ ವೃತ್ತಿ ಪದಕೋಶ,*** ಲಿಂಗಾಯಿತ ಅಧ್ಯಯನ ಸಂಸ್ಥೆ, ಶ್ರೀ ವಿರಕ್ತಮಠ, ದೇಶನೂರು, ಬೆಳಗಾವಿ ಜಿಲ್ಲೆ, 1998.

ಅಂಗಡಿ, ಎಸ್.ಎಸ್., ***ಬಡಿಗ ವೃತ್ತಿ ಪದಕೋಶ,*** ವಿದ್ಯಾನಿಧಿ ಪ್ರಕಾಶನ, ಗದಗ, 1999.

ಅಂಗಡಿ, ಎಸ್.ಎಸ್., ***ಸಂಕೀರ್ಣ ವೃತ್ತಿ ಪದಕೋಶ,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2000.

ಕರಿಗೌಡ ಬೀಚನಹಳ್ಳಿ (ಸಂ), ***ಕನ್ನಡ ವಿಶ್ವವಿದ್ಯಾನಿಲಯ ವಿಶ್ವಕೋಶ : 2 ಕರಕುಶಲ ಕಲೆಗಳು,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2000.

ಕಿಟೆಲ್ ರೆವೆರೆಂಡ್, ಎಫ್., ***ಕನ್ನಡ ಇಂಗ್ಲಿಷ್ ಡಿಕ್ಷನರಿ,*** ಏಶಿಯನ್ ಎಜುಕೇಷನಲ್ ಸರ್ವೀಸಸ್, ನೂಡೆಲ್ಲಿ, 2004.

ನಾಯಕ್, ಎಚ್.ಎಂ. (ಸಂ), ***ಕನ್ನಡ ವಿಶ್ವಕೋಶ,*** ಸಂಪುಟ-3, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1971.

ಪಾಂಡುರಂಗ ಬಾಬು, ಡಿ., ***ಪಾಂಚಾಳ ವೃತ್ತಿ ಪದಕೋಶ,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2000.

ಮಾಡ್ತಾ ವಿಲ್ಯಂ ಹಾಗೂ ಕುಲಕರ್ಣಿ ಆರ್.ವೈ., ***ನಿಘಂಟು ರಚನಾ ವಿಜ್ಞಾನ,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 1994.

ರಿತ್ತಿ ಶ್ರೀನಿವಾಸ (ಸಂ), ***ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ,*** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, 2000.

ವೆಂಕಟಾಚಲಶಾಸ್ತ್ರೀ, ಟಿ.ವಿ. (ಸಂ), ***ಶ್ರೀ ವತ್ಸ ನಿಘಂಟು,*** ಮೈಸೂರು, 1971, ಪು. 167-68.

ಶೇಷಗಿರಿ ರಾವ್, ಎಲ್.ಎಸ್. (ಸಂ), ***ಸುಭಾಷ್ ನಿಘಂಟು, ಕನ್ನಡ-ಕನ್ನಡ-ಇಂಗ್ಲೀಷ್, ಇಂಗ್ಲೀಷ್-ಕನ್ನಡ,*** ಸುಭಾಷ್ ಸ್ಟೋರ್ಸ್ ಲಕ್ಷ್ಮಿ ಮುದ್ರಣಾಲಯ, ಬೆಂಗಳೂರು, 2004.

***ಸಂಕ್ಷಿಪ್ತ ಕನ್ನಡ ನಿಘಂಟು (ಕನ್ನಡ - ಕನ್ನಡ),*** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1977.

ಸಾಂಬಮೂರ್ತಿ, ***ನೇಕಾರ ವೃತ್ತಿ ಪದಕೋಶ,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2000.

**ಪ್ರಕಟಿಸಿದ / ಮಂಡಿಸಿದ ಲೇಖನಗಳು :**


1. **Siddalingamma, B.G., *Some Professional of Artists and Artisans in Karnataka,* Proceedings of the 13th Session of Indian Art History Congress, Guwahati, Assam, 2005.**

2. **ಸಿದ್ದಲಿಂಗಮ್ಮ, ಬಿ.ಜಿ., *ಮಧ್ಯಕಾಲೀನ ಕರ್ನಾಟಕದಲ್ಲಿ ತೆಲ್ಲಿಗರು,* ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು, 2006.**

3. **ಸಿದ್ದಲಿಂಗಮ್ಮ, ಬಿ.ಜಿ. ಮತ್ತು ರಾಜಾರಾಮ ಹೆಗಡೆ, *ಕನ್ನಡ ಶಾಸನಗಳಲ್ಲಿ ಬಿಂಬಿತವಾದಂತೆ ಮಧ್ಯಕಾಲೀನ ಕರ್ನಾಟಕದಲ್ಲಿ ತೆಲ್ಲಿಗರು,* ಶಾಸನ ಅಧ್ಯಯನ, ಸಂಪುಟ 3, ಸಂಚಿಕೆ 2, ಜುಲೈ-ಡಿಸೆಂಬರ್ 2006.**

4. **ಸಿದ್ದಲಿಂಗಮ್ಮ, ಬಿ.ಜಿ., *ಪ್ರಾಚೀನ ಸಾಹಿತ್ಯ ಹಾಗೂ ಶಾಸನಗಳಲ್ಲಿ ಸಾಲಿಗರು,* ಕರ್ನಾಟಕ ಇತಿಹಾಸ ಅಕಾಡೆಮಿ 20ನೇ ವಾರ್ಷಿಕ ಸಮ್ಮೇಳನ, ಸೆಪ್ಟಂಬರ್ 9, 10, 11, ಮೈಸೂರು ಜಿಲ್ಲೆ ನಂಜನಗೂಡಿನಲ್ಲಿ ಮಂಡಿಸಲಾದ ಲೇಖನ.**

5. **ಸಿದ್ದಲಿಂಗಮ್ಮ, ಬಿ.ಜಿ., *ಮಧ್ಯಕಾಲೀನ ಕೈಗಾರಿಕೆಯಾಗಿ ಕಮ್ಮಾರಿಕೆ,* ಕರ್ನಾಟಕ ಇತಿಹಾಸ ಕಾಂಗ್ರೆಸ್‌ನ 18ನೇ ವಾರ್ಷಿಕ ಸಮ್ಮೇಳನ, ಅಕ್ಟೋಬರ್ 26,27, ಮತ್ತು 28ರಂದು ಹಂಪಿಯಲ್ಲಿ ನಡೆದಿದ್ದು ಅಲ್ಲಿ ಮಂಡಿಸಲಾದ ಲೇಖನ.**

6. **ಸಿದ್ದಲಿಂಗಮ್ಮ, ಬಿ.ಜಿ., *ಎಂಟುಹಿಟ್ಟು,* ಕನ್ನಡ ವಿಷಯ ವಿಶ್ವಕೋಶ - ಇತಿಹಾಸ ಮತ್ತು ಪುರಾತತ್ವ : ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮಾನಸ ಗಂಗೋತ್ರಿ, ಮೈಸೂರು ಇಲ್ಲಿಗೆ ಕಳುಹಿಸಲಾದ ಲೇಖನ.**

7. **ಸಿದ್ದಲಿಂಗಮ್ಮ, ಬಿ.ಜಿ., *ಶಿವಮೊಗ್ಗ ಜಿಲ್ಲೆಯ ಶಾಸನೋಕ್ತ ಕುಶಲ ಕರ್ಮಿಗಳು (10-14ನೇ ಶ),* ರಾಜ್ಯ ಪುರಾತತ್ವ ಇಲಾಖೆ, ಶಿವಮೊಗ್ಗದಲ್ಲಿ ಹಮ್ಮಿಕೊಂಡ ವಿಚಾರ ಸಂಕೀರ್ಣದಲ್ಲಿ ಮಂಡಿಸಲಾದ ಲೇಖನ.**